# ಸಂತ್ರಾಸಿನಿ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
ಕಡಿದಾಳ್ ನಿಲಯ, 359, 14ನೇ ಅಡ್ಡರಸ್ತೆ
ಸದಾಶಿವನಗರ, ಬೆಂಗಳೂರು - 560 080

ಸಂತ್ರಾಸಿನಿ

# ಸಂತ್ರಾಸಿನಿ

ಮಲ್ಲಿಕಾ

ಸತ್ಸಂಗತ್ವೇ ನಿಸ್ಸಂಗತ್ವಂ
ನಿಸ್ಸಂಗತ್ವೇ ನಿರ್ಮೋಹತ್ವಂ ।
ನಿರ್ಮೋಹತ್ವೇ ನಿಶ್ಚಲ ತತ್ತ್ವಂ
ನಿಶ್ಚಲತತ್ತ್ವೇ ಜೀವನ್ಮುಕ್ತಿಃ ॥

SANTRASINI in Kannada by "Mallika"
Published by Lakshmi Prakashana,
359, Kadidal Nilaya, 14th Cross, Sadashivanagar
Bangalore-560 080



ಬೆಲೆ : ನಲವತ್ತೆರಡು ರೂಪಾಯಿ

ಮುದ್ರಕರು
**ನ್ಯೂ ಐಡಿಯಾಸ್**
351, 10ನೇ 'ಬಿ' ಮುಖ್ಯರಸ್ತೆ
ಜಯನಗರ
ಬೆಂಗಳೂರು-560 011

॥ ಶ್ರೀ ಬುದ್ಧದೇವ ಪಾದಾರ್ಪಣಮಸ್ತು ॥

# ಸಂತ್ರಾಸಿನಿ

ನೀಳ್ಗತೆ

ಲಕ್ಷ್ಮೀ ಪ್ರಕಾಶನ
359, ಕಡಿದಾಳ್ ನಿಲಯ,
14ನೇ ಅಡ್ಡರಸ್ತೆ, ಸದಾಶಿವನಗರ
ಬೆಂಗಳೂರು-560 080

# ನಿವೇದನೆ

ನಮ್ಮ ಸಾಮಾಜಿಕ ರಂಗದಲ್ಲಿ ಮಹಿಳೆಯರ ಸ್ಥಾನಮಾನ ಅತ್ಯಂತ ಸೀಮಿತ. ಹೆಣ್ಣು ವಿದ್ಯಾವಂತಳಿದ್ದರೂ, ಮೇಧಾವಿಯಾಗಿದ್ದರೂ ಅವಳಿಗೆ ಎಲ್ಲಾ ರಂಗದಲ್ಲಿ ಸ್ವಾತಂತ್ರ್ಯ ಸೊನ್ನೆ. 'ಪಿತಾರಕ್ಷತಿ ಕೌಮಾರೇಭರ್ತಾರಕ್ಷತಿ ಯೌವ್ವನೇ' ಎಂಬುದು ಅಂದಿಂದಿಗೂ ಶಾಸನ ಬದ್ಧ. ಅದೃಷ್ಟವಶಾತ್ ಸಾಹಿತಿಗಳಾದವರು ತಮ್ಮ ತಮ್ಮ ಅನಿಸಿಕೆಗಳನ್ನೋ ದುಃಖವನ್ನೋ ತೋಡಿಕೊಳ್ಳಲು ಶಕ್ತರಾಗಿದ್ದಾರೆ. ಲೇಖನಿಯ ಮೂಲಕ ಎಷ್ಟೆಷ್ಟೋ ಜೀವನ ಚಿತ್ರಗಳು ಬೆಳಕಿಗೆ ಬರುತ್ತಿವೆ....ಮುಂದೆಯೂ ಬರುತ್ತವೆ...ಅದರ ಟೊಳ್ಳು-ಗಟ್ಟಿಗಳನ್ನು ವಿಮರ್ಶಿಸುವಲ್ಲಿ ಪುರುಷವರ್ಗ ತೋರುವ ದೋರಣೆ ರಾಷ್ಟ್ರಬಲ್ಲದು. ಈ ಎಲ್ಲಾ ಅಡೆತಡೆಗಳನ್ನು ದಾಟಿ, ಕಿರಿಕಿರಿಯ ಕಂದಕಗಳನ್ನು ಹರಿಹಾಯ್ದು ಸ್ತ್ರೀ ಮುಂದೆ ಬರಬೇಕಾದರೆ ಶ್ರೀ ಭಗವಂತನ ಸಹಾಯವೇ ಹೊರತು ನಮ್ಮ ಸಮಾಜದಿಂದಲ್ಲ. ನೂರಕ್ಕೋ ಸಾವಿರಕ್ಕೋ ಒಬ್ಬಿಬ್ಬರು ಸೈ ಎನಿಸಿಕೊಂಡರೆ ಅದರಿಂದ ಯಾವ ಪ್ರಯೋಜನ? ಉಪ್ಪಿನ ಬೊಂಬೆಯೊಂದು ಸಾಗರವನ್ನು ಪ್ರವೇಶಿಸಿದಂತೆಯೇ ಸರಿ.

ಈ ಸಮಾಜ ಇಷ್ಟೆ. ಈ ಸಂಸಾರವೂ ಇಷ್ಟೆ. ಎದೆಯಲ್ಲಿ ಕುಕ್ಕುಟ ಧೈರ್ಯತುಂಬಿಕೊಂಡು ಮುಂದುವರಿದರೆ "ಖೆಡ್ಡ ಆಪರೇಶನ್ನಿ"ಗೆ ಒಳಗಾಗುತ್ತೇವೆ ಅಷ್ಟೆ. ಹೆಣ್ಣಾಗಿ ಜನ್ಮ ಎತ್ತುವುದೇ ಪಾಪಕರ್ಮದಿಂದ ಎನಿಸುತ್ತೆ ಎಷ್ಟೋವೇಳೆ. ಇದರ ನಿರ್ಧಾರ ಮತ್ತು ವಿಮರ್ಶೆ ಓದುಗರಿಗೆ ಸೇರಿದ್ದು.

ಈ ಕ್ಷುದ್ರ ಸಾಮಾಜಿಕ ರಂಗದ ಪುಟ್ಟ ಚಿತ್ರವೊಂದನ್ನು ಸಂತ್ರಾಸಿನಿಯ ಮೂಲಕ ಜಗದ ಬೆಳಕಿಗೆ ಇಡುತ್ತಿರುವೆ. ಓದಿ ಒಡಲ್ಗಿಚ್ಚು ಎದ್ದವರು ತೆಗಳಿದರೂ ಸಹೃದಯರು ಮರುಗಬಹುದು ಎನ್ನಿಸುತ್ತೆ ನನಗೆ.

ಸಂವತ್ಸರ
1998

ಇಂತು,
ಮಲ್ಲಿಕಾ

# ಸಂತ್ರಾಸಿನಿ

## ೧

ತುಂತುರು ತುಂತುರು ಮಳೆ. ಬಿಸಿಲು ಮಳೆಗಳ ಸಂಮ್ಮೈತ್ರಿ.

ಕಳೆದ ಮೂರು ದಿನಗಳಿಂದಲೂ ಮಳೆ ಮಂಜಿನ ವಾತಾವರಣ, ಕಿಟಕಿಯಲ್ಲಿ ಮೊಗವಿಟ್ಟು ಹೊರ ಪ್ರಪಂಚವನ್ನೇ ನಿಟ್ಟಿಸುತಿದ್ದಳು ಶ್ಯಾಮಲಾ. ತಂದೆಯ ದುರ್ವರ್ತನೆ, ಶಾಂತಲೆಯ ಮುಗ್ಧದುಗ್ಧ ಜೀವ ದುರ್ವಿಧಿಯ ಆಘಾತಕ್ಕೆ ಸಿಕ್ಕಿ ನರಳಿ ಸಲುಗಿದ ಬಗೆ, ತಾಯಿಯ ಅತೀವ ನಿಸ್ಸಹಾಯಕ ಸ್ಥಿತಿ, ಶರತ್ ಪರಿಸ್ಥಿತಿಯ ಒತ್ತಡದಿಂದ ಉದ್ಧಟತನಕ್ಕಿಳಿದ ಬಗೆ ಒಂದೊಂದು ಚಲನಚಿತ್ರದಂತೆ ಚಿತ್ತಭಿತ್ತಿಯಲ್ಲಿ ಸುಳಿಸುಳಿದಳಿಯಿತು.

ಸಧ್ಯ, ಈ ಸಂಸಾರದ ಪರಿಸ್ಥಿತಿಯಲ್ಲಿ ಬದುಕುವುದಕ್ಕಿಂತ ಸಾವು ಹಿತಕರ ಎಂದು ಯಾವುದೋ ಅಶರೀರವಾಣಿ ಕಿವಿಯ ಸನಿಹದಲ್ಲಿ ಕೂಗಿ ಹೇಳುತ್ತದೆ. ಆದರೆ, ತಂಗಿ ಶಾಂತಲೆಯ ದೀನಾತಿದೀನಸ್ಥಿತಿಯನ್ನು ಸ್ಮರಿಸಿದರೆ ಮನಸ್ಸು ಬಿಸಿಲಟ್ಟಿದ ಮಂಜು. ಚೆನ್ನಾಗಿ ಬೆಳೆದು ಓಡಾಡಿಕೊಂಡಿದ್ದ ಮಗುವಿಗೆ ಪೋಲಿಯೋ ಪಿಶಾಚಿ ಅಂಟಿಕೊಳ್ಳಬೇಕೆ? ಎಡಗಾಲಿನ ಶಕ್ತಿ ಉಡುಗಿದುದರಿಂದ ಅವಳು ಸಂಪೂರ್ಣ ಪರಾವಲಂಬಿ. ಅಮ್ಮನಿಗೆ ಹಗಲೆಲ್ಲಾ ಬಿಡುವಿಲ್ಲದ ಕೆಲಸ. ತಾನು ಅವಳಿಗೆ ಭಾಗಶಃ ಆಧಾರ. ಪಾಪ, ಒಳ್ಳೆಯ ಮಗು. ದುರ್ವಿಧಿ ಕಾಲು ಮುರಿದು ಕೂರಿಸಿತು. ಯಾವ ಜನ್ಮದ ಕರ್ಮವೊ ಈಗ ಬಾಧಿಸುತ್ತಿದೆ. ಈ ಸಂಕಷ್ಟ ಅನುಭವಿಸುವುದಕ್ಕಿಂತ ಅದು ಹುಟ್ಟದಿದ್ದಿದ್ದರೆ ಲೋಕಕ್ಕೆ ಏನೇನೂ ನಷ್ಟವಿರಲಿಲ್ಲ. ಭಗವಂತ ಮಾನವ ಜನ್ಮಕೊಟ್ಟು ನರಕ ಹಿಂಸೆಯನ್ನೂ ಕೊಟ್ಟ. ಅವಳಿಗೋಸ್ಕರ ಏನಾದರೂ ಮಾಡಬೇಕು ಅದಕ್ಕಾಗಿ ಈ ಬದುಕು.

ಅಪ್ಪ ನಿರ್ಲಕ್ಷಿಸಿದರೂ ನಾವು ಮಾಡಿದ್ದು ನಮ್ಮ ಕೈಲಾದ ಪ್ರಯತ್ನ... ಪ್ರಯತ್ನ. ಯಾರ್‍ಯಾರು ಹೇಳಿದ ಔಷಧ-ತೈಲ ಎಲ್ಲಾ ಪ್ರಯೋಗಗಳೂ ಮುಗಿದುವು.

ಯಾವ ಗಳಿಗೆಯಲ್ಲಿ ಭಗವಂತ ದಯೆ ದೋರುತ್ತಾನೋ...ಅದು ಅವನಿಗೇ ಗೊತ್ತು.

ಬದುಕಿನ ಜಾಲದಲ್ಲಿ ಸಿಕ್ಕಿದ ಸಂಸಾರ ದಯಾದಾರ್ಥಿದ್ರ್ಯದಿಂದ ಧೂಳೀಪಟವಾಗಿದೆ. ಮುಂದೆ ಎಂದಾದರೂ ಸರಿಹೋಗುತ್ತದೆಂಬ ನಂಬಿಕೆಯೂ ಈಗೀಗ ಉಳಿದಿಲ್ಲ. ಬದುಕಿರುವತನಕ ಹೋರಾಟ ನಡೆಯಲೇಬೇಕು, ನಡೆಯುತ್ತಿದೆ. ಇದಕ್ಕೆ ಕೊನೆಯೆಂದೋ...ಜೀವನ ಶಾಂತಿ ಇನ್ನೆಂದೋ....ಅಥವಾ ಲಭಿಸುತ್ತೋ ಇಲ್ಲವೋ.... ಈ ಅರ್ಥಹೀನ ಬದುಕಿನ ಜಂಜಡದಲ್ಲಿ ಎಷ್ಟು ಕಾಲ ನರಳಬೇಕೋ... ಅದೇ ಅರ್ಥವಾಗುತ್ತಿಲ್ಲ.

ಎದೆಯಾಳದಿಂದ ನಿಟ್ಟುಸಿರೊಂದನ್ನು ಹೊರಹಾಕಿದಳು ಶ್ಯಾಮಲಾ.

* * *

ಪೋಸ್ಟಿನವ ಹಸಿರು ಲಕೋಟೆಯೊಂದನ್ನು ಕೊಟ್ಟು ಹೋದ. ಆ ಲಕೋಟೆಯನ್ನು ನೋಡಿದ ಕೂಡಲೇ ಅದು ಶಕೀಲಾಳದೆಂದು ಗೊತ್ತು.

''ಅಮ್ಮಾ! ಬಾಂಬೆಯಿಂದ ಶಕೀಲಾ ಕಾಗದ ಬರೆದಿದ್ದಾಳೆ.''

ಆ ಮಾತು ಕೇಳಿ ಮಾಡುತಿದ್ದ ಕೆಲಸವನ್ನು ಅಷ್ಟಕ್ಕೆ ಬಿಟ್ಟು ಹೊರಬಂದಳು ಗೌರೀಮಾ.

''ಏನು ಬರೆದಿದ್ದಾಳೆ ಓದು.''

...ಶ್ಯಾಂ! ಶ್ಯಾಮಲೀ! ನಾನೀಗ ಲೇಬರ್ ಕಮೀಷನರ್ ಆಫೀಸಿನಲ್ಲಿ ಕೆಲಸಕ್ಕೆ ಸೇರಿರುವೆ. ಮೊತ್ತಮೊದಲೇ ಐನೂರು ರೂಪಾಯಿ ಪಗಾರ. ಮುಂದೆ ಎರಡು ಸಾವಿರದವರೆಗೂ ಬರಬಹುದು. ಮನೆ ಕೆಲಸ. ಆಫೀಸ್ ಕೆಲಸ. ಒಂದು ನಿಮಿಷವೂ ಬಿಡುವು ದೊರೆಯುತ್ತಿಲ್ಲ. ನನ್ನ ಕೆಲಸಕ್ಕೆ ಸೇರಲು ಲೋಕೇಶ್ ಒಪ್ಪಿದ್ದೇಕೆ ಗೊತ್ತೆ? ಹಣದ ಆಸೆಯಿಂದ. ಈಗ ನೋಡು, ಮನೆ ಖರ್ಚಿಗೆ ಕೊಡುವ ಹಣದಲ್ಲಿ ನಾನ್ನೂರು ರೂಪಾಯಿಗಳಿಗೆ ಖೋತಾ ಮಾಡಿದ್ದಾರೆ. ಇದೇನು? ಎಂದರೆ, ನಿನಗೆ ಬರುತಲ್ಲಾ ಬಳಸಿಕೊ ಎನ್ನುತ್ತಾರೆ. ಈಗ ನಾನು ಕೆಲಸಮಾಡಲೇ ಬಿಡಲೇ ಹೇಳು? ನಾನು ಕೆಲಸ ಮಾಡುವುದರಿಂದ ತನಗೆ ನಾನೂರು ರೂಪಾಯಿಗಳ ಉಳಿತಾಯ. ಹೋಗಲಿ, ಅದೇನಾದರೂ ಇಡುಗಂಟಾಗಿ ಬ್ಯಾಂಕಿನಲ್ಲಿ ಉಳಿಯುವುದಾದರೆ ಸರಿಯೆ. ಪುರುಷವರ್ಗದ ಮೋಜು ನಿನಗೊತ್ತಿದೆಯಷ್ಟೆ; ಕುದುರೆ ಜೂಜು, ಕುಡಿತ, ಮತ್ತೊಂದು ಮಗದೊಂದು ಹಣವನ್ನು ದೋಚಿಕೊಳ್ಳುತ್ತವೆ. ಕೆಲಸ ಬಿಟ್ಟರೆ ಮುಂದೆ ಸಿಗುವುದುಂಟೇ? ನನಗೀಗ ಉಭಯ ಸಂಕಟ. ಕೆಲಸ ಮಾಡಿದರೂ ಕಷ್ಟ.

ಮಾಡದಿದ್ದರೂ ಕಷ್ಟ. ಹಿಂದೂಸ್ಥಾನದ ಪುರುಷವರ್ಗ ಬಹುತೇಕ ಹೀಗೆಯೇ ಎನಿಸುತ್ತೆ. ಎಲ್ಲೋ ಕೆಲವರಿರುತ್ತಾರೆ ಉತ್ತಮ ವರ್ಗಕ್ಕೆ ಸೇರಿದವರು. ಅವರಿಗೆ ಎಷ್ಟೆಷ್ಟು ಜನ್ಮಗಳ ಸುಸಂಸ್ಕಾರವೋ ದೇವರಿಗೇ ಗೊತ್ತು!

ಸರ್ವೇಗುಣಾಃ ಕಾಂಚನಮಾಶ್ರಯಂತಿ ಎನ್ನುತ್ತದೆ ಸುಭಾಷಿತ. ಅದು ಅಕ್ಷರಶಃ ಸತ್ಯ. ಅಂತಲೇ ಕೆಲಸಕ್ಕೆ ಅಂಟಿಕೊಂಡು ನರಳುತ್ತಿರುವೆ. ಲೋಕೇಶನಿಗೆ ಹೇಳಿ-ಕೇಳಿ ಸಾಕಾಗಿದೆ. ಈಗೀಗ ಕೇಳಿಕೊಳ್ಳಲು ಸಮಯ-ಸಹನೆ ಎರಡೂ ಇಲ್ಲವಾಗಿದೆ. ಕಪಿಲ್-ಕೌಶಿಕ್ ಅಪ್ಪ ಹೇಗಾದರೂ ಇರಲಿ, ನೀವು ಸುಮ್ಮನಿದ್ದು ಬಿಡುವುದು ಲೇಸು ಎನ್ನುತ್ತಾರೆ. ಮಕ್ಕಳಿಗೂ ಗೊತ್ತಾಗಿದೆ ಅವರ ಸ್ವಾರ್ಥತೆ.

ಇನ್ನು ನಿನಗೊಂದು ಮಾತು ಶ್ಯಾಮಲೀ, ನೀನೂ ಎಲ್ಲಾದರೂ ಕೆಲಸಕ್ಕೆ ಸೇರಿಕೋ. ನೀನು ನಾಲ್ಕು ಕಾಸು ಸಂಪಾದಿಸುವಂತಾದರೆ ಸಂಸಾರಕ್ಕೆ ಪೂರಕ. ನೀನು ಇನ್ನೂ ಎರಡು ವರ್ಷ ಓದಿ ಡಿಗ್ರಿ ತೆಗೆದುಕೊಂಡು ಕೆಲಸ ಹಿಡಿಯುವುದೂ ಒಂದೇ, ಈಗಲೇ ಹಿಡಿಯುವುದೂ ಒಂದೇ. ಓದಿ ಸಮಯ ಹಾಳು ಮಾಡುವುದಕ್ಕಿಂತ ಈಗಲೇ ಎಲ್ಲಾದರೂ ಕೆಲಸ ಹಿಡಿ. ಕಾಲೇಜಿನಲ್ಲಿ ಕಳೆಯುವ ಹೊತ್ತು ಆಫೀಸಿನಲ್ಲಿ ಕಳೆದರಾಯಿತು, ನಾನು ಹೀಗೆ ಬರೆದಿದ್ದೇನೆಂದು ಅಪ್ಪನಿಗೆ ಹೇಳು. ಕೆಲಸಕ್ಕೆ ಸೇರಿಕೊಳ್ಳಲು ಒಪ್ಪುತ್ತಾರೆ, ಒಪ್ಪಿದರೆ ಅನುಕೂಲ.

ಶರತ್ ಸರಿಯಾಗಿ ಓದುತ್ತಿದ್ದಾನೆಯೇ? ಕ್ರಿಕೆಟ್ ಹುಚ್ಚಿನಲ್ಲಿ ಅವನು ಓದು ಕೈಬಿಡಲಿಕ್ಕೂ ಸಾಕು. ಅವನ ಮೇಲೆ ಕಣ್ಣಿಟ್ಟಿರು. ಹದ್ದು ಮೀರಿ ವರ್ತಿಸಲು ಬಿಡಬೇಡ. ಓದಿನೊಂದಿಗೆ ಆಟವೂ ಸಾಗಲಿ. ಹುಡುಗು ಬುದ್ಧಿ ಹದಗೆಟ್ಟೀತು. ನಾನು ಕೆಲಸಕ್ಕೆ ಹೋದರೂ ಕಪಿಲ್-ಕೌಶಿಕ್ ನನ್ನ ಅಂಕೆಯಲ್ಲಿದ್ದಾರೆ. ಅದೊಂದು ನನಗೆ ತುಂಬಾ ಸಮಾಧಾನ. ದೇವರು ಮುಂದೆಯೂ ಹೀಗೇ ನಡೆಸಿದರೆ ಸಾಕು. ನನಗೆ ಆಫೀಸಿಗೆ ಹೊತ್ತಾಯಿತು. ಸ್ವಲ್ಪ ಬಿಡುವಿದ್ದಿದ್ದರೆ ಇನ್ನೂ ಮುಂದುವರಿಸುತಿದ್ದೆ. ಇರಲಿ, ಇನ್ನೊಮ್ಮೆ ಎಂದಾದರೂ ಬರೆಯುವೆ. ಹಾಯ್ ಚೀರಿಯೋ......!

* * *

ಸ್ವಾಮಿನಿ ಕಾಗದದ ಒಕ್ಕಣೆಯನ್ನು ಕೇಳಿ ಒಂದೆರಡುಗಳಿಗೆ ಮನದಲೆಗಳು ಸ್ತಬ್ಧವಾದಂತೆ ಮೂಕಮೌನಿಯಾದಳು. ತೆಕ್ಕನೆ ಹೃದಯ ಸಮುದ್ರ ಅಲ್ಲೋಲ ಕಲ್ಲೋಲವಾಯಿತೇನೋ ತಾಳಲಾಗದ ತುಡಿತ ಎದೆಯಾಳದಲ್ಲಿ.

''ಅಮ್ಮಾ! ಭಾವ ಮೊದಲಿಂದಲೂ ನಮ್ಮೊಂದಿಗೆ ಕೂಡಿ ಆಡಿದವನು ಲೋಕಾಚಾರ ತಿಳಿದವನು ಹೀಗಾದರೆ ಹೇಗೆ? ಗಂಡು ಜನ್ಮಕ್ಕೆ ಹಾಳು ಹವ್ಯಾಸಗಳ ನಂಟು. ಅಂತಲೇ ಸ್ತ್ರೀಕುಲಕ್ಕೆ ಕಂಟಕ.''

''ನಿಜ ಮಗಳೇ! ಹೆಂಡತಿಯನ್ನು ಚೆನ್ನಾಗಿ ನೋಡಿಕೊಳ್ಳಬಲ್ಲ ಎಂಬ ಧೈರ್ಯದಿಂದ ಮಗಳನ್ನು ಕೊಟ್ಟೆ ಈಗ ನೋಡಿದರೆ ಸೋದರಿಕೆಯ ಸಂಬಂಧವೂ ಒಂದೇ. ಹೊರಗಣ ಸಂಬಂಧವೂ ಒಂದೇ. ನಮ್ಮ ಜನಾಂಗ ಏಕೆ ಹೀಗಾಗಿದೆ ಹೇಳು?''

''ದೇವರಿಗೇ ಗೊತ್ತು.''

''ಸ್ವಲ್ಪವಾದರೂ ಧರ್ಮಕರ್ಮ ಬೇಡವೇ? ದಯೆ, ದಾಕ್ಷಿಣ್ಯ ಬೇಡವೇ? ಒಳಗೆ-ಹೊರಗೆ ದುಡಿಯುವ ಹೆಣ್ಣಿಗೆ ಕೈತುಂಬ ಸಹಾಯ ಮಾಡುವ ಬದಲು ಹೀಗಾದರೆ ಹೇಗೆ? ಪಾಪ...! ಅವಳಿಗೆ ಎಷ್ಟು ಕಷ್ಟವಾಗಿರಬೇಡ. ಯೋಚಿಸಿ ನೋಡು.'' ಎದೆಯಳಲನ್ನು ಪೂಸಿಕೊಂಡ ದನಿ ಆತಂಕ ಪೂರ್ಣವಾಗಿತ್ತು.

''ಅವಳಿಗೆ ಇಲ್ಲೂ ಸುಖವಿರಲಿಲ್ಲ. ಕಷ್ಟದಿಂದಲೇ ಪೋಸ್ಟಲ್ ಬಿ.ಎ. ಮಾಡಿಕೊಂಡಳು. ಈ ಉಪ್ಪಿನ ಕಾಟ ತಪ್ಪಿಸಿಕೊಂಡಳು ಎಂದುಕೊಂಡರೆ ಬಾಂಡಲಿಯಿಂದ ಬೆಂಕಿಗೆ. ಅವನು ಮನೆಯಲ್ಲಿದ್ದಾಗ ಕಿರುಕುಳ....ಕಿರುಕುಳ. ಹಣಕೊಡದೆ ಹಿಂಸಿಸುತಿದ್ದ, ಹೋಗಲಿ. ಈಗ ಕೆಲಸಕ್ಕೆ ಸೇರಿಕೊಂಡಳು ಇನ್ನಾದರೂ ಸುಖವಾಗಿರಲಿ ಎಂದುಕೊಂಡರೆ ಈಗ ಈ ಹಿಂಸೆ ಛೀ! ಇವರೆಲ್ಲಾ ಏಕೆ ಮನುಷ್ಯರಾಗಿ ಜನ್ಮ ಎತ್ತಿದಾರೋ. ಮಾನವ ಕುಲಕ್ಕೇ ಅವಮಾನ!''

''ನಾವು ಪಡೆದುಕೊಂಡು ಬಂದುದು ಇಷ್ಟೆ. ಏನು ಮಾಡೋಣ. ಎಷ್ಟೋ ಮಂದಿ ಸುಖವಾಗಿ ಮನೆ ಮಠ ಮಾಡಿಕೊಂಡು ಚೆನ್ನಾಗಿ ಬದುಕಿ ಬಾಳುತ್ತಾರೆ. ನಮಗೆ ಹೀಗಾಗಬೇಕಾದರೆ ಇದು ನಮ್ಮ ಗ್ರಹಚಾರವೇ ಇರಬೇಕು!''

''ನೀವು ಪೂರಾ ತಿಳಿದುಕೊಂಡಿಲ್ಲ ಬಿಡಿ. ಎಲ್ಲರ ಮನೆಯ ದೋಸೆಯೂ ತೂತು. ಕೆಲವರದು ಬೆಳಕಿಗೆ ಬರುತ್ತೆ. ಕೆಲವರದು ಇಲ್ಲ. ಆದ್ದರಿಂದ ನಾವು ಸುಖ ಎಂದು ತಿಳಿದುಕೊಳ್ಳುತ್ತೇವೆ. ಸುಖಿಗಳು ಇದ್ದರೂ ತುಂಬಾ ಕಡಿಮೆ. ಕೇವಲ ಶೇಕಡ ಹತ್ತರಷ್ಟು ಎಂದೇನು. ನನ್ನ ಜೊತೆಯ ಹುಡುಗಿಯರ ಮುಖದಲ್ಲಿ ಯಾವತ್ತೂ ಕಳೆಯೇ ಇಲ್ಲ. ಎಲ್ಲರಿಗೂ ಒಂದಲ್ಲ ಒಂದು ಗೋಳೋಗೋಳು. ಅವರ ಗೋಳನ್ನು ಕೇಳಿದಾಗ ನಮ್ಮದು ಹೆಚ್ಚು ಕಾಣಿಸುತ್ತಿರಲಿಲ್ಲ.''

ಮಗಳ ವ್ಯಾಖ್ಯಾನ ಮನವನ್ನು ಮುಟ್ಟಿತು. ಗೌರೀಮಾ ಸುಮ್ಮನಾದಳು. ಮುಖಬಿಂಬ ಪರಿಮ್ಲಾನವಾಯಿತು. ಒಳಗಣ ಕೆಲಸವನ್ನು ನೆನೆದು ಒಳಹೋದರೆ ಕಸ-ಮುಸುರೆ ಕೈಬೀಸಿ ಕರೆಯುತ್ತಿವೆ. ಎಷ್ಟು ಮಾಡಿದರೂ ಮುಗಿಯದ ಕೆಲಸ. ನಾಗರಿಕ ಸೌಕರ್ಯವಿಲ್ಲದ ಬೀಳಿನ ಬಾಳು. ಬಾಡಿಗೆ ಮುರುಕು ಮನೆ. ರಿಪೇರಿ

ಕಾಣದ ಒಳ ಪ್ರಪಂಚ ಅಸಹ್ಯ. ಬಚ್ಚಲ ಮೋರಿಯಲ್ಲಿ ನೀರು ಹೊರ ಹೋಗದೆ ಅಲ್ಲಲ್ಲೇ ತಂಗಿ ದುರ್ವಾಸನೆಗೆ ಕಾರಣ.

ಗಂಗಾರಾಂ ಕಣ್ಣಿದ್ದೂ ಕುರುಡು. ಅವನು ಸಮಾಧಾನ ಸ್ಥಿತಿಯಲ್ಲಿದ್ದಾಗ ಗೌರೀಮಾ ತನ್ನ ಸಂಕಷ್ಟವನ್ನು ತೋಡಿಕೊಂಡಿದ್ದಾಳೆ ಕೂಡ. ಅವನಿಗೆ ಅದರ ಪರಿವೆ ಇದ್ದರಷ್ಟೆ. ಉದಾಸೀನ...ಸಂಸಾರದ ಕಡೆ ಯಾವತ್ತೂ ಉದಾಸೀನವೇ-ಯಾವೊಂದು ಸಂಕಷ್ಟವೂ ತನ್ನ ಬಳಿ ಸುಳಿಯಬಾರದು. ಮನೆಗೆ ಅಷ್ಟಿಷ್ಟು ಕಾಳು ಕಡ್ಡಿ ತಂದರೆ ತನ್ನ ಕರ್ತವ್ಯ ಮುಗಿಯಿತು.....ಎಂಬ ಧೋರಣೆ.

* * *

ಶಾಂತಲಾ ಎಚ್ಚರವಾದಾಗ ಶಕೀಲೆಯ ಕಾಗದ ಕಂಡು ಬಂತು.

''ಅಕ್ಕ ಕಾಗದ ಬರೆದಿದ್ದಾಳೆಯೇ ಶ್ಯಾಂ?''

''ಹೌದು ಮರಿ...!''

''ಇಲ್ಲಿ ಕೊಡು ನಾನೂ ನೋಡುವೆ.''

''ಎಬ್ಬಿಸಿ ಕೂಡಿಸಲೇ?''

''ಆಗಲಿ ಶ್ಯಾಂ ಮಲಗಿದ್ದರೆ ಓದಿಕೊಳ್ಳುವುದು ಕಷ್ಟ.''

ಶ್ಯಾಮಲಾ ಮೆಲ್ಲಗೆ ಅವಳನ್ನು ಹಿಡಿದೆತ್ತಿ ಕೂಡಿಸಿ ಕಾಗದವನ್ನು ಕೈಗೆ ಕೊಟ್ಟಳು. ಶಾಂತಲೆ ಆ ಕಾಗದವನ್ನು ಕೈಕೊಂಡು ಆನಂದದಿಂದ ಓದತೊಡಗಿದಳು. ಅಕ್ಕ-ಭಾವ-ಮಕ್ಕಳನ್ನು ನೋಡದೆ ಎಷ್ಟೋ ವರ್ಷಗಳೇ ಆದುವು. ಕಳೆದ ವರ್ಷ ಶಕೀಲಾ ಎಲ್ಲರೂ ಇದ್ದ ಫೋಟೋ ಕಳುಹಿಸಿದ್ದಳು. ಅವರ ಸಂದರ್ಶನ ಅದರಿಂದಲೇ. ಕಪಿಲ್-ಕೌಶಿಕ್ ಈಗ ಎಷ್ಟು ಎತ್ತರವಾಗಿದ್ದಾರೆ. ಬೊಂಬಾಯಿ ಯಲ್ಲಿದ್ದು ಗುಜರಾತಿ-ಮರಾಟಿ ಭಾಷೆಗಳನ್ನು ಕಲಿತಿದ್ದಾರೆ. ಚೆನ್ನಾಗಿ ಓದುವ ಮಕ್ಕಳು. ನನಗೆ ಯಾವ ಭಾಗ್ಯವೂ ಇಲ್ಲ. ತುಂಬಾ ದುರದೃಷ್ಟದ ಹುಡುಗಿ. ಶಾಲೆಗೆ ಹೋಗುತಿದ್ದ ನನಗೆ ಮೂಲೆ ಹಿಡಿಸಿದ ದೇವರು ಇನ್ನೆಷ್ಟು ಕ್ರೂರಿಯೋ.....

ಎಳೆಯ ಮನಸ್ಸು ಏನೆಲ್ಲಾ ಯೋಚಿಸಿತೋ. ತಕ್ಷಣೆ ಕಣ್ಣುಗಳು ತುಂಬಿ ಬಂದುವು. ಓದಲು ಅಕ್ಷರಗಳೇ ಕಾಣವು. ಟವಲ್ಲಿನ ಅಂಚಿನ ತುದಿಯಿಂದ ಕಂಬನಿಯನ್ನು ತೀಡಿಕೊಂಡು ಕಾಗದ ಕೈಕೊಂಡರೆ ಮತ್ತೂ ಕಣ್ಣಿನಲ್ಲಿ ಕಂಬನಿ ತುಂಬಿತು.

ಅವಳನ್ನು ನೋಡಿ ಕರುಣೆಯಿಂದ ಮೈದಡವಿ ಕಂಬನಿಯನ್ನು ತೀಡಿ ಸಂತೈಸಿ ಮುದ್ದುಗೈದು ''ಏಕೆ ಶಾಂತೀ ಕಣ್ಣಿನಲ್ಲಿ ನೀರು?''

''ಏನಿಲ್ಲ....''

''ಏನಾಯ್ತು, ಏಕೆ ಅಳುತ್ತಿ?''

''ಎಲ್ಲರೂ ಸರಿಯಾಗಿರುವಾಗ ನಾನೊಬ್ಬಳು ಏಕೆ ಹೀಗಾದೆ....? ಏನು ತಪ್ಪು ಮಾಡಿದೆ ಹೇಳು.''

''ತಪ್ಪೂ ಇಲ್ಲ; ಏನೂ ಇಲ್ಲ. ನಮ್ಮ ನಮ್ಮ ಕರ್ಮಕ್ಕೆ ಏನು ಮಾಡೋಣ ಹೇಳು? ಸುಮ್ಮನೆ ದುಃಖಿಸಿ ಫಲವಿಲ್ಲ. ಏನು ಪರಿಹಾರ ಕಂಡು ಕೊಳ್ಳಬೇಕೋ ಅದನ್ನು ಕುರಿತು ಚಿಂತಿಸುವುದೇ ಹೊರತು ಅಳುವುದರಿಂದ ಪ್ರಯೋಜನವಿಲ್ಲ. ನೀನು ನನ್ನ ಸ್ವೀಟ್ ಶಾಂತಿ...''

''ನಾನು ಶಾಲೆಗೆ ಹೋಗಿ ಕಲಿಯಬೇಕು. ಕಪಿಲ್-ಕೌಶಿಕ್ ಬೇರೆ ಬೇರೆ ಭಾಷೆಗಳನ್ನು ಕಲಿತಿದ್ದಾರೆ ನನಗೆ ಏನೂ ಇಲ್ಲ. ದಿನವೂ ಹೀಗೆ ಮೂಲೆಯಲ್ಲಿ ಕುಳಿತಿರುವುದೆಂದರೆ ಎಷ್ಟು ಕಷ್ಟ ಅಕ್ಕಾ...? ಮೊದಮೊದಲು ನನ್ನ ಗೆಳತಿಯರು ಆಗಾಗ್ಗೆ ಬರುತಿದ್ದರು. ಈಗ ಯಾರೂ ಇಲ್ಲ.''

''ನಾನಿಲ್ಲವೇ ನಿನ್ನ ಜೊತೆಗೆ? ನಿನಗೆ ಪಾಠ ಹೇಳೋಲ್ಲವೇ? ಕತೆ ಹೇಳೋಲ್ಲವೇ? ಕಾಲೇಜಿನಲ್ಲಿ ನಡೆದ ಸಂಗತಿ ತಿಳಿಸುವುದು ನಿನಗೇ ಮೊದಲು... ನೀನು ಎಂದರೆ ನನಗೆ ಬಲು ಪ್ರೀತಿ. ಇಲ್ಲಿ ನಿನಗಿಂತ ಚಿಕ್ಕವರು, ನಿನಗಿಂತ ಮುದ್ದಿನವರು ಯಾರಿದ್ದಾರೆ ಹೇಳು? ಇಷ್ಟು ನೋಡಿಕೊಳ್ಳುತಿದ್ದರೂ ನಿನ್ನ ಕಣ್ಣಿನಲ್ಲಿ ನೀರು. ಯಾವಾಗಲೂ ಗೆಲುವಾಗಿರಬೇಕು. ಗೆಲುವಾಗಿಲ್ಲದಿದ್ದರೆ ಖಾಹಿಲೆ ಹರಿಯುವುದಿಲ್ಲ. ಕೇರಳ ಪಂಡಿತರ ತೈಲ ನಿನಗೆ ಸಹಾಯ ಮಾಡಬಹುದೆಂದು ನನಗೆ ನಂಬಿಕೆ. ಸದಾ ದೇವರನ್ನು ಧ್ಯಾನಿಸು. ಅದರಿಂದ ನಿನಗೆ ಸಹಾಯವಾಗಬಹುದು. ಅದೆಲ್ಲಾ ಬಿಟ್ಟು ಬಿಟ್ಟು ಅಳುವುದೇಕೆ? ನೀನು ಎಲ್ಲರಂತೆ ಸ್ಕೂಲಿಗೆ ಹೋಗಿದ್ದರೆ ನಮಗೆ ತುಂಬ ಸಂತೋಷವೇ ಇತ್ತು. ಏನು ಮಾಡೋಣ? ಇದು ನಮ್ಮ ಶಕ್ತಿಗೆ ಮೀರಿದ್ದು. ಯಾವುದನ್ನು ನಾವು ಸರಿಪಡಿಸಿಕೊಳ್ಳಲಾರೆವೋ ಅದನ್ನು ಸಹಿಸಿಕೊಳ್ಳಲೇಬೇಕು. ಇಂದು ನಿನಗೆ ಲೈಬ್ರರಿಯಿಂದ ಕತೆ ಪುಸ್ತಕ ತಂದು ಕೊಡುವೆ.''

''ಆಗಲಿ ಅಕ್ಕಾ!'' ಒಡಲಾಳದಿಂದ ಹೊರ ಬಿತ್ತು ದನಿ.

* * *

ಶಾಂತಲಾ ಅಕ್ಕನ ಕಾಗದವನ್ನು ಪೂರ್ತಿ ಓದಿಕೊಂಡರೂ ಎಲ್ಲಿಯೂ ತನ್ನ ಹೆಸರಿಲ್ಲ. ನಾನು ಮೂಲೆ ಸೇರಿ ಏಳೆಂಟು ತಿಂಗಳಾಯಿತು. ಈಗಾಗಲೇ ಅವಳಿಗೆ ತಾತ್ಸಾರ. ಸಧ್ಯ, ಶ್ಯಾಮಲಾ-ಅಮ್ಮ ಇಬ್ಬರೇ ನನ್ನನ್ನು ಪ್ರೀತಿಯಿಂದ

ನೋಡಿಕೊಳ್ಳುತ್ತಿರುವುದು. ಇನ್ನಾರಿಗೂ ನನ್ನ ಮೇಲೆ ಕರುಣೆ ಪ್ರೀತಿ ಇಲ್ಲವೇ ಇಲ್ಲ. ಅಪ್ಪ ಕಣ್ಣಿದ್ದೂ ಕುರುಡು. ಒಂದಿನ ಔಷಧಿ, ಮತ್ತೊಂದು, ಮಗದೊಂದು ತಂದುಕೊಟ್ಟವನೇ ಅಲ್ಲ. ತಾನು-ತನ್ನ ಮೋಜು ಮಾತ್ರ ತನಗೆ ಗೊತ್ತು. ವ್ಯಕ್ತಿ ಇಷ್ಟೊಂದು ನಿಕೃಷ್ಟನಾದರೆ ಅಂತಹ ಬದುಕಾದರೂ ಏಕೆ ಬೇಕು? ಭಗವಂತ ನನ್ನ ಪ್ರಾಣ ತೆಗೆದುಕೊಂಡಿದ್ದರೂ ಒಳ್ಳೆಯದಿತ್ತು. ಹೀಗೆ ಕಾಲು ಮುರಿದು ಕೂರಿಸು ವುದಕ್ಕಿಂತ....

ಆ ಯೋಚನೆ ಬಂದಾಗ ಕಣ್ಣುಗಳಲ್ಲಿ ಫಳಕ್ಕನೆ ನೀರಾಡಿತು. ಶ್ಯಾಮಲಾ ಕಂಡರೆ ನೊಂದುಕೊಳ್ಳುವಳೆಂದು ತಕ್ಷಣ ಒರಿಸಿಕೊಂಡಳು. ಈಚೆಗೆ ಹೊಸ ಟವಲ್ಲೊಂದನ್ನು ತಂದುಕೊಟ್ಟು ಹೇಳಿದಳು ಶ್ಯಾಮಲಾ ''ನಿನ್ನ ನೋಡಲು ಯಾರಾದರೂ ಬರುತ್ತಿರುತ್ತಾರೆ. ಈ ಹೊಸ ಟವಲ್ಲು ನಿನ್ನ ಬಳಿ ಇರಲಿ.''

ಆ ಪುಟ್ಟ ಟವಲ್ಲಿನ ಮಧ್ಯೆ ಒಂದು ಗುಲಾಬಿ ಹೂ, ಎಲೆ ಮೊಗ್ಗುಗಳೂ ಇವೆ. ನಿಜಕ್ಕೂ ಅದು ಆಕರ್ಷಕವಾದ ಚಿತ್ರ. ಅದನ್ನು ನೋಡುತಿದ್ದರೆ ಮನಸ್ಸಿಗೆ ಆನಂದ ಮೂಡುತ್ತದೆ. ಶ್ಯಾಮಲಾ ತಂಗಿಗಾಗಿ ಏನಾದರೂ ತಂದುಕೊಟ್ಟು ಉಪಚರಿಸು ತ್ತಾಳೆ. ಪರೀಕ್ಷೆಗಾಗಿ ಓದಬೇಕಾಗಿದ್ದರೂ ಅವಳು ನೀಡುವ ಸಹಕಾರ ವಿಶೇಷವೇ.

ಶಾಂತಲಾ ದುಃಖ ಸಹಿಸುವುದು ಅಕ್ಕನಿಗಾಗಿ. ಅಕ್ಕ ಕಾಲೇಜಿಗೆ ಹೋದಳೆಂದರೆ ಹೊದ್ದಿಕೆಯ ಮರೆಯಲ್ಲಿ ಕಂಬನಿಯ ಕೋಡಿ ಹರಿಯುತ್ತದೆ, ಗಂಗೆಯಾಗಿ.... ಯಮುನೆಯಾಗಿ.

## ೨

ಗಂಗಾರಾಂ ಹಾಸಿಗೆಯಿಂದೆದ್ದು ಮುಖಮಾರ್ಜನ ಮಾಡುವ ಮುನ್ನ ಕಾಫಿಯ ಆರಾಧನೆ ಆಗಲೇಬೇಕು. ಒಳಗೆ ಅದರ ಸಾಮಗ್ರಿ ಇದೆಯೋ ಇಲ್ಲವೋ ಅದರ ಪರಿವೆ ಈ ಬಳಿಯಲ್ಲಿ ಸುಳಿಯುವುದಿಲ್ಲ. ತೆಗೆದುಕೊಳ್ಳುವ ಅಲ್ಪಸ್ವಲ್ಪ ಹಾಲು ಸಕ್ಕರೆ ತನಗೇ ಮೀಸಲು. ಆದರೂ, ಅವನ ಕೋಪತಾಪ ಹಿಂಗುವುದು ಮನೆಯ ಮೆಟ್ಟಿಲು ಇಳಿದ ಮೇಲೆಯೇ.

ಶಾಂತಲಾ ಕೊನೆಯವಳೆಂದು ಅವಳು ಓಡಾಡಿ ಬರುತಿದ್ದಾಗ ಮುದ್ದಿಸು ತಿದ್ದುದುಂಟು. ಮಗು ಮೂಲೆ ಸರಿದ ಮೇಲೆ ಅವಳ ಕಡೆ ನಿರ್ಲಕ್ಷ್ಯ ತಂದೆಯಾದ ಗಂಗಾರಾಮನಿಗೆ.

"ಹೀಗಾಗುವುದಕ್ಕಿಂತ ಸತ್ತಿದ್ದರೆ ಒಳ್ಳೆಯದಿತ್ತು" ಎಂದು ಮೇಲಿಂದ ಮೇಲೆ ಅನ್ನುವ. ಕಂಡರೂ ಕಾಣದಂತೆ ಇದ್ದು ಬಿಡುವ. ಆ ಚುಚ್ಚು ಮಾತುಗಳು ಎದೆಯಾಳದಲ್ಲಿ ಕೈಯಾಡಿಸುತ್ತವೆ.

ಗೌರೀಮಾ ಅವಳನ್ನು ಕರೆತಂದು ನಡುಮನೆಯಲ್ಲಿ ಕುಳ್ಳಿರಿಸಿ ತನ್ನ ಕೆಲಸವನ್ನು ಗಮನಿಸುತ್ತ, ಆಗಾಗ ಮಗಳನ್ನೂ ಮಾತಾಡಿಸುತ್ತ ಅವಳ ಬೇಕುಬೇಕಾದ ಅಗತ್ಯವನ್ನೂ ಪೂರೈಸುವಳು. ಆ ತಾಯಿಯ ಕೆಲ ಕಾರ್ಯಗಳನ್ನು ಗಮನಿಸಿದರೆ ಅಮ್ಮನಿಗೆ ಎಷ್ಟು ಕಷ್ಟವಿದೆ ಎಂದು ತನ್ನಲ್ಲೇ ನೊಂದುಕೊಳ್ಳುವಳು, ಶಾಂತಲಾ

"ಅಮ್ಮಾ.....!''

ಅಡಿಗೆ ಮನೆಯಿಂದಲೆ ಕೇಳಿದಳು ತಾಯಿ "ಏನಮ್ಮಾ?"

"ಅಕ್ಕಿ ಅರಿಸುವುದಿದ್ದರೆ ತಟ್ಟೆಗೆ ಹಾಕಿ ಕೊಡಮ್ಮಾ, ನಾನಿಷ್ಟು ಆರಿಸಿ ಕೊಡುವೆ."

"ಅಯ್ಯೋ! ನಿನಗೇಕಮ್ಮಾ ಕಷ್ಟ. ನೀನೇ ತುಂಬಾ ಇಳಿದು ಹೋಗಿದ್ದಿ. ಇದರ ಮೇಲೆ ಕೆಲಸ ಮಾಡುವುದೇ? ನಿನ್ನ ನೋಡಿದರೆ ನನಗೆ ಒಡಲೆಲ್ಲ ಸಂಕಟ. ನಿನಗೆ ಟಾನಿಕ್ಕಾಗಲೀ, ಪೌಷ್ಠಿಕ ಆಹಾರವಾಗಲಿ ಇಲ್ಲವೇ ಇಲ್ಲ. ನೀನು ಚೇತರಿಸಿಕೊಳ್ಳುವುದು ಹೇಗೋ ನನಗದೇ ತುಂಬಾ ಚಿಂತೆಯಾಗಿದೆ. ನೀನೊಮ್ಮೆ ಚೆನ್ನಾಗು. ಅದೇ ನನಗೆ ದೊಡ್ಡ ಉಪಕಾರ."

"ಅದು ನನ್ನ ಕೈಲುಂಟೇ?"

"ಇಲ್ಲ, ಮಗೂ! ಅದೇ ದೊಡ್ಡ ಕಷ್ಟ."

"ಶ್ಯಾಂ ಹೇಳ್ತಾಳೆ, ದೇವರನ್ನು ಪ್ರಾರ್ಥನೆ ಮಾಡು ಒಳ್ಳೆಯದು....(ನನ್ನ ಪುಸ್ತಕದೊಳಗೆ ಗಣಪತಿ ಫೋಟೋ ತಂದಿಟ್ಟು) ದಿನಾ ಬೆಳಿಗ್ಗೆ ಎದ್ದಾಗ ಚಿತ್ರನೋಡಿ ಪ್ರಾರ್ಥನೆ ಮಾಡು ಅಂತ. ನಾನು ಯಾವುದನ್ನೂ ಬಿಟ್ಟಿಲ್ಲ. ಕುಳಿತಲ್ಲೇ ಕುಳಿತು ಮಾಡುವುದು ಅದೇ. ಆದರೂ, ದೇವರಿಗೆ ಕರುಣೆಯಿಲ್ಲ ಬಿಡಿ. ಅವನಿಗೆ ಹೀಗಿರಿಸುವುದೇ ಇಷ್ಟವೇನೋ...."

ಗೌರೀಮಾ ಏನೂ ಹೇಳಲಿಲ್ಲ ನಿಟ್ಟುಸಿರೊಂದು ಹೊರಬಿತ್ತು, ಮಾತೃಹೃದಯವನ್ನು ಕೋರೈಸಿ ಹೊರಬಂದಂತೆ.

ತಾಯಿ ತನ್ನ ಕೆಲಸದ ಕಡೆ ಗಮನ ಕೊಡುತ್ತಲೂ ಪುಸ್ತಕವನ್ನು ಕೈಕೊಂಡಳು ಶಾಂತಲಾ.

ಗಂಟೆ ಒಂಭತ್ತೂವರೆ ಹೊಡೆಯಿತು. ಗಂಗಾರಾಂ ಕೊಠಡಿಯಿಂದ ಹೊರಬಿದ್ದ. ಒಳಗಡೆಯಿಂದ ಕಾಫಿಬಸಿಯನ್ನು ತಂದು ಮುಂದೆ ಯಾಂತ್ರಿಕವಾಗಿ ನೀಡಿ ಪುನಃ

ಅಡಿಗೆಮನೆ ಸೇರಿದಳು ಗೌರೀಮಾ. ಅವಳ ಬದುಕಿನಲ್ಲಿ ಯಾಂತ್ರಿಕವಾಗಿ ದುಡಿಯುವುದು ಕ್ಲುಪ್ತಕಾಲಕ್ಕೆ ಸರಿಯಾಗಿ ಪತಿಯ ಪ್ರತಿಯೊಂದು ಅಗತ್ಯವನ್ನು ಪೂರೈಸುವುದು ನಿತ್ಯಕ್ರಮ. ಒಂದಿನವಾದರೂ ಪ್ರೀತ್ಯಾದರದಿಂದ ಕುಳಿತು ಮಾತಾಡಿದ್ದು ಇಲ್ಲವೇ ಇಲ್ಲ. ಸಂಸಾರಿಕ ವ್ಯವಹಾರವನ್ನು ಕುರಿತು ಚರ್ಚಿಸಿದ್ದಾಗಲೀ ಮಕ್ಕಳ ಅಗತ್ಯವನ್ನು ಕುರಿತು ಹೇಳಿ-ಕೇಳುವುದಾಗಲೀ ಸಾಧ್ಯವಾಗದ ಮಾತು. ಗೌರೀಮಾ ಆ ಎತ್ತರಕ್ಕೆ ಏರಿದವಳಲ್ಲ ಎಂದೇನೂ ಹೇಳುವಂತಿಲ್ಲ. ಆದರೆ, ಆ ಧೂರ್ತಪತಿಯ ಮುಂದೆ ಸೊಲ್ಲೆತ್ತಿದರೆ ಸತ್ಪರಿಣಾಮಕ್ಕಿಂತ ದುಷ್ಪರಿಣಾಮವೇ ಹೆಚ್ಚು ಅಂತಲೇ ಅವಳು ಹೇಳಿ-ಕೇಳಿಕೊಳ್ಳುವ ಅಗತ್ಯ ಬಿದ್ದಾಗಲೂ ಬಾಗಿಲ ಮರೆಯಿಂದಲೋ ಒಳಗಡೆಯಿಂದಲೋ ವಿಷಯವನ್ನು ಹೊರಹಾಕುವುದೇ ರೂಢಿ. ಗಂಗಾರಾಂ ಅದಕ್ಕೆ ವಿರುದ್ಧ ವೇನೂ ಅಲ್ಲ. ಅವನು ಜೀವನದ ಸ್ವರೂಪವನ್ನಾಗಲೀ ಪವಿತ್ರತೆಯನ್ನಾಗಲೀ ಅರಿತು ಕೊಂಡವನೇ ಅಲ್ಲ. ಸ್ವಾರ್ಥ-ದರ್ಪ ಎರಡೂ ಹುಟ್ಟುಗುಣಗಳು. ಅವುಗಳ ಮುಖೇನ ನಿರ್ದಯದಿಂದ ಜೀವನ ಜಹಜಿನ ಚುಕ್ಕಾಣಿ ಹಿಡಿದಿದ್ದ.

ಕಾಫಿ ಹೀರಿ ಖಾಲಿಲೋಟೆಯನ್ನು ಕಿಟಕಿಯ ಮೇಲಿಟ್ಟು "ಬಾಗಿಲು ಮುಚ್ಚಿಕೋ ಗೌರೀ!" ಎಂದು ಕೂಗಿ ಹೇಳಿ ಹೊರಬಿದ್ದ. ನಡುಮನೆಯಲ್ಲಿ ಪುಸ್ತಕ ಹಿಡಿದಿದ್ದ ಮಗಳಕಡೆ ಕಣ್ಣು ಹೊರಳಿಸಲಿಲ್ಲ. ತಂದೆಯ ನಿರ್ಲಕ್ಷ್ಯವನ್ನು ತಿಳಿದುಕೊಂಡಾಗಿನಿಂದಲೂ ಶಾಂತಲಾ ಒಮ್ಮೆಯೂ ಆತನ ಲಕ್ಷ್ಯವನ್ನು ಸೆಳೆಯುವ ಪ್ರಯತ್ನವನ್ನು ಮಾಡಲಿಲ್ಲ. ನಿದ್ದೆಯ ಸೋಗು ಅಥವಾ ಓದುವ ನಟನೆಗಳಿಂದ ಸದ್ದಿಲ್ಲದಂತೆ ಇರುವುದು ಅನುದಿನದ ರೂಢಿ.

ಅವನು ದಡದಡನೆ ಮೆಟ್ಟಿಲಿಳಿದು ಹೋದನೆಂದರೆ ಬಿಗಿಹಿಡಿದ ಉಸಿರು ಹಾಯಾಗಿ ಹರಿದಾಡುತ್ತದೆ; ತಾಯಿ ಮಗಳು ಇಬ್ಬರಿಗೂ.

ಶರತ್....! ಅವನು ತಂದೆಯಂತೆಯೇ ದರ್ಪಿಷ್ಟನಾದರೂ ಚತುರ.

* * *

ಅವನು ಕ್ರಿಕೆಟ್ ಮಂಡಲಿಯ ಬಾಲ ಹಿಡಿದಿರುವುದರಿಂದ ಪಾಠಕ್ಕೆ ಅನುಕ್ರಮವಾಗಿ ಗಮನ ಕೊಡುವುದಿಲ್ಲವೆಂದು ಉಪಾಧ್ಯಾಯರ ದೂರು. ಹದಿಹರೆಯದ ಹುಡುಗ ತಂದೆ-ತಾಯಿಗಳ ಮಾತಿಗೂ ನಿರ್ಲಕ್ಷ್ಯ; ಮಾಸ್ಟರ ದೂರಿಗೂ ನಿರ್ಲಕ್ಷ್ಯ.

ಶ್ಯಾಮಲಾ ತಮ್ಮನನ್ನು ಕುರಿತು ರಮಿಸುವ ದನಿಯಲ್ಲಿ "ಏನಪ್ಪಾ, ಶರತ್! ಹೀಗಾದರೆ ಹೇಗೆ? ಮಾಷ್ಟರಿಂದ ದೂರು ಎಂದರೆ ಅವಮಾನವಲ್ಲವೇ? ಯಾವತ್ತೂ

ಮುಂದುವರಿಯಬೇಕೇ ವಿನಾ ಹಿಂದುಳಿಯಬಾರದು. ನೀನು ಮಂಕುದಿಣ್ಣೆಯಲ್ಲ. ಒಳ್ಳೆ ಬುದ್ಧಿವಂತನಾದ ಹುಡುಗ. ರಸವತ್ತಾದ ಹಣ್ಣಿನಂತಿದ್ದಿ. ವಿದ್ಯೆಯಲ್ಲೇಕೆ ಹಿಂದುಳಿಯುತಿದ್ದಿ? ವಿದ್ಯೆ ಇಲ್ಲದೆ ಜ್ಞಾನ ಸಂಪಾದನೆಯಾಗುತ್ತದೆಯೇ? ತಿಳಿದೂ ತಿಳಿದೂ ಏಕೆ ಹಿಂದೆ ಬೀಳುತ್ತಿ?''

''ಶ್ಯಾಂ, ಇಲ್ಲಿ ಕೇಳು. ನಾನು ಅನೇಕ ಗೇಮ್ಸ್‌ಗಳಲ್ಲಿ ಭಾಗವಹಿಸುವುದು ನಿನಗೆ ಗೊತ್ತಷ್ಟೆ? ಜೀವನಕ್ಕೆ, ಮುಂದೆ ಒಂದಲ್ಲ, ಒಂದು ದಾರಿ ಕಂಡುಕೊಳ್ಳುವುದು ನನಗೊತ್ತು. ಅಪ್ಪನಂತೆ ಈ ಮುರುಕಲು ಬಾಡಿಗೆ ಮನೆಯಲ್ಲಿ ಜೀವಿಸುವೆ ಎಂದು ಕೊಂಡೆಯಾ? ನಾನು ಒಳ್ಳೆ ಬಂಗ್ಲೆಕಟ್ಟಿ ಜೀವಿಸುವೆ ನೋಡುತ್ತಿರು!''

''ಭೇಷ್! ಆದರೂ, ಉತ್ತಮ ಜೀವನಕ್ಕೆ ವಿದ್ಯೆ ಬೇಕೇ ಬೇಕು. ನೀನು ಎಷ್ಟೇ ಆಟ ಆಡು, ಅದರೊಂದಿಗೆ ವಿದ್ಯೆಯೂ ಇರಬೇಕು. ಶಾಲೆಗೆ ಚಕ್ಕರ್ ಕೊಡಬೇಡ.''

''ಎಷ್ಟು ಪ್ರ್ಯಾಕ್ಟೀಸ್ ಮಾಡಬೇಕು ಗೊತ್ತೇ? ಇನ್ನು, ಓದುವುದಕ್ಕೆ ಸಮಯವಾದರೂ ಎಲ್ಲಿ?''

''ಹಾಗಲ್ಲಪ್ಪಾ, ಸಮಯ ಎಲ್ಲಿ ಎಂದು ಕೇಳುವುದಕ್ಕಿಂತ ಸಮಯ ಮಾಡಿಕೊಳ್ಳಬೇಕು. ಪಾಠವನ್ನು ರಾತ್ರಿ ಓದಿಕೊ. ಶಾಲೆ ಶುರುವಾಗುವವರೆಗೆ ಆಟ ಆಡು. ಅನಂತರ ಶಾಲೆ. ಸಂಜೆ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು ಪುನಃ ಆಟ ಆಡು.''

''ಅಷ್ಟೆಲ್ಲಾ ನನ್ನಿಂದ ಆಗೋಲ್ಲ ಅಕ್ಕಾ.''

''ಏಕೆ ಆಗೋಲ್ಲ-ನಾನು ರಾತ್ರಿ ಓದೋಲ್ಲವೇ? ನನ್ನ ಜೊತೆಗೇ ಕುಳಿತುಕೊ. ಪ್ರಯತ್ನ ಪಡು. ಯಾವುದೇ ಕೆಲಸ ಹಿಡಿದರೂ ನಿಷ್ಠೆ ಇರಬೇಕು. ನಿಷ್ಠೆ ಇಲ್ಲದಿದ್ದರೆ ಕೆಲಸ ಕೆಡುತ್ತೆ.''

''ಆಗಲಿ, ಈ ವಾರ ನಾನು ನಿನ್ನೊಂದಿಗೆ ಪ್ರಯತ್ನಿಸುವೆ. ನೋಡೋಣ, ಹೇಗಾಗುತ್ತೆ ಅಂತ. ನನ್ನಿಂದ ಸಾಧ್ಯವಾದರೆ ಖಂಡಿತ ಮುಂದುವರಿಸುವೆ.''

''ಬೇಷ್! ಬಹಳ ಒಳ್ಳೆಯ ಹುಡುಗ. ನಿನಗೆ ಖಂಡಿತ ದೇವರು ಸರಿಯಾದ ಮಾರ್ಗ ತೋರಿಸುತ್ತಾನೆ.''

''ಶರತ್! ಅಕ್ಕ ಹೇಳಿದಂತೆ ಕೇಳು! ನಿನಗೆ ದೇವರು ಆರೋಗ್ಯಭಾಗ್ಯ ಕೊಟ್ಟಿದ್ದಾನೆ. ಕಷ್ಟಪಟ್ಟು ಓದು.''

ಶಾಂತಲಾ ಅಂದ ಮಾತಿಗೆ ಉತ್ತರಿಸಿದ ಶರತ್ ''ಓದುವುದು ಕಷ್ಟವಲ್ಲ, ಸಮಯ ಸಂಕೋಚ ಅಷ್ಟೆ.''

"ಮನಸ್ಸು ಮಾಡು ಶರತ್!"

"ಅಯ್ಯೊ, ನೀನೇನು ಹೇಳುತ್ತಿ ಬಿಡು. ಸಥ್ಯ, ನಿನ್ನದು ನೀನು ನೋಡಿಕೊ."

ಆ ಮಾತು ಮನದಾಳಕ್ಕೆ ಕೂರಿಗೆಯಂತೆ ಹೊಕ್ಕಿತು. ಶಾಂತಲಾ ಮುಖಮಡಿಯಾದಳು.

* * *

ಶಾಂತಲಾ ಕೈಯಲ್ಲಿದ್ದ ಪುಸ್ತಕದ ಮೇಲೆ ಅದೆಷ್ಟು ಹೊತ್ತು ದೃಷ್ಟಿ ಇಟ್ಟಿದ್ದಳೋ...

ಮನೋವೇದನೆಯಿಂದ ಒಂದಕ್ಷರವನ್ನೂ ಓದಲಿಲ್ಲ ಅವಳು. ಶರತ್ ಮತ್ತು ಅಪ್ಪ ಯಾವತ್ತೂ ಚುಚ್ಚು ಮಾತಾಡುವವರೇ! ಆಡಿದರೆ ಆಡಿಕೊಳ್ಳಲಿ. ಅಮ್ಮ ಹೇಳಿದ್ದಾಳೆ. ನಿನ್ನ ಮನೋವೇದನೆಯನ್ನೆಲ್ಲಾ ದೇವರಿಗೇ ಅರ್ಪಿಸಿ ಬಿಡು ಅಂತ. ನನ್ನ ಮನಸ್ಸು ಹೇಳುವುದೂ ಅದೇ. ದೇವರು ಎಂಬ ವ್ಯಕ್ತಿ ಇರುವುದು ಹೌದಾಗಿದ್ದರೆ ನನಗೇಕೆ....

"ಶಾಂತೀ, ಶಾಂತಲಾ...." ಅಕ್ಕನ ಕರೆ.

"ಏನು ಶ್ಯಾಂ?"

"ಈಗ ತೈಲ ಉಜ್ಜುವೆ. ಅಮ್ಮ ನೀರು ಕಾಯಿಸಿದ್ದಾರೆ,. ನಿನಗೆ ಸ್ನಾನ ಮಾಡಿಸುತ್ತಾರಂತೆ."

ಆ ಮಾತಿಗೆ ಹೂಗುಟ್ಟಿದಳು ಶಾಂತಲಾ. ಅಮ್ಮ-ಅಕ್ಕ ಎಷ್ಟೆಷ್ಟು ಮಾಡಿದರೂ ಕಾಲಿಗೆ ಶಕ್ತಿ ಕೂಡಿಬರುತ್ತಿಲ್ಲ. ಮುಂದೆ ಎಂದಾದರೂ ಸರಿ ಹೋಗುತ್ತೇನೆಂಬ ನಂಬಿಕೆ ನನಗಿಲ್ಲ. ಸುಮ್ಮನೆ ಕುಳಿತು-ಮಲಗಿ ಹೊತ್ತು ಕಳೆಯುವ ಕಷ್ಟ ದೇವರಿಗೇ ಗೊತ್ತು....ಎಂದು ಕೊಂಡಾಗ ಎಳೆಯ ಕಣ್ಣುಗಳಲ್ಲಿ ನೀರಾಡಿತು. ಸಣ್ಣಗೆ ಬೆಳ್ಳಿಗೆರೆಯಂತೆ ಮಿನುಗಿದ ನೀರು ತುಳುಕುವುದರೊಳಗಾಗಿ ಎರಡು ಕಣ್ಣುಗಳನ್ನೂ ಒರಿಸಿಕೊಂಡಳು. ಅದೇ ಕ್ಷಣದಲ್ಲಿ ತೈಲದೊಂದಿಗೆ ಅಲ್ಲಿಗೆ ಬಂದ ಶ್ಯಾಮಲಾ ಅವಳ ಕಾಲಿಗೆ ತೈಲವನ್ನು ಹಚ್ಚಿ ಮೃದುವಾಗಿ ಉಜ್ಜತೊಡಗಿದಳು. ಮಾಂಸ ಬತ್ತಿ ಬಾಡಿ ಬರಿ ಮೂಳೆಯಾಗಿದ್ದ ಕಾಲನ್ನು ನೋಡಿದರೆ ಒಡಲೆಲ್ಲಾ ಸಂಕಟ. ಪೋಲೀಯೋ ಆದನಂತರ ಒಂದು ಕಾಲು ಮಾತ್ರವಲ್ಲ. ಶರೀರವೇ ಶಕ್ತಿಗುಂದಿತ್ತು. ಒಣಗಿದ ದೆಬ್ಬೆಯಂತಾದ ಕೈಗಳು, ಎಲುಬಿನ ಹಂದರವಾದ ಮೈ ಅತ್ಯಂತ ಕರುಣಾಜನಕ... ನೋಡಲಾರದೇ ನೋಡಿದುವು ಕಣ್ಣುಗಳು. ಅದಕ್ಕೂ ಮೊದಲು ಚೆನ್ನಾಗಿದ್ದ ಮಗುವಿಗೆ ಯಾವ ದುಷ್ಟಗ್ರಹದ ದೃಷ್ಟಿತಾಗಿತೋ...ಪಾಪ, ಅನ್ಯಥಾ ಬಲಿಯಾಯಿತು... ಎಂದುಕೊಳ್ಳುತ್ತಲೇ ತೈಲ ಉಜ್ಜಿದಳು ಶ್ಯಾಮಲಾ.

"ಅಕ್ಕಾ....! ನನಗೆ ಹೊತ್ತು ಕಳೆಯುವುದು ಕಷ್ಟ. ನನ್ನ ಕಾಲನ್ನು ಕಿತ್ತುಕೊಂಡ ವಿಧಿ ಈ ಜೀವವನ್ನೇಕೆ ತೆಗೆದುಕೊಳ್ಳಲಿಲ್ಲ?"

"ಹಾ! ಹಾಗೆನ್ನಬಾರದು. ಈ ತೈಲ ನಿನಗೆ ಗುಣ ಪಡಿಸಬಹುದು ನೋಡೋಣ. ನಿನಗೆ ನಿಟ್ಟಿಂಗ್ ಹೇಳಿಕೊಡುವೆ. ಕಲಿತುಕೊ. ಅದರಿಂದ ಹೊತ್ತು ಕಳೆಯುತ್ತೆ. ಹೇಗೂ ಪುಸ್ತಕಗಳನ್ನು ತಂದುಕೊಡುತ್ತಿರುವೆ ಕಸೂತಿಯನ್ನೂ ಕಲಿಯ ಬಹುದು."

"ನನಗೀಗ ಏನೂ ಬೇಡವೆನಿಸುತ್ತಿದೆ. ಅಪ್ಪ-ಅಣ್ಣ ಸಿಡಿಸಿಡಿ ಎನ್ನುತ್ತಲೇ ಇರುತ್ತಾರೆ. ವಿನಾಕಾರಣ ಕಟುಮಾತು. ನಿಜವಾಗಿಯೂ ನನಗೆ ಬದುಕುವುದು ಇಷ್ಟವೇ ಇಲ್ಲ. ತೈಲವನ್ನು ಒಂದುವಾರದಿಂದ ಉಜ್ಜುತ್ತಿದ್ದಿ. ಈವರೆವಿಗೆ ಯಾವ ಪ್ರಯೋಜನವೂ ಆಗಲಿಲ್ಲ. ಇದು ಗುಣವಾಗುವುದಕ್ಕೆ ಬರಲಿಲ್ಲ. ನನ್ನನ್ನು ಒಯ್ಯಲೆಂದೇ ಬಂದದ್ದು. ಒಯ್ಯುವುದರಲ್ಲಿ ನಿಧಾನವೇಕೋ ಅರ್ಥವಾಗುತ್ತಿಲ್ಲ."

"ನೀನು ಹೇಳಿದ್ದೇ ಹೇಳುತ್ತಿ. ಜೀವನದಿ ಮುಂದುವರಿಯಬೇಕೇ ಹೊರತು ಹಿಂಜರಿಯಬಾರದು. ಇಷ್ಟಕ್ಕೇಕೆ ಕೊರಗುತ್ತಿ? ಹುಟ್ಟು ಕುರುಡರು ಶ್ರದ್ಧೆಯಿಂದ ಬಾಳು ನಡೆಸುತ್ತಾರೆ ನಿನಗೆ ತೊಂದರೆಯಾಗಿರುವುದು ಒಂದು ಕಾಲಿಗೆ ಮಾತ್ರ. ಇದನ್ನು ಹೇಗಾದರೂ ಸಂಬಾಳಿಸಿಕೊಳ್ಳಬಹುದು. ಅದಕ್ಕೆ ತಕ್ಕ ಮರಗಾಲು, ಷೂ ಮುಂತಾದ ಸಲಕರಣೆಗಳಿವೆ. ಮೈತುಂಬಿದ ಮೇಲೆ ಏನಾದರೂ ಮಾಡಿಸಿಕೊಳ್ಳ ಬಹುದು...ಸುಮ್ಮನೆ ಕೊರಗಬೇಡ ಸ್ವೀಟ್ ಚೈಲ್ಡ್!" ಎಂದು ನಲ್ಮೆಯಿಂದ ಮುದ್ದಿಸಿದಳು ಶ್ಯಾಮಲಾ.

"ಅದಕ್ಕೆಲ್ಲಾ ದುಡ್ಡು?"

"ಏನಾದರೂ ಮಾಡೋಣ...ನಾನು ನಿನಗಾಗಿಯೇ ಕೆಲಸ ಹುಡುಕುತ್ತಿರುವೆ. ಪರೀಕ್ಷೆ ಮುಗಿದೊಡನೆ ಕೆಲಸಕ್ಕೆ ಸೇರುವೆ. ಮೊದಲ ಸಂಬಳದಲ್ಲಿ ನಿನಗೆ ಏನೆಲ್ಲಾ ಬೇಕು ತರೋಣ. ನನ್ನ ದುಡಿಮೆಯಲ್ಲಿ ಅರ್ಧ ನಿನಗೆ ಮೀಸಲು. ಖಂಡಿತ ಕೊರಗಬೇಡ. ನಿನ್ನ ಜೀವನಕ್ಕೆ ಏನೆಲ್ಲಾ ಬೇಕೋ ಅದನ್ನು ನಿರ್ವಂಚನೆಯಿಂದ ಮಾಡೋಣ; ಅದಕ್ಕೆ ಅಪ್ಪನಿಂದ ಹಣ ಕೇಳುವುದೂ ಬೇಡ. ತೆಗೆದುಕೊಳ್ಳುವುದೂ ಬೇಡ. ನಿನ್ನ ಪ್ರತಿಯೊಂದು ಅಗತ್ಯವನ್ನೂ ನಾನು ಪೂರೈಸುವೆ!" ಎದೆಯಾಳದಿಂದ ಹರಿದು ಬಂದ ದನಿಯಲ್ಲಿ ಪ್ರೀತಿಯ ಚಿಲುಮೆ ಉಕ್ಕುತಿತ್ತು.

"ನೀನು ಮುಂದೆ ಓದುವುದಿಲ್ಲವೇ? ಸಾಧ್ಯವಾದರೆ ಬಿ.ಎ. ಮುಗಿಸಿ ಕೊಳ್ಳುವುದು ಒಳ್ಳಿತು ಶ್ಯಾಮಲಾ. ಕಾಲೇಜು ಬಿಟ್ಟಮೇಲೆ ವಿದ್ಯೆ ಮೊಟಕು....."

"ಅಪ್ಪನನ್ನು ಹಣಕ್ಕಾಗಿ ಕೇಳುವ ಕಷ್ಟಕ್ಕಿಂತ ಕೆಲಸಕ್ಕೆ ಸೇರುವುದು ಒಳ್ಳಿತು. ಅದಕ್ಕೂ ಒಪ್ಪುತ್ತಾರೋ ಇಲ್ಲವೋ ಅದೊಂದು ಕಷ್ಟವಿದೆ. ಸಮಯ ಸಿಕ್ಕಿದರೆ ಪೋಸ್ಟಲ್ ಟ್ಯೂಷನ್ ತೆಗೆದುಕೊಂಡು ಬಿ.ಎ. ಮುಗಿಸುವೆ. ಅಂತೂ, ಮೊದಲು ಹಣದ ಅಡಚಣೆ ತಪ್ಪಿದರೆ ಸಾಕು."

"ನಿನ್ನ ಭರವಸೆ ನನಗೂ ಹುರುಪು ನೀಡುತ್ತೆ. ಆದರೆ, ನಾನು ಓದುವುದು ಹೇಗೆ?"

"ಕಾಲಿಗೆ ಒಂದು ಸ್ಟಾಂಡ್ ಸಹಿತ ಷೂ ತಂದರಾಯಿತು."

"ಅದಕ್ಕೆಲ್ಲಾ ಎಷ್ಟು ಬೆಲೆಯಾಗುತ್ತೆ...."

"ಈಗ ಅವಸರವಿಲ್ಲ. ಮೊದಲು ನೀನು ಚೇತರಿಸಿಕೊ. ಅನಂತರ ಏನೇನು ಬೇಕೋ ಅದನ್ನೆಲ್ಲಾ ಕ್ರಮವತ್ತಾಗಿ ನಾವೇ ಮಾಡೋಣ, ನನ್ನ ಮುದ್ದು ಮಗುವೇ! ಚಿಂತಿಸಬೇಡ."

* * *

ಗಂಗಾರಾಂ ಪಾದರಕ್ಷೆಗಳ ಪಟತ್ಕಾರದೊಂದಿಗೆ ಒಳಬಂದ.

ಬಿಸಿಲಟ್ಟಿದ ಮುಖದಲ್ಲಿ ತುಂತುರು ತುಂತುರಾಗಿ ಮೂಡಿದ ಸ್ವೇದ ಬಿಂದುಗಳ ಸರಮಾಲೆ. ರಂಗುಗುಳುವ ನಯನದ್ವಯಗಳಲ್ಲಿ ಬೆಂಕಿಯ ಕಿಡಿಗಳು. ಸಿಗರೇಟಿನ ತುದಿಯಲ್ಲಿದ್ದ ಬೂದಿಯನ್ನು ಬದಿಗೆ ಸಿಡಿದು "ಶ್ಯಾಂ! ಎಲ್ಲಿದ್ದೀ?" ಎಂದ.

"ಏನಣ್ಣಾ?"

ಶ್ಯಾಮಲಾ ಎದುರಾಗುತ್ತಲೂ "ಮಾತ್ರೆ ತೆಗೆದುಕೊಳ್ಳಬೇಕು. ಒಂದು ಬಸಿ ಕಾಫಿ ತಾ."

ಶ್ಯಾಮಲಾ ಕಾಪಿಯ ಬಸಿಯನ್ನು ಒಯ್ದು ಕೊಟ್ಟು ಬಂದಳು.

"ಶ್ಯಾಂ....!"

"ಏನಮ್ಮಾ?"

"ನಾನು ಹೀಗೆ ಕುಳಿತಿರಲಾರೆ...ಶ್ಯಾಂ! ಶಾಲೆಗೆ ಹೋದರೆ ಕಲಿಯಬಹುದು. ದೊಣ್ಣೆ ಊರಿಕೊಂಡು ಹೋಗಲೇ?" ಗದ್ಗದವಾಣಿಯಲ್ಲಿ ಕೇಳಿದಳು ಶಾಂತಲಾ.

"ನೀನು ಮೊದಲು ಮೈಗೆ ಶಕ್ತಿ ಊಡಿಸಿಕೊಳ್ಳಬೇಕು. ಕೊರಗೀ ಕೊರಗಿ ಬರೀ ಎಲುಬು ಚರ್ಮವಾಗಿದ್ದಿ. ಛೇ! ನಡೆಯುವುದು ಹೇಗೆ? ಅಲ್ಲಿ ಕಲಿಯುವುದು ಹೇಗೆ? ಇದನ್ನೆಲ್ಲಾ ಯೋಚನೆ ಮಾಡು ಮಗೂ! ಸಧ್ಯ, ನಾನೇ ಹೇಳಿಕೊಡುತ್ತಿದ್ದೇನಲ್ಲ, ಮತ್ತೇಕೆ ಬೇಸರ? ಹೀಗೆಲ್ಲಾ ಬೇಸರ ಮಾಡಿಕೊಳ್ಳಬಾರದು ಮಗೂ!"

ಶ್ಯಾಮಲಾ ತಂಗಿಯನ್ನು ಮುದ್ದಿಸಿ ತಲೆಬಾಚಿ ಜಡೆ ಹಾಕಿದಳು. ಕಂಬನಿಯನ್ನು ತೀಡಿ ಸಂತೈಸಿ ಬೇರೊಂದು ಪುಸ್ತಕವನ್ನು ಕೊಟ್ಟು ''ಇದನ್ನು ಓದುವುದು ಸಾಧ್ಯವೇ ನೋಡು.''

''ಇದು ದೊಡ್ಡದು ಅಕ್ಕ!''

ಶರತ್ ಸಣ್ಣಗೆ ಶೀಟಿ ಹಾಕುತ್ತ ಒಳಬಂದ. ಒಳಗಿದ್ದ ಗಂಗಾರಾಂ ಆ ದನಿಯನ್ನು ಕೇಳಿಸಿಕೊಂಡವನೇ ಮಗನ ಮೇಲೆ ಆಕ್ರಮಣ ಮಾಡಿ ಚೆನ್ನಾಗಿ ನಾಲ್ಕು ಬಾರಿಸಿ ತಲೆಯನ್ನು ಗೋಡೆಗೆ ಗಿಟ್ಟಿಸಿ ಅಬ್ಬರಿಸಿದ ''ದಿನಾಲೂ ಪೋಲಿ ಅಲೆಯುತಿದ್ದೀಯೆ! ನಿನ್ನ ಕಾಲು ಮುರಿದು ಕೂರಿಸುವೆ!''

ಹಾಸಿಗೆಯಮೇಲೆ ಕುಳಿತಿದ್ದ ಶಾಂತಲಾ ನಡುಗಿ ಹೋದಳು.

ಶ್ಯಾಮಲಾ ಮಧ್ಯೆ ಪ್ರವೇಶಿಸಿ ತಮ್ಮನನ್ನು ಬಿಡಿಸಿಕೊಂಡು ನುಡಿದಳು.

''ಛೀ!ಇದು ಹೇಯ ಕೃತ್ಯ! ಅವನಿಗೆ ಹೇಳುವ ರೀತಿಯಲ್ಲಿ ಹೇಳಬೇಕು. ಹೀಗೆ ಹುಚ್ಚಾಪಟ್ಟೆ ಬಡಿಯುವುದೆಂದರೇನು?''

ಗಂಗಾರಾಂ ಅವಳನ್ನೂ ಗೋಡೆಗೆ ತಳ್ಳಿ ದಡದಡದೆ ಹೊರಹೋದ. ಅಡಿಗೆ ಮನೆಯಲ್ಲಿ ಸ್ವಾಮಿನಿ ಉಕ್ಕಿಬಂದ ಕಂಬನಿಯನ್ನು ತೀಡಿಕೊಂಡಳು. ಪತಿ ಮಹಾಶಯ ಹೊರ ಹೋದುದು ತಿಳಿದರೂ ಹೆಜ್ಜೆ ಕೀಳುವ ಧೈರ್ಯವಿಲ್ಲ. ದಡದಡನೆ ವ್ಯಾಪ್ತಿಗೆ ಮೀರಿ ಮಿಡಿದ ಹೃದಯವನ್ನು ಒತ್ತಿ ಹಿಡಿದುಕೊಂಡು ಸ್ವಲ್ಪ ಸಮಯ ಸುಧಾರಿಸಿ ಕೊಂಡ ನಂತರ ಹೊರ ಬಂದು ಅಳುತಿದ್ದ ಮಗನನ್ನು ಅಪ್ಪಿ ಹಿಡಿದು ಕೊಂಡು ಅಂದಳು,

''ಹೋಗಲಿ ಮಗನೇ! ದುಃಖಿಸಬೇಡ...ಆಗಿದ್ದು ಆಗಿಹೋಯಿತು...! ಇನ್ನು ಚೆನ್ನಾಗಿ ಓದಿಕೋ...ಆ ಬೆಂಕಿ ಕಿಡಿಯ ಕೈಗೆ ಸಿಕ್ಕಿದರೆ ,....ಸುಟ್ಟು ಹೋಗುವುದೇ ಸರಿ,''

ಅವನು ಅಳುವಷ್ಟು ಹೊತ್ತು ಅತ್ತು ಸಿಡಿದೆದ್ದ ''ಅಪ್ಪ ನನ್ನ ಚಿಕ್ಕವನು ಎಂದುಕೊಂಡಿದ್ದಾನೆ... ಇನ್ನೊಮ್ಮೆ ನನ್ನ ಮೈ ಮುಟ್ಟಿದರೆ ನಾನು ತಿರುಗಿ ಸರಿಯಾಗಿ ಬಾರಿಸುವವನೇ! ಅವನು ನನ್ನ ಕೊಂದರೂ ಸರಿಯೆ!...ಏನು ಬೇಕಾದರೂ ಆಗಲಿ, ನಾನು ಹೆದರುವವನಲ್ಲ. ತಾನು ಕುಡಿತ ಜೂಜುಗಳಲ್ಲಿ ನಿಸ್ಸೀಮ! ನನಗೆ ಬುದ್ಧಿ ಹೇಳುವಷ್ಟು ಒಳ್ಳೆಯವನೇ....?'' ಕಟಕಟ ಹಲ್ಲು ಕಡಿದ ಶರತ್. ಮೈಯಲ್ಲಿ ಕಿಡಿ ಹಾರುವಷ್ಟು ಎದೆಯಲ್ಲಿ ತುಡಿತ.

ಶ್ಯಾಮಲಾ ಅವನನ್ನು ಸಂತೈಸುತ್ತಲೇ ಇದ್ದಾಳೆ. ಶಾಂತಲಾ ಕುಳಿತಲ್ಲೇ ಮುಸಿಮುಸಿ

ಅಳುತಿದ್ದಾಳೆ. ದುಃಖ...ದುಃಖ. ಮನೆಯೆಲ್ಲಾ ದುಃಖಮಯ. ಶೋಕರಸದ ಅತೀವ ಹರವು.

"ಇದೇ ಕೊನೆ! ಇನ್ನೊಂದು ದಿನ ಅಪ್ಪ ಮೈ ಮುಟ್ಟಿದರೆ ಅಪ್ಪನಿಗೆ ಸರಿಯಾದ ಶಾಸ್ತಿ ಮಾಡಿಯೇ ತೀರುವೆ! ನರಸಿಂಹ ಬಗೆದಂತೆ ಕರುಳು ಬಗೆಯದಿದ್ದರೆ ಕೇಳು!"

"ಮಗೂ! ಸಿಟ್ಟಾಗಬಾರದು ಕಣೋ! ಶಾಂತಿಯಿಂದ ಎಷ್ಟಾದರೂ ಕೆಲಸ ಮಾಡಬಹುದು. ಸಿಟ್ಟಿನಿಂದ ಏನೂ ಸಾಧಿಸಲಾಗುವುದಿಲ್ಲ. ನನ್ನ ಮಾತು ಕೇಳು ಶರತ್! ಸಿಟ್ಟು ಮಾಡಿಕೊಳ್ಳಬೇಡ. ಅವರ ಸ್ವಭಾವ ಮೊದಲಿಂದ ಹಾಗೆಯೇ. ನಾನು ಎಷ್ಟೆಷ್ಟು ನರಕ ಹಿಂಸೆ ಅನುಭವಿಸಿ ನನ್ನ ನೋವನ್ನು ನಾನೇ ನುಂಗಿಕೊಂಡಿರುವೆ ಗೊತ್ತೇ? ಇದನ್ನೆಲ್ಲಾ ಮನಸ್ಸಿಗೆ ತೆಗೆದುಕೊಂಡು ಜಿದ್ದಾಜಿದ್ದಿಗೆ ಇಳಿದರೆ ಸಂಸಾರ ಧೂಳೀ ಪಟವಾಗುತ್ತದೆ ಕಂಡೆಯಾ! ಸಹನೆ-ಶಾಂತಿಗಳೇ ನಮ್ಮನ್ನು ಉದ್ಧಾರಮಾಡಬೇಕಾದರೆ..."ದನಿ ಎದೆಯಾಳದಿಂದ ಹೊರಬಿತ್ತು. ಬಿಗಿದ ಗಂಟಲಿನಿಂದ ಗೌರೀಮಾ ಇನ್ನೂ ಹೇಳುತ್ತಲೇ ಇದ್ದಾಳೆ. ಅವನು ಎಷ್ಟು ಕೇಳಿದನೋ ಎಷ್ಟು ಬಿಟ್ಟನೋ. ತಾಯಿ ಮಕ್ಕಳ ವಿಶ್ವಾಸ ಮಾತ್ರ ಗೊಬ್ಬರ ಹಾಕಿದ ಬಳ್ಳಿಯಂತೆ ಮುಂಬೆಳೆಯಿತು.

ಗಂಗಾರಾಂ ಬಂದಾಗ ಊಟ ತಿಂಡಿಯನ್ನು ಅನುಕ್ರಮವಾಗಿ ಕೊಟ್ಟರೆ ಮುಗಿಯಿತು. ಮತ್ತೆ ಆತನ ಎದುರು ನಿಲ್ಲುವ ಗೋಜಿಲ್ಲ. ಕ್ಲಬ್ಬಿನ ಸಹವಾಸ ಹಚ್ಚಿಕೊಂಡವ. ಮದಿರೆ-ಚತುರೆಯರ ಸಂಘ ಅಲ್ಲಿಯೇ ಮುಗಿಯುತ್ತವೆ. ಮೈ ನರನರಗಳೂ ಉತ್ಸಾಹಿತವಾಗುತ್ತವೆ.

ನಿತ್ಯ ಧನಿಕರ ಕೂಟ, ಧನಿಕರ ಮೋಜಿನ ಅನುಕರಣ, ಆರ್ಥಿಕ-ಬೌದ್ಧಿಕ-ಮಾನಸಿಕ ಮೌಲ್ಯಗಳು ನಷ್ಟದ ಹಾದಿಯಲ್ಲಿ, ಎಂಬುದನ್ನು ಮಾತ್ರ ಅರಿಯ.

## ೩

ರಾಮಾಯ ಸ್ವಸ್ತಿ ರಾವಣಾಯ ಸ್ವಸ್ತಿ.

"ಈ ಲೋಕದಲ್ಲಿ ಎಲ್ಲರೂ ಬದುಕಲು ಅರ್ಹರು. ಅಥವಾ ಹಕ್ಕುಳ್ಳವರು. ದುಷ್ಟರನ್ನು ತೊಲಗಿಸಲಾಗುತ್ತದೆಯೇ? ಅನುಸರಿಸಿಕೊಂಡು ಹೋಗುವುದೇ ಸರಿಯಾದ ಮಾರ್ಗ. ದುಷ್ಟರಿಂದ-ಅವಿವೇಕಿಗಳಿಂದ ದೂರದೂರವಿದ್ದರೆ ಆಯಿತಲ್ಲ;

ಮತ್ತೇಕೆ ಗೆಳೆಯನಲ್ಲಿ ಉಳಿದೆ? ಹೀಗೆಲ್ಲಾ ಆಡಿದರೆ ನಿನ್ನ ತಪ್ಪುಗಳೇ ಹೆಚ್ಚಾಗುತ್ತವೆ. ದುಷ್ಟರನ್ನು ನೋಡಿ ನಾವು ಬುದ್ಧಿ ಕಲಿಯಬೇಕು.''

ಶ್ಯಾಮಲಾ ಹೇಳಿದುದನ್ನು ಪ್ರತಿಮಾತಿಲ್ಲದೆ ಕೇಳಿದ ಶರತ್. ತಲೆಯಲ್ಲಿ ಸಿಟ್ಟು-ರೋಷಗಳ ಉತ್ತಾಲ ನರ್ತನ ನಡೆದೇ ಇತ್ತು.

''ಅಮ್ಮ ಎಷ್ಟು ಹೇಳಿದ್ದಾರೆ....ನಾನು ಎಷ್ಟೆಷ್ಟು ಹೇಳಿದೆ. ಆದರೂ, ನೀನು ಸಣ್ಣ ಮನಸ್ಸಿನ ಆಳಾಗಿ ವರ್ತಿಸಿದರೆ ತಪ್ಪು ನಿನ್ನದೇ. ತಂದೆಗೆ ದೂರು ಕೊಡುತ್ತಾರೆಂದು ಮಾಸ್ಟರನ್ನು ತರಾಟೆಗೆ ತೆಗೆದುಕೊಳ್ಳುವುದುಂಟೇ? ಅವರ ಕರ್ತವ್ಯ ಅವರು ಮಾಡಿದ್ದಾರೆ. ಮಾಡದೇ ಇದ್ದರೆ ಅವರ ಶಾಲೆಗೆ ಕೆಟ್ಟ ಹೆಸರು ಬರುತ್ತೆ. ನಿನ್ನಂತೆಯೇ ಎಲ್ಲಾ ವಿದ್ಯಾರ್ಥಿಗಳೂ ವರ್ತಿಸಿದರೆ ಶಾಲೆಯ ಗತಿಯೇನು? ಇದನ್ನೆಲ್ಲಾ ಯೋಚಿಸಿ ನೋಡು ಶರತ್. ನಾನು ನಿನ್ನನ್ನು ಬೇಡಿಕೊಳ್ಳುವೆ. ದಯವಿಟ್ಟು ಅತಿ ವರ್ತನೆಗೆ ಇಳಿಯಬೇಡ'' ಅವನ ಮುಖವನ್ನು ಬೊಗಸೆಯಲ್ಲಿ ಹಿಡಿದಳು ಶ್ಯಾಮಲಾ.

ಶರತ್ ಮಾತಾಡಲಿಲ್ಲ. ಪುಸ್ತಕ ತೆಗೆದುಕೊಂಡು ಶಾಲೆಗೆ ಹೊರಟ.

ಶಾಂತಲಾ ಅಲ್ಲಿಂದಲೇ ಕರೆದಳು ಅತ್ಯಂತ ದೈನ್ಯವಾಣಿಯಲ್ಲಿ,

''ಶ್ಯಾಮಲಾ...''

''ಏನಮ್ಮಾ?''

ಶ್ಯಾಮಲಾ ಬಳಿಯಲ್ಲಿ ಕುಳಿತು ಬೆನ್ನನ್ನು ನೇವರಿಸುತ್ತ ಕೇಳಿದಳು ''ಏನಮ್ಮಾ?''

''ನನಗೆ ಏನಾದರೂ ಹೊಲಿಯಲು ಕೊಡು. ನಿನಗೆ ಕರವಸ್ತ್ರ ಬೇಕಿದ್ದರೆ ಹೇಳು ಹೊಲಿದು ಕೊಡುವೆ. ಕುಳಿತೂ, ಕುಳಿತೂ ಬೇಸರ.''

''ನಿನ್ನೆ ನಿನ್ನ ಗೆಳತಿ ಸಾವಿತ್ರಿ ಬಂದಿದ್ದಳೇ?''

''ಹೌದು.''

''ಅವಳಿಗೆ ಆಗಾಗ ಬರುತ್ತಿರು ಎಂದಿರುವೆ.''

''ನಾನೂ ಹೇಳಿರುವೆ. ಇನ್ನು ಎರಡು ದಿನ ಬಿಟ್ಟು ಬರುವುದಾಗಿ ಹೇಳಿದ್ದಾಳೆ.''

''ನಿನಗೆ ಏನೇನು ಬೇಕೋ ಎಲ್ಲಾ ಹೇಳು. ನನ್ನ ಕೈಲಾದಷ್ಟು ಮಾಡುವೆ.''

ಆ ಮ್ಲಾನ ಮುಖಬಿಂಬದಲ್ಲಿ ಮಿನುಗುತಿದ್ದ ಕಣ್ಣಾಲಿಗಳಿಗೆ ಎಲ್ಲಿಂದಲ್ಲೋ ಒದಗಿ ಬಂದ ಅಪೂರ್ವಕಳೆ ಸ್ವಲ್ಪ ಕಾಲ ಬೆಳಗಿ ಮಾಯವಾಯಿತು. ಅವಳ ಬತ್ತಿ ಹೋಡಿದ ಕೆನ್ನೆಗಳನ್ನು ಮೃದುವಾಗಿ ಮುದ್ದಿಟ್ಟುಕೊಂಡಳು ಶ್ಯಾಮಲಾ.

* * *

ತಲೆಬಾಗಿಲಲ್ಲಿ ಕಟಕಟ ಸದ್ದು.

ಶ್ಯಾಮಲಾ ಕದ ತೆರೆದಾಗ ಒಳ ಬಂದವಳು ಶಾರದಾ ಕರ್ವೆ. ಅವಳು ತನಗಿಂತ ಎರಡು ವರ್ಷ ಸೀನಿಯರ್. ಆದರೂ, ಅವಳು ತನ್ನ ಓರಗೆಯವಳೇ ಎಂಬಷ್ಟು ವಿಶ್ವಾಸ. ಎರಡೂ ಕೈಗಳಿಂದ ಸ್ವಾಗತಿಸಿ ಬರಮಾಡಿಕೊಂಡಳು ಶ್ಯಾಮಲಾ.

"ಬಾ, ಶಾರದಾ! ನಿನ್ನ ನೋಡದೆ ಎಷ್ಟು ದಿನಗಳಾಗಿತ್ತು?"

"ಅದಕ್ಕೋಸ್ಕರವೇ ಬಿಡುವು ಮಾಡಿಕೊಂಡು ಬಂದೆ. ನಿನ್ನ ತಂಗಿಗ ಪೋಲಿಯೋ ಆಗಿ ನೀನು ತುಂಬಾ ಕಷ್ಟ-ವ್ಯಸನಗಳಲ್ಲಿದ್ದೀಯೆಂದು ಸೀತಾ ಹೇಳಿದಳು. ದೇವರು ಕರುಣೆ ಎನ್ನಬೇಕೋ ನಿಷ್ಕರುಣೆ ಎನ್ನಬೇಕೋ ತಿಳಿಯದು."

ಅವಳನ್ನು ಶಾಂತಲೆಯ ಹಾಸಿಗೆಯ ಬಳಿಯೇ ಚಾಪೆ ಹಾಸಿ ಕೂಡಿಸಿಕೊಂಡಳು. ಅಪರೂಪವಾಗಿ ಬಂದ ಶಾರದೆಯನ್ನು ನೋಡಿ ಗೌರೀಮಾ ಸಂತಸದಿಂದ ಕುಶಲ ಸಮಾಚಾರ ಕೇಳಿಕೊಂಡಳು. ಮುಖಬಿಂಬ ಮಳೆ ಬಿಸಿಲಾಗಿತ್ತು.

"ಪೋಲಿಯೋ ಆಗುವ ಮುಂಚೆ ಗುಂಡುಗುಂಡಗೆ ಚೆನ್ನಾಗಿಯೇ ಇದ್ದಳು. ಅದಾದನಂತರ ಎಲುಬಿನ ಹಂದರವಾಗಿದ್ದಾಳೆ. ಅವಳನ್ನು ನೋಡುವುದೇ ಸಂಕಟ."

ಆ ತಾಯಿಯ ಗೋಳು, ಗೆಳತಿಯ ಗೋಳು, ರೋಗಿಯ ಗೋಳು ಮನದಾಳಕ್ಕೆ ಇಳಿಯಿತು. ಶಾರದಾ ಕರ್ವೆ ಗೆಳತಿಯ ಬೆನ್ನಿನ ಮೇಲೆ ಕೈಯಿಟ್ಟು ನುಡಿದಳು,

"ನಮ್ಮ ಆಫೀಸಿನಲ್ಲಿ ಒಂದು ಕೆಲಸ ಖಾಲಿ ಇದೆ. ಅದು ಹುಡುಗಿಯರಿಗೇ ಮೀಸಲು. ನಿನ್ನನ್ನು ಬಾಸ್‌ಗೆ ಪರಿಚಯ ಮಾಡಿಸುವೆ. ಒಪ್ಪಿದರೆ ನೋಡೋಣ. ಈಗ ಮುನ್ನೂರೈವತ್ತು ಸಿಗುತ್ತದೆ. ಮುಂದೆ ಹತ್ತುನೂರರವರೆಗೆ ಸ್ಕೇಲಿದೆ. ಈ ಕಷ್ಟ-ಕಾರ್ಪಣ್ಯಗಳಿಗೆ ಮುನ್ನೂರೈವತ್ತು ಎಷ್ಟೋ ಸಹಾಯ ಮಾಡೀತು. ನಿನಗೆ ಇಷ್ಟವಾದರೆ ನೋಡು."

"ಖಂಡಿತಾ ಕೊಡಿಸು ಶಾರದಾ. ದಿನವೂ ಕಾಸಿಗಾಗಿ ಕಣ್ಣೀರು ಕರೆಯುವುದಾಗಿದೆ. ಕಾಹಿಲೆ ಮಗು. ಪೌಷ್ಟಿಕ ಆಹಾರವಿಲ್ಲ. ಈ ಮನೆಯ ರಾಣಾರಂಪ ಕೇಳಿದರೆ ಕಲ್ಲೂ ಕರಗುತ್ತದೆ. ಅಪ್ಪನಿಗೆ ಸಂಸಾರದಲ್ಲಿ ನಿರ್ಲಕ್ಷ್ಯ. ತನ್ನ ಪ್ರತಿ 'ಅಗತ್ಯ'ಕ್ಕೂ ಅಮ್ಮ ಬೇಕು. ಅವರ ಕ್ಷೇಮ ಬೇಡ. ಇಂಥ ಹೃದಯಹೀನರಿಗೆ ಏನೆನ್ನುವುದು? ಕಾಹಿಲೆ ಮಗುವಿನ ಮೇಲೆ ಕರುಣೆಯಿಲ್ಲ. ನನಗೆ ಈ ಜೀವನ ಸಾಕಾಗಿದೆ. ಅಮ್ಮನಿಗಾಗಿ-ಒಡಹುಟ್ಟುಗಳಿಗಾಗಿ ಬದುಕು ಅನಿವಾರ್ಯ. ಬದುಕುತ್ತಿರುವೆ."

ತುಂಬಿ ಬಂದ ಕಣ್ಣುಗಳನ್ನು ಒರಸಿಕೊಂಡಳು ಶ್ಯಾಮಲಾ.

''ಅಕ್ಕಾ! ನೀನೂ ಅತ್ತರೆ ನಾನು ಹೇಗೆ ಸಹಿಸಲಿ ಹೇಳು? ನನಗೊಂದು ಗುಟುಕು ವಿಷ ಕೊಟ್ಟರೆ ನಿಶ್ಚಿಂತೆ.'' ಕಣ್ಣುಗಳಲ್ಲಿ ಫಳಕ್ಕನೆ ನೀರಾಡಿತು. ಮೈಯಲ್ಲಿ ನೆತ್ತರಿಲ್ಲದಿದ್ದರೂ ಕೆನ್ನೆಗಳು ನಸುರಂಗು ತಳೆದುವು.

''ಛೇಃ! ಎಂತಹ ಮಾತಾಡುತ್ತಿ? ನಿನ್ನ ಕಾಲು ಎಂದಾದರೂ ವಾಸಿಯಾಗುತ್ತೆ. ಅದಕ್ಕೇಕೆ ತಲೆ ಕೆಡಿಸಿಕೊಳ್ಳುತ್ತಿ? ಒಳ್ಳಿತಾಗಲಿ ಎಂದು ದೇವರನ್ನು ಪ್ರಾರ್ಥಿಸುತ್ತಿರು. ಎಂದಾದರೂ ನಿನ್ನ ಮೊರೆ ಅವನಿಗೆ ಮುಟ್ಟಿಯೇ ಮುಟ್ಟುತ್ತೆ. ದೇವರು ಖಂಡಿತ ಕರುಣಾಳು'' ಸಂತೈಸಿದಳು ಶಾರದಾ ಕರ್ವೆ. ಹೃದಯ ಮರ್ಮರ ಮರುಗಿತು.

ಶ್ಯಾಮಲ ಅವಳನ್ನು ಎದೆಗಪ್ಪಿಕೊಂಡು ''ಸುಮ್ಮನಿರು. ನಿನ್ನ ಬಿಟ್ಟು ಏನೂ ಮಾಡಲಾರೆ. ನೀನೇ ನನ್ನ ಜೀವನ. ನೀನೇ ನನ್ನ ಬದುಕು.'' ಮುದ್ದುಗೈದು ಕಂಬನಿಯನ್ನು ತೀಡಿದಳು. ಅಕ್ಕನ ಎದೆಯಲ್ಲಿ ಮುಖವನ್ನು ಹುದುಗಿ ಸಣ್ಣಗೆ ಬಿಕ್ಕಿದಳು ಶಾಂತಲಾ.

''ನೀನು ನನ್ನ ಶಾಂತಿ. ಮಾನಸಿಕ ಶಾಂತಿ. ಜೀವನ ಶಾಂತಿ ಎಲ್ಲಾ. ನೀನು ಇಲ್ಲವಾದರೆ ಶಾಂತಿಯೇ ಇಲ್ಲ. ಅದನ್ನು ನೀನು ಯಾವತ್ತೂ ತಿಳಿದಿರಬೇಕು ಶಾಂತಿ.''

ಶಾಂತಲಾ ನಿಟ್ಟುಸಿರು ಬಿಟ್ಟು ಸುಮ್ಮನಾದಳು.

''ಚಿತೆಯಾಶ್ಚ ಚಿಂತೆಯಾಶ್ಚ ಬಿಂದು ಮಾತ್ರಂ ವಿಶಿಷ್ಯತೆ ಎನ್ನುತ್ತದೆ ಸುಭಾಷಿತ. ನಿನ್ನನ್ನು ಅಂದಿಂದಿಗೂ ಚಿಂತೆಯ ಮೂಟೆಯಾಗಿಯೇ ನೋಡುತ್ತಿರುವೆ. ಚಿಂತೆಯಿಂದ ಸರ್ವಸ್ವವೂ ಹಾಳು. ಖಂಡಿತ ಚಿಂತಿಸಲೇಬೇಡ. ಜೀವನದಲ್ಲಿ ಎಂದಾದರೂ ಒಳ್ಳೆಯ ದಿನಗಳು ಬರಬಹುದು.''

ಶಾರದೆಯ ಮಾತಿಗೆ ಶ್ಯಾಮಲಾ ''ನಮ್ಮ ಸ್ಥಿತಿಗತಿ ಹಾಗಿದೆ. ನಿನ್ನಂತಹ ಗೆಳತಿಯರಿಂದ ಅಲ್ಪಸ್ವಲ್ಪ ಸಾಂತ್ವನ. ನಾವೇ ತಾಯಿ ಮಕ್ಕಳು ಸುಖ-ದುಃಖ ಹಂಚಿಕೊಳ್ಳುವುದು ಅಭ್ಯಾಸ. ದೇವರು ಎಂದಿಗೆ ದಯೆದೋರುತ್ತಾನೋ ಎಂದು ಕಾಯುತ್ತಿವೆ ಬಡಜೀವಗಳು.''

''ಹಾಗೆಂದುಕೊಳ್ಳಬೇಡ. ಎಲ್ಲರಲ್ಲೂ ಆತ್ಮಶಕ್ತಿ ಎಂಬುದು ಇದ್ದೇ ಇದೆ. ಅದಕ್ಕೆ ನೀನು ಕೊಡಬೇಕಾದುದು ಉತ್ತೇಜನ ಮಾತ್ರ.''

''ನಿನ್ನಂತಹವರು ಬಳಿಯಲ್ಲಿದ್ದರೆ ಬದುಕು ಬಂಗಾರವಾಗುವುದು ಸತ್ಯ. ನಾಳೆ ಹತ್ತೂವರೆಗೆ ನಿನ್ನ ಆಫೀಸಿಗೆ ಬರುವೆ.''

''ಖಂಡಿತಾ ಬಾ. ನಿಧಾನವಾದರೆ ಬೇರಾರಿಗಾದರೂ ಹೋಗಬಹುದು.''

* * *

ದುಷ್ಪತ್ರಾಸಿತಳಾದ ಗಂಧರ್ವ ಸ್ತ್ರೀ ಉದ್ಭ್ರಾಂತತೆಯಿಂದ ಭೂತಲಕ್ಕೆ ಬಂದು ಮಂಡಿಯೂರಿ ಮುಖಮಡಿಯಾಗಿ ಕುಳಿತಂತೆ ಸ್ವಾಮಿನಿ ನಲುಗಿ ನೊಂದು ಕುಳಿತಿದ್ದಾಳೆ ಅಡಿಗೆಯ ಕೋಣೆಯಲ್ಲಿ. ಮ್ಲಾನ ಮುಖಬಿಂಬದಲ್ಲಿ ಆಳಕ್ಕಿಳಿದ ಕಣ್ಣಾಲಿಗಳು. ಬಾಚದ ಕೂದಲು ಸುತ್ತುಮುತ್ತೂ ಹರಡಿದ ಬಗೆ ಮನಃಸ್ಥಿತಿಯನ್ನು ಸಾರಿ ಹೇಳುತ್ತಿವೆ.

ಪತಿಯ ರೌದ್ರಾವತಾರ....ಪದೇ ಪದೇ ಮರುಕಳಿಸುವ ರೌದ್ರವತಾರ, ಮಗನ ಅರ್ಥಹೀನ ವ್ಯವಹಾರ, ಶಾಂತಲೆಯ ಅನಾರೋಗ್ಯ, ಆರ್ಥಿಕ ದಾರಿದ್ರ್ಯ. ಮೇಲಾಗಿ, ವೈಯಕ್ತಿಕ ಮತ್ತು ಆರ್ಥಿಕ ಸ್ವಾತಂತ್ರ್ಯಗಳ ದಟ್ಟ ದಾರಿದ್ರ್ಯ....ಇವುಗಳ ಜಂಜಾಟದಲ್ಲಿ ಬದುಕಲೇಬೇಕಾದ ಬಗೆ ಹೃದಯವನ್ನು ಕಾಣದ ಕೈಗಳಿಂದ ಹಿಸುಕುತ್ತಿದೆ. ಎಷ್ಟೇ ಪ್ರಯತ್ನಿಸಿದರೂ ಪರಿಸ್ಥಿತಿಯನ್ನು ಸುಧಾರಿಸಲಾರದ ಅಸಹಾಯಕ ಸ್ಥಿತಿ.. ಆಹಾರ ಸಾಮಗ್ರಿಗಳು ಮುಗಿದಿದ್ದರೂ ಉಪಾಯವಿಲ್ಲ.

ಹೃನ್ಮನಗಳು ಬಿಸಿಲಟ್ಟಿದ ಮಂಜಿನಂತಾಗಿದ್ದುವು. ದುಃಖದ ಝರಿ ನರನಾಡಿಗಳಲ್ಲಿ ತಾನೇತಾನಾಗಿ ಹರಿದಾಡುತ್ತದೆ.

ಹೊರಬಾಗಿಲ ಚಿಲಕವಾಡಿತು. ಗೌರೀಮಾ ಕದ ತೆರೆದಳು. ಶರತ್ ಒಳಬಂದ. ಬಿಸಿಲಲ್ಲಿ ಸುಟ್ಟು ಕಂದು ಬಣ್ಣಕ್ಕೆ ತಿರುಗಿತ್ತು ಮುಖಬಿಂಬ. ಒಳಬಂದವನೇ "ಅಮ್ಮಾ! ನನಗೆ ಹಸಿವು" ಎಂದು ಮುಖಮಜ್ಜನ ಮಾಡಿ ಬಂದ. ಬೆಳಗಿನ ಉಪಹಾರ ತಟ್ಟೆಯಲ್ಲಿಟ್ಟುಕೊಟ್ಟಳು ತಾಯಿ.

ಅದನ್ನು ಕುಳಿತು ತಿನ್ನುವಷ್ಟು ವ್ಯವಧಾನವೂ ಇಲ್ಲ.

"ಶರತ್! ನೀನು ಶಾಲೆಗೆ ಹೋದಂತಿಲ್ಲ...?" ನುಡಿಯಲಾರದೆ ನುಡಿಯಿತು ನಾಲಿಗೆ.

"ಶಾಲೆಗೆ ಹೋಗಲಿಲ್ಲ. ಕ್ರಿಕೆಟ್ ಪ್ರಾಕ್ಟೀಸ್ ಮಾಡುತಿದ್ದೆ."

"ಹೀಗಾದರೆ ಹೇಗಪ್ಪಾ? ಕಾಲ ನಿನಗಾಗಿ ಕಾಯುವುದಿಲ್ಲ. ದಿನಗಳು ಓಡುವುದನ್ನೂ ಗಮನಿಸದೆ ಆಟದಲ್ಲಿ ಕಳೆಯುತಿದ್ದಿ; ಅಪ್ಪನ ರೌದ್ರಾವತಾರ ನಿನಗೆ ಗೊತ್ತು. ಯಾಕಾದರೂ ಹೀಗಾಡುತ್ತೀ ಹೇಳು. ನಿನ್ನಿಂದ ನನಗೆ ವ್ಯಥೆ. ಯಾವ ಯಾವ ಸಂಕಟ ಸಹಿಸಲಿ ಹೇಳು?"

"ಕ್ರಿಕೆಟ್ ಕೂಡ ವಿದ್ಯೆಯಷ್ಟೇ ಮುಖ್ಯ. ಒಂದಿಲ್ಲ ಇದಾದರೆ ಇನ್ನೊಂದಿನ ಅದು. ಅದಕ್ಕೇಕೆ ದುಃಖ-ಸಂಕಟ....? ಏನಾಗಬೇಕೋ ಅದು ಆಗಿಯೇ ತೀರುತ್ತೆ.

ಅಪ್ಪನ ರೌದ್ರಾವತಾರ ಅರ್ಥವಿಲ್ಲದ್ದು.ಅವರಿಗೂ ಬುದ್ಧಿಕಲಿಯುವ ಕಾಲ ಬಂದೆ ಬರುತ್ತೆ!''

''ಈಗ ಅದರ ವಿಮರ್ಶೆ ಬೇಡವೇ ಬೇಡ. ಅವರ ದಾರಿ ಅವರಿಗೆ. ನಿನ್ನ ದಾರಿ ನಿನಗೆ. ಯಾರೊ ಕೆಟ್ಟರು ಎಂದು ನಾವು ಕೆಡಬಾರದು, ಕಂಡೆಯಾ?''

ಶಾಂತಲಾ ನಡುವೆ ಬಾಯಿ ಹಾಕಿದಳು ''ಶರತ್, ನಿನಗೋಸ್ಕರ ಅಮ್ಮ ಅಕ್ಕ ಎಷ್ಟು ಮರುಗುತ್ತಾರೆ ಗೊತ್ತಾ? ನೀನು ನೋಡಿದರೆ care free! ಇದು ಸರಿಯಲ್ಲಪ್ಪಾ.''

''ನೀನು ಮೂಲೆಗುಮ್ಮ ಅಂದರೆ ನಾನೂ ಹಾಗೆ ಎಂದುಕೊಂಡೆಯಾ?''

''ಪಾಪ! ಅವಳ ಕಷ್ಟ ಅವಳಿಗೆ ಗೊತ್ತು! ಅವಳನ್ನೇಕೆ ಹೀಯಾಳಿಸುತ್ತಿ?''

ಅದೇ ವೇಳೆಗೆ ಒಳ ಹೆಜ್ಜೆ ಇಟ್ಟ ಶ್ಯಾಮಲಾ ವಿಷಾದದಿಂದ ''ಶರತ್....''

ಅವನು ಅಕ್ಕನೆಡೆಗೆ ತಿರುಗುತ್ತಲೂ ಅವಳೆಂದಳು ''ಎಂತಹ ಕಟು ಹೃದಯದ ಹುಡುಗ! ಅವಳ ಮನಸ್ಸನ್ನು ಹಾಗೆ ನೋಯಿಸುತ್ತಾರೆಯೇ? ಇದೆಲ್ಲಾ ಸರಿಯಲ್ಲ ನೋಡು!''

ಆಗಲೇ ಶಾಂತಲೆ ಕಣ್ಣುಗಳಲ್ಲಿ ಫಳಫಳ ನೀರು.

''ಪಾಪ, ನನ್ನ ಮುದ್ದು ತಂಗಿ. ಇಂಥ ಮಕ್ಕಳ ಬಗ್ಗೆ ಕರುಣೆ ತೋರಬೇಕೇ ಹೊರತು ಹೀಯಾಳಿಕೆ ಅಲ್ಲ. ನಿನಗೆ ಅಷ್ಟೂ ಅರ್ಥವಾಗುವುದಿಲ್ಲವೇ ಶರತ್.''

'' ಅವಳೇಕೆ care free ಎನ್ನಬೇಕು ನನಗೆ?''

''ಅದು ತಪ್ಪಲ್ಲ, ಶರತ್....''

* * *

ತಲೆ ಬಾಗಿಲಲ್ಲಿ ಕಟ ಕಟ ಸದ್ದು.

ಶ್ಯಾಮಲಾ ಕದತೆರೆದು ನೆರೆ ಮನೆಯ ಪಾಂಚಾಲಿಯನ್ನು ಬರಮಾಡಿ ಕೊಂಡಳು.

ಪಾಂಚಾಲಿ... ಶಾಂತಲೆಯ ಓರಗೆಯವಳೇ. ಇಬ್ಬರೂ ಒಂದೇ ಶಾಲೆಗೆ ಹೋಗುತಿದ್ದರು ಕೂಡ. ಗೆಳತಿಯನ್ನು ಕಂಡು ಹೋಗಲು ಬರುವ ಪಾಂಚಾಲಿಗೆ ಪುಸ್ತಕ ತರುವುದು, ಏನಾದರೂ ಅಪೂರ್ವ ತಿನಿಸುಗಳಿದ್ದಲ್ಲಿ ತರುವುದು. ಒಂದು ಗಂಟೆ ಅವಳೊಂದಿಗೆ ಆಟವಾಡಿ ಸಂತಸಗೊಳಿಸುವುದು ಇವು ಶಾಂತಲಾ ಕಾಯಿಲೆ ಬಿದ್ದಾಗಿನಿಂದ ನಡೆದು ಬಂದ ರೂಢಿ.

ಪಾಂಚಾಲಿ ಎಂದರೆ ಮೈಯೆಲ್ಲಾ ಮನಸ್ಸಾಗುತ್ತಾಳೆ ಶಾಂತಲಾ.

"ಪಾಂಚಾಲಿ, ರಾತ್ರಿ ನಿನ್ನ ಕನಸಿನಲ್ಲಿ ಕಂಡಿದ್ದೆ. ನಾವಿಬ್ಬರೂ ಸ್ಕೂಲಿಗೆ ಹೋಗುತಿದ್ದೆವು! ಎಚ್ಚರವಾದೊಡನೆ ಎಂತಹ ಆನಂದವಾಯಿತು ಗೊತ್ತೆ? ಹಾಗೆ ಹೋಗಬಲ್ಲೆನಾದರೆ...."

ಆ ಕೂಡಲೇ ಅವಳ ಕೈಯನ್ನು ಅದುಮಿ ಹಿಡಿದುಕೊಂಡ ಪಾಂಚಾಲಿ ಅಂದಳು "ಯಾರಿಗೆ ಗೊತ್ತು, ನೀನು ಗುಣವಾದರೆ ಹೋಗಬಹುದು....! ಖಂಡಿತ ಹೋಗುತ್ತಿ ಎನಿಸುತ್ತೆ ನನಗೆ!"

"ಅಷ್ಟಾದರೆ ಸಾಕಲ್ಲ...." ಕಣ್ಣುಗಳಲ್ಲಿ ಆಸೆಯ ಬೆಳಕು ಮಿಂಚಿ ಮಾಯ ವಾಯಿತು.

"ಆದೀತು, ನೋಡೋಣ. ಪಂಡಿತರ ತೈಲ ಸಹಾಯ ಮಾಡಬಹುದು...."

"ದಿನಕ್ಕೆ ಎರಡು ಹೊತ್ತು ಉಜ್ಜುತ್ತ ಆಗಲೇ ತಿಂಗಳು ಉರುಳಿತು. ಹೆಚ್ಚಿನ ಪ್ರಯೋಜನವಾಗಿಲ್ಲ."

"ಬಹಳ ದಿನಗಳು ಬೇಕಾಗಬಹುದು. ಈಗ ಅದರ ಯೋಚನೆ ಬಿಡು. ಅಮ್ಮ ಚಕ್ಕುಲಿ ಮಾಡಿದ್ದರು. ನಿನಗಾಗಿ ಸ್ವಲ್ಪ ತಂದಿರುವೆ, ತಿನ್ನು."

ಚಕ್ಕುಲಿ ಕಂಡು ಯಾವಕಾಲವಾಗಿತ್ತೋ, ಆ ಕೂಡಲೇ ಅದನ್ನು ತಿಂದು ಒಡಲನ್ನು ತಣಿಸಿ ಕೈ ಬಾಯ್ ಒರಸಿಕೊಂಡು "ನಿನ್ನ ಚಕ್ಕುಲಿ ತುಂಬಾ ಚೆನ್ನಾಗಿತ್ತು. ಆಂಟಿಗೆ ಥ್ಯಾಂಕ್ಸ್ ಹೇಳಿದ್ದೇನೆಂದು ತಿಳಿಸು," ಎಂದಳು ಶಾಂತಲಾ. ಎಳೆಯ ಹೃದಯದಲ್ಲಿ ಸಂತಸಧಾರೆ ಉಕ್ಕಿ ಹರಿದು ಬಂತು.

"ಅಯ್ಯೊ, ಇದಕ್ಕೇಕೆ ಥ್ಯಾಂಕ್ಸ್? ನಾನು ತಂದಿದ್ದು ಚೂರುಪಾರು."

ಅನಂತರ ತನ್ನ ಒಡಲ ಸಂಕಟವನ್ನು ತೋಡಿಕೊಂಡಳು ಶಾಂತಲಾ,

"ನಾನು ಶಾಲೆಗೆ ಹೋಗಿ ಕಲಿಯಬೇಕು. ಇಲ್ಲಿ ಶ್ಯಾಮಲಾ ಹೇಳಿಕೊಡುತ್ತಾಳೆ. ಆದರೂ, ನಾನು ಎಲ್ಲರಂತೆಯೇ ಶಾಲೆಯಲ್ಲಿ ಕಲಿತರೇನೇ ಚೆನ್ನ. ನೀನು ಗಣಪತಿ ದೇವಸ್ಥಾನಕ್ಕೆ ಹೋದಾಗ ನನಗಾಗಿ ಹರಕೆ ಹೇಳಿಕೊ ಪಾಂಚಾಲಿ ಯಾವ ದೇವ ರಾದರೂ ನನ್ನ ಕಾಲು ಸರಿಮಾಡಲಿ....ಹೆಚ್ಚಿನ ಚಿಕಿತ್ಸೆಗೆ ಹಣವೂ ಇಲ್ಲ. ಇಂತಹ ಜೀವನ ಇದ್ದರೂ ಒಂದೇ. ಇಲ್ಲದಿದ್ದರೂ ಒಂದೇ. ಕಾಲು ಸರಿಹೋಗದಿದ್ದರೆ ಈ ಬದುಕು ನನಗೆ ಬೇಡವೇ ಬೇಡ!" ಎಳೆಯಕಂಠ ಗದ್ಗದಿಸಿ, ಕಂಬನಿದುಂಬಿದುವು ಕಣ್ಣಾಲಿಗಳು.

೪

ಶ್ಯಾಮಲಾ ಮನೆ ಮುಟ್ಟಿದಾಗ ರಣರಣ ಬಿಸಿಲು ನೆತ್ತಿಯ ಮೇಲೆ.

ಮನೆಯಲ್ಲಿ ಕೈಕಾಲು ತೊಳೆಯಲೂ ನೀರಿಲ್ಲ. ನೀರಿನ ಅಭಾವ ದಿನವೂ ಇದ್ದದ್ದೇ. ಆದರೆ, ಇಂದು ಇದ್ದದ್ದೂ ಸಂಕೋಚ.

''ಏನು ಮಾಡಲಿ ಅಮ್ಮಾ? ಕೈಕಾಲು ತೊಳೆಯಬೇಕಿತ್ತು.''

''ನಾನೇ ಆ ಪ್ರಶ್ನೆ ಕೇಳಬೇಕಾಗಿದೆ, ನಿನ್ನನ್ನು. ಪಾಂಚಾಲಿ ಮನೆಯಲ್ಲಿ ನೀರಿದೆಯ ಕೇಳು.''

ಅಲ್ಲಿಗೆ ಹೋಗಿ ನೋಡಿದರೆ ಅವರದು ಇನ್ನೂ ಅಭಾವ. ಶ್ಯಾಮಲಾ ಇಳಿಮೋರೆಯಿಂದ ಒಳ ಬಂದಳು. ಈ ಮನೆಯಲ್ಲಿ ಪ್ರತಿಯೊಂದೂ ಅಭಾವವೇ ಎಂದಾದರೂ ಈ ಜೀವನ ತುಂಬೀತು ಎಂಬುದಂತೂ ಕನಸಿನ ಮಾತು. ಯಾವ ವಿಷಘಳಿಗೆಯಲ್ಲಿ ಬೆಳಕು ಕಂಡೆವೋ...ಅದರ ಪರಿಣಾಮ ಅನುಭವಿಸುತ್ತಿದ್ದೇವೆ... ಇಂಥ ಭಂಗ ಯಾರಿಗೂ ಬರಬಾರದು.

ಒಳ ಹೋದರೆ ಕುಡಿಯಲು ಮಾತ್ರ ಒಂದು ಚೊಂಬು ನೀರಿಟ್ಟು ಕೊಂಡಿದ್ದಾಳೆ ಗೌರೀಮಾ.

''ಈಗೇನು ಮಾಡಲಿ?''

''ಟವಲ್ಲಿಂದ ಒರಿಸಿಕೊಂಡು ಬಿಡು. ಇನ್ನೇನು ಮಾಡಲಾಗುತ್ತೆ?''

ಶ್ಯಾಮಲಾ ಹಾಗೇ ಮಾಡಿದರೂ ಮನಸ್ಸಿಗೆ ಹಿತವಿಲ್ಲ. ಮನೆಯ ಪರಿಸ್ಥಿತಿ, ಅಳೆಯಲಾಗದ ಅಭಾವಗಳು ಕಣ್ಣಿನಲ್ಲಿ ನೀರು ತರಿಸುತ್ತವೆ ಆದರೂ ಗತ್ಯಂತರವಿಲ್ಲ.

ಶಾಂತಲೆಯ ಬಳಿಯಲ್ಲಿ ಕುಳಿತುಕೊಂಡು ''ಮಗೂ, ಈಸಲಿ ಫರೀದಾ ಕೆಲಸ ಕೊಡುವುದಾಗಿ ಹೇಳಿದ್ದಾರೆ. ಸಿಕ್ಕಿದರೆ ನನ್ನಿಂದಾದಷ್ಟು ಮನೆಯ ಅಗತ್ಯಗಳ್ನು ಪೂರೈಸುವೆ. ಕೊಡುವ ಪಗಾರ ಕಡಿಮೆ. Something is better than nothing.''

ಶಾಂತಲಾ ಅಕ್ಕನ ಕೈಯನ್ನು ಹಿಡಿದುಕೊಂಡಳು. ಬಿದಿರಿನ ದೆಬ್ಬೆಯಂತಹ ಕೈಗಳನ್ನು ಕಂಡರೆ ಕರುಳು ಚರುಚರು ಎನ್ನುತ್ತದೆ. ಆ ಕೈಯನ್ನು ಹಾಗೇ ತುಟಿ ಗೊತ್ತಿಕೊಂಡು ''ನಿನ್ನ ಕರವಸ್ತ್ರ ಚೆನ್ನಾಗಿದೆ. ಇನ್ನುಮೇಲೆ ಬೇಕುಬೇಕಾದ ಬಟ್ಟೆದಾರ ತಂದುಕೊಡುವೆ. ನೀನು ಕರವಸ್ತ್ರ ಹೊಲಿದು ಕೊಟ್ಟರೆ ಒಂದೊಂದಕ್ಕೆ ಒಂದೊಂದು ರೂಪಾಯಿ ಕೊಡುತ್ತಾರೆ. ನೀನು ಕುಳಿತಲ್ಲೇ ಗಳಿಸಬಹುದು. ನಿನ್ನ ಗಳಿಕೆ ನಿನ್ನ

ಪೌಷ್ಠಿಕ ಆಹಾರಕ್ಕೆ-ಔಷಧಿಗೆ ಆಗುತ್ತೆ. ಅಪ್ಪನಿಂದ ದಿನಾ ಬೈಸಿ ಕೊಳ್ಳುವುದಕ್ಕಿಂತ ಇದು ಲೇಸು....ನೀನು ನನ್ನ ಸ್ವೀಟ್ ಸಿಸ್ಟರ್! ಚೆನ್ನಾಗಿರಬೇಕು!''

ಆ ವೇಳೆಗೆ ಇಲ್ಲಿಗೆ ಬಂದ ಸ್ವಾಮಿನಿ ಕೇಳಿದಳು ''ನೀನು ಕೆಲಸ ಮಾಡುವುದೆಲ್ಲಿ....?''

''ಡಾ|| ಫರೀದ್ ಎಂಟರ್ ಪ್ರೈಜಸ್ ಅಂತ ಒಂದು ಕಂಪನಿ ಇದೆ. ಅದಿರುವುದು ಎಂ. ಜಿ. ರಸ್ತೆಯಲ್ಲಿ. ಫರೀದ್ ಪಂಜಾಬಿ ಇರಬೇಕು. ಅವನನ್ನು ನೋಡಿದರೆ ಹಾಗೇ ಕಾಣಿಸುತ್ತೆ. ಕನ್ನಡ ಅಷ್ಟಿಷ್ಟು ಬರುತ್ತೆ. ಸಧ್ಯ,ಮನುಷ್ಯ ದಯಾವಂತನಾಗಿ ತೋರುತ್ತಾನೆ. ಮುಂದೆ ನೋಡಬೇಕು; ಈಗಲೇ ಏನೂ ಹೇಳುವಂತಿಲ್ಲ.''

''ಶಾರದಾ ಕರ್ವೆ ಇರುತ್ತಾಳಷ್ಟೆ?''

''ಹೌದು...ಅವಳಲ್ಲೇ ಕೆಲಸ ಮಾಡುತಿದ್ದಾಳೆ. ಈವರೆಗೆ ಏನು ತೊಂದರೆಯಿಲ್ಲ.''

''ತಂದೆಯನ್ನು ಕೇಳಬೇಡವೇ?''

''ಮೊದಲು ಕೆಲಸ ಸಿಗಲಿ, ಅನಂತರ ನಿಧಾನವಾಗಿ ಹೇಳುವೆ.''

ಸ್ವಾಮಿನಿ ಸಮಾಧಾನದ ಉಸಿರಾಡಿದಳು.

* * *

ಶಕೀಲಳ ಪತ್ರವಾರಾಹೀ

....ಅಮ್ಮಾ, ಮಳೆ. ಮಳೆ. ಹಗಲಿರುಳೂ ಧೋಧೋ ಎಂದು ಸುರಿಯುವ ಕುಂಭದ್ರೋಣ ಮಳೆ. ಮಳೆಯ ಹೊಡೆತ ತಡೆಯಲಾರದೆ ತತ್ತರಿಸುತ್ತಿದೆ ಜೀವರಾಶಿ. ಎಷ್ಟೋ ಮನೆಗಳು ಕುಸಿದುವು. ಇನ್ನೆಷ್ಟೋ ಮನೆಗಳು ಕೊಚ್ಚಿಹೋದುವು. ಪ್ರಾಣನಷ್ಟ, ಆಸ್ತಿ ನಷ್ಟ, ಕೆಲಸ ನಷ್ಟ, ಯಾವುದಕ್ಕೂ ಕೊರತೆ ಇಲ್ಲ. ಮೂರು-ನಾಲ್ಕು ದಿನಗಳಿಂದ ಕಾರ್ಯಾಗಾರಗಳು ಕದ ಮುಚ್ಚಿಕೊಂಡಿವೆ. ಜನಜೀವನದ ಅಸ್ತವ್ಯಸ್ತ. ನಿನ್ನೆಯಿಂದ ಮಳೆಯ ರಭಸ ಕಡಿಮೆಯಾಗಿರುವುದನ್ನು ನೋಡಿದರೆ ಇಂದು ನಾಳೆ ಮಳೆ ನಿಲ್ಲದಿದ್ದರೂ ಅನಂತರ ಪೂರ್ತಿನಿಲ್ಲಬಹುದು, ಎನಿಸುತ್ತೆ.

ಶ್ಯಾಮಲಾ ಕೆಲಸಕ್ಕೆ ಪ್ರಯತ್ನಿಸಿದ್ದಾಳೆಯೇ? ಕೆಲಸ ಸಿಗುವ ಸಂಭವವಿದೆಯೇ? ಶರತ್ ಈಗ ಹೇಗಿದ್ದಾನೆ ? ಈಗಣ ಚಟುವಟಿಕೆಗಳೇನು? ಓದಿನ ಕಡೆ ಸರಿಯಾಗಿ ಗಮನ ಕೊಡುತ್ತಾನೆಯೇ? ಅವನನ್ನು ಅಂಕೆಯಲ್ಲಿಟ್ಟುಕೊಳ್ಳುವುದು ಒಳ್ಳೆಯದು.

ಇನ್ನು ಪತಿಮಹಾಶಯನ ಕಥೆ. ಮಳೆಯಲ್ಲಿ ಮನೆಗೆ ಬೇಕುಬೇಕಾದ ಅಗತ್ಯಗಳನ್ನು ಸ್ವತಃ ಪೂರೈಸಿಕೊಳ್ಳಬೇಕಾದರೆ ಸಾಕುಸಾಕಾಯಿತು. ಮನೆಯಿಂದ

ಹೊರಡಲಿಲ್ಲ ಮಹರಾಯ. ನೆರೆಹೊರೆಯವರೊಡನೆ ಇಸ್ಪೀಟು ಆಟ. ಮಾದಕ ಪಾನೀಯದ ಮೋಜು. ರಾತ್ರಿ ಹನ್ನೊಂದು ಗಂಟೆಯಾದರೂ ಊಟದ ನೆನಪಿಲ್ಲ. ನಾನು ಕಾದು ಕಾದು ಸೋತು ಊಟಮಾಡಿದರೆ ಸಿಡಿದು ಬೀಳುವ. ತುದಿ ಮೂಗಿನ ಸಿಟ್ಟಿಗೆ ತುಪ್ಪ ಬಳಿವ. ಸ್ವಾರ್ಥ, ಸ್ವಾರ್ಥದ ಪರಮಾವಧಿ. ಅ ಇಂದ ಳ ವರೆಗೆ ನನ್ನದೇ ಕಾರ್ಯಗಾರ. ಈಗವರು ಮನೆ ಖರ್ಚಿಗೆ ಕೊಡುವುದು ಮುನ್ನೂರು ರೂಪಾಯಿ ಮಾತ್ರ. ಉಳಿದದ್ದೆಲ್ಲಾ ನನ್ನ ದುಡಿಮೆಯೇ. ತಿಂಗಳ ಕೊನೆಯಲ್ಲಿ ನನ್ನ ಕೈಬರಿದೋ ಬರಿದು. ಎಷ್ಟೆಷ್ಟು ಲೆಕ್ಕಕೊಟ್ಟು ಹೇಳಿಕೊಂಡರೂ ಬದಲಿಸುವ ವ್ಯಕ್ತಿಯಲ್ಲ ಲೋಕೇಶ್. ಮೊನ್ನೆ ನಾನು ದುಃಖದಿಂದ ಹೇಳಿದೆ ''ನಾನು ಬೇರೆ ಪ್ಲಾಟ್ ತೆಗೆದು ಕೊಂಡು ಬೇರೆ ವಾಸಿಸುವೆ.''

''ಹೋಗು, ಇಂದೇ ಹೊರಟು ಹೋಗು!'' ಎಂದು ಬಿಟ್ಟರು. ನಾನು ಹೇಗೂ ಹೋಗುವುದಿಲ್ಲವೆಂದು ಗೊತ್ತು. ಕೊನೆಗೆ ನಾನೇ ಸೋಲಬೇಕಾಯ್ತು. ಅವರ ಮುನ್ನೂರು ರೂಪಾಯಿ ಒಂದು ವಾರಕ್ಕೂ ಸಾಲದು. ಮೆಂಟಲ್ ವರ್ಕ್ ಮತ್ತು ಫಿಜಿಕಲ್ ವರ್ಕ್ ಎರಡರಿಂದ ನನ್ನ ಸ್ಥಿತಿಗತಿ ಏನಾಗಿರಬೇಡ? ಮೇಲಾಗಿ ಮಕ್ಕಳಿಗೆ ಟ್ಯೂಶನ್ ಹೇಳದಿದ್ದರೂ ನಡೆಯುವಂತಿಲ್ಲ. ಅಡಿಗೆ ಮನೆಯಲ್ಲೇ ಕುಳ್ಳಿರಿಸಿಕೊಂಡು ಪಾಠ ಹೇಳುವೆ.

ಈ ಮನುಷ್ಯನನ್ನು ದುರಸ್ತು ಮಾಡುವುದಾಗಲಿ, ನನ್ನ ಬಾಳು ಸುಂದರ ವಾಗುವುದಾಗಲೀ ಕನಸಿನ ಮಾತು. ನಾನು ಕೆಲಸ ಹಿಡಿದುದು ನನ್ನ ಶ್ರಮವನ್ನು ಹೆಚ್ಚಿಸಿದರೂ ಮುಂದಿನ ದಾರಿಗೊಂದು ಬುತ್ತಿ...ಎಂಬ ಸಮಾಧಾನವೂ ಇದೆ. ಆದ್ದರಿಂದ ಕೆಲಸ ಬಿಡಲಾರೆ.

ಆಗಲೇ ರಾತ್ರಿ ಹತ್ತುಗಂಟೆ. ಅವರಿನ್ನೂ ಊಟಕ್ಕೆ ಬಂದಿಲ್ಲ. ಮುಂದಿನ ಕೊಠಡಿಯಲ್ಲಿ ಕುಡಿತ ಇಸ್ಪೀಟುಗಳ ಮೋಜು. ನಡೆದಷ್ಟು ಕಾಲ ನಡೆಯಲಿ. ನಾನು ಏನೂ ಮಾಡಲಾರೆ. ಮಕ್ಕಳು ಅವರ ದಾರಿ ಹಿಡಿಯದಿದ್ದರೆ ಸಾಕು...ನಾನು ಕಟ್ಟಿದ ಸುಂದರ ಬದುಕಿನ ಕನಸು ಈಗಾಗಲೇ ಮುರಿದು ನುಚ್ಚುನುರಿಯಾಗಿದೆ. ಮುಂದೆ ಕಾದ ನೋಡುವ ಶಕ್ತಿ ಅಥವಾ ಆಸೆ ಅಥವಾ ಸಹನೆ ಅಥವಾ ಸಮಯ.... ಯಾವುದಾದರೂ ಕೈಗೂಡಿತೇನೋ....

* * *

ಶಾಂತಲಾ ಅಕ್ಕನ ಕಾಗದವನ್ನು ಓದಿಕೊಂಡಳು. ಅದರಲ್ಲಿ ತನಗಾಗಿ ಒಂದಕ್ಷರವೂ ಇಲ್ಲ. ಅವಳು ನನ್ನನ್ನು ಸಂಪೂರ್ಣ ಮರೆತು ಬಿಟ್ಟಿರಬಹುದು.

ಹೋಗಲಿ, ಎಷ್ಟಾದರೂ ಮೂಲೆಗುಂಪಾದ ಜೀವ ಎಂದಮೇಲೆ ನಿರ್ಲಕ್ಷ್ಯ ಸಹಜ. ತನ್ನ ಕಷ್ಟವನ್ನು ಬಾಯಿತುಂಬ ಬಣ್ಣಿಸುವ ಅವಳು ನನ್ನ ಕಷ್ಟವನ್ನು ಸಂಪೂರ್ಣ ಮರೆತುಬಿಟ್ಟಿದ್ದಾಳೆ. ಅದೇ ಆಶ್ಚರ್ಯ! ಎಲ್ಲರ ದೃಷ್ಟಿಯೂ ಅವರವರ ಮೂಗಿನ ನೇರಕ್ಕೇ ಇರಲಿ, ಭಗವಂತ ನನ್ನ ಬದುಕಿಗೆ ಇತಿಶ್ರೀ ಹಾಡಿದರೆ ಸಾಕು. ಯಾರು ಜೀವನಕ್ಕೆ ಆಧಾರವಾಗಬಲ್ಲರೋ ಅವರಿಗೆ ಆಯಸ್ಸು ಕೊಡಬೇಕು ದೇವರು. ನನಗೂ, ನನ್ನಂತಹವರಿಗೂ ಖಂಡಿತ ಕೊಡಕೂಡದು....

ಆಲೋಚನೆಯ ಚಕ್ರ ತಲೆಯಲ್ಲಿ ಸುಳಿಸುತ್ತುತ್ತಲೇ ಇತ್ತು. ಕಾಗದವನ್ನು ಮೊದಲಿನಂತೆಯೇ ಮಡಿಚಿ ಲಕೋಟೆಯೊಳಗಿಟ್ಟು ಕರವಸ್ತ್ರ ಹೊಲಿಯ ತೊಡಗಿದಳು. ಸ್ವಲ್ಪ ಹೊತ್ತು ಹೊಲಿಯುವುದರೊಳಗೇ ಕೈಗಳೂ, ಕಣ್ಣುಗಳೂ ಬಳಲುತ್ತವೆ. ಅಲ್ಪ ವಿಶ್ರಾಂತಿಯ ನಂತರ ಪುನಃ ಹೊಲಿಗೆ ಪ್ರಾರಂಭ. ಇಂಥ ಪರಿಸ್ಥಿತಿಯಲ್ಲಿ ಏಕೆ ಬದುಕಬೇಕು ಎಂಬ ಪ್ರಶ್ನೆ ಏಳುತ್ತಲೆ ಇರುತ್ತದೆ. ಪುಟ್ಟ ಹುಡುಗಿ ಶಾಂತಮೂರ್ತಿಯಾಗಿ ಯೋಚಿಸುತ್ತಲೇ ಇರುತ್ತಾಳೆ. ಎದೆಯಾಳದಲ್ಲಿ ತುಳುಕುವ ಕಣ್ಣೀರು ಹೃದಯದ ಗಾಯವನ್ನು ತೊಳೆದರೂ ಮನಸ್ಸಿಗೆ ನೆಮ್ಮದಿ ಯನ್ನು ತರಲಿಲ್ಲ.

ಹಿತ್ತಿಲ ಬಾಗಿಲಿನಿಂದ ಒಳ ಬಂದ ಪಾಂಚಾಲಿ ತಾನೊಂದು ಬೊಂಬೆ ಕೊಂಡು ಕೊಂಡುದುದನ್ನು ಸಂತಸದಿಂದ ತೋರಿ ''ಈ ದಿನ ನಾನು ಶಾಲೆಯಿಂದ ಹಿಂದಿರುಗುವವರೆಗೆ ನೀನು ಇಟ್ಟುಕೊಂಡಿರು. ಆಟ ಆಡಿದಂತಾಗುತ್ತೆ. ನಾನು ಸಂಜೆಯಲ್ಲಿ ಒಯ್ಯುವೆ.'' ಎಂದಳು.

ಶಾಂತಲಾ ಅದನ್ನು ಕಣ್ತುಂಬ ನೋಡಿದಳು. ನಿಜಕ್ಕೂ ಸುಂದರವಾದ ಬೊಂಬೆ. ಅದರಿಂದ ಸಂತಸ ಮೂಡಿತು. ಕೂಡಲೇ ಎದೆಗಪ್ಪಿಕೊಂಡು ''ನನಗೂ ಇಂತಹ ಬೊಂಬೆ ಬೇಕಿತ್ತು...ಹೋಗಲಿ ಬಿಡು. ಈ ನತದೃಷ್ಟ ಜನ್ಮಕ್ಕೆ ಇದೆಲ್ಲಾ ಏಕೆ ಬೇಕು?'' ಎಂದಳು ನೀರಸದನಿಯಲ್ಲಿ.

''ನೀನು ಸದಾ ಬೇಸರ ಪಟ್ಟುಕೊಳ್ಳುತ್ತಿ. ಅದಕ್ಕೇ ಕಾಲು ವಾಸಿಯಾಗ ಲೊಲ್ಲದೇನೋ. ನೀನು ಬೇಸರ ಪಟ್ಟುಕೊಳ್ಳಬೇಡ ಆಯಿತೇ? ಎಲ್ಲರೂ ಹೇಳುತ್ತಾರೆ ಬೇಸರಪಟ್ಟುಕೊಂಡರೆ ಕಾಹಿಲೆ ಹರಿಯುವುದಿಲ್ಲ ಅಂತ. ನೀನಿನ್ನು ಬೇಸರಪಟ್ಟುಕೊಂಡರೆ ನನ್ನಾಣೆ! ಆಮೇಲೆ ನಾನು ಇಲ್ಲಿಗೆ ಬರುವುದೇ ಇಲ್ಲ. ನಿನಗೆ ಟೂ ಟೂ ಹೇಳಿ ಬಿಡುವೆ ಅಷ್ಟೆ!''

ಆ ತಕ್ಷಣ ಶಾಂತಲಾ ಅವಳ ಎರಡು ಕೈಗಳನ್ನೂ ಹಿಡಿದುಕೊಂಡು '' ಪಾಂಚಾಲೀ

ದಮ್ಮಯ್ಯ ಅನ್ನುವೆ. ಬೇಸರ ಪಟ್ಟುಕೊಳ್ಳಬೇಡ ಆಯಿತೇ? ಸಂಜೆಯಲ್ಲಿ ಬಂದು ನಿನ್ನ ಪಾಠವನ್ನೂ ತಿಳಿಸಿ ಬೊಂಬೆ ತೆಗೆದುಕೊಂಡು ಹೋಗು. ನಿನಗೆ ಎಷ್ಟು ಥ್ಯಾಂಕ್ಸ್ ಹೇಳಿದರೂ ಸಾಲದು.''

ಪಾಂಚಾಲಿ ನಗುತ್ತ ಹೊರಟಳು. ಶಾಂತಲಾ ಬೊಂಬೆಯನ್ನು ಎದೆಗೊತ್ತಿಕೊಂಡು ಮುದ್ದಾಡಿದಳು. ಕೆಂಪು ರಂಗುಗುವ ಮುದ್ದು ಬೊಂಬೆಗೂ ತನ್ನ ರಕ್ತ-ಮಾಂಸರಹಿತ ಸ್ಥಿತಿಗೂ ಹೋಲಿಸಿಕೊಂಡರೆ ಮನಃಪ್ರಾಣಗಳು ಮುದುಡುತ್ತವೆ. ಆದರೂ, ಆ ಸುಂದರವಾದ ಬೊಂಬೆ ಎಷ್ಟು ಮೋಹಕವೋ...ಆನಂದವನ್ನೂ ಆನಂದಿತಗೊಳಿಸುವಂತಹ ಮಧುರ ಮೋಹನ ರೂಪು.

* * *

ಶ್ಯಾಮಲಾ ಕೆಲಸದ ಆರ್ಡರ್ ತೆಗೆದುಕೊಳ್ಳಲು ಡಾ॥ಫರೀದ್ ಆಫೀಸಿನ ಬಾಗಿಲಲ್ಲಿ ನಿಂತು ಮೆಲ್ಲನೆ ಕಟ ಕಟ ಸದ್ದು ಮಾಡಿದಳು.

''Yes !''

ಶ್ಯಾಮಲಾ ನಯವಿನಯಗಳ ವಶೀಭೂತಳಾಗಿ ಒಳಗಡೆ ಪದಾರ್ಪಣೆ ಮಾಡಿದಳು. ಅಲ್ಲಿ ಇನ್ನಾರೂ ಇರಲಿಲ್ಲ. ಆತನ ದೃಷ್ಟಿ ಒಮ್ಮೆ ಅಡಿಯಿಂದ ಮುಡಿಯವರೆಗೂ ಹರಿದು ಹಿಮ್ಮರಳಿತು.

''ನೀವು ಎಲ್ಲಿಯವರೆಗೆ ಓದಿದ್ದೀರಿ?''

''ಎರಡನೇ P.U.C.ವರೆಗೆ.''

''ಇಂಗ್ಲೀಷ್ ಮೀಡಿಯಮ್ ಅಥವಾ ಕನ್ನಡ ಮೀಡಿಯಮ್?...ಯಾವುದು ನಿಮ್ಮ ಐಚ್ಛಿಕ? ನಿಮಗೆ ಇಂಗ್ಲೀಷ್ ಚೆನ್ನಾಗಿ ಬರುತ್ತದೆಯೆ?''

''ಹೌದು, ಬರುತ್ತೆ.''

''ಇಷ್ಟಕ್ಕೇ ಓದು ಬಿಟ್ಟಿದ್ದೇಕೆ?''

''ಮನೆಯಲ್ಲಿ ತುಂಬ ಕಷ್ಟ, ಅದಕ್ಕೇ.....''

''ನಿನ್ನ ತಂದೆಯ ಹೆಸರೇನು?''

''ಗಂಗಾರಾಂ.''

''ಓಹೋ ! ನಾಥೂರಾಂ ಗೋಡ್ಸೆಯ ತಮ್ಮ!

ಫರೀದ್ ತುಂಟ ನಗೆ ಬೀರಿದ.

ಶ್ಯಾಮಲಾ ಮಾತಾಡದೆ ತಲೆಬಾಗಿದಳು. ಅಂತರಾತ್ಮ ಕೂಗಿ ಹೇಳಿತು. ''ಅವನಿಗಿಂತ ಇವನೇನೂ ಕಡಿಮೆಯವನಲ್ಲ!''

"ತಂದೆಯ ದುಡಿಮೆ ಸಂಸಾರಕ್ಕೆ ಸಾಲುತ್ತಿಲ್ಲವೇ?"

"......"

"I am so sorry."

"ನಿಮಗೆ ಟೈಪಿಂಗ್ ಬರುತ್ತದೆಯೇ?"

"ಇಲ್ಲ."

"ಕಲಿತುಕೊಳ್ಳುವ ಯೋಚನೆ ಇದೆಯೇ?"

"ಇದೆ...ಸಮಯ ಸಂಕೋಚ ಅಷ್ಟೇ"

"ಮನೆಯಲ್ಲಿ ತಾಯಿ ಇದ್ದಾರೆಯೇ?"

"ಇದ್ದಾರೆ...."

"ಮತ್ತೆ ಬೆಳಿಗ್ಗೆ-ಸಾಯಂಕಾಲ ಏನು ಮಾಡುತ್ತೀರಿ?"

"ಪೋಲಿಯೋ ಆದ ತಂಗಿ ಇದ್ದಾಳೆ. ಅವಳನ್ನು ನೋಡಿಕೊಳ್ಳುವೆ."

"ಓಹೋ..! ತುಂಬಾ ನತದೃಷ್ಟ ಹುಡುಗಿ."

ಸ್ವಲ್ಪ ಹೊತ್ತು ಯೋಚಿಸಿ ಪುನಃ ಅಂದ "ಇಲ್ಲಿ ಲಂಚ್ ಟೈಮಿನಲ್ಲೇ ಟೈಪಿಂಗ್ ಕಲಿಯಲು ಅವಕಾಶವಿದೆ. ನಮ್ಮ ಪಕ್ಕದ ಬಿಲ್ಡಿಂಗ್‌ನಲ್ಲಿ ಆಫೀಸಿನ ಸಿಬ್ಬಂದಿಗಾಗಿಯೇ ಟೈಪಿಂಗ್ ಕಲಿಸುವ ಸಂಸ್ಥೆ ಇದೆ. ಅಲ್ಲಿ ಸೇರಿಕೊಂಡರೆ ಈ ಕೆಲಸದೊಂದಿಗೆ ಟೈಪಿಂಗ್ ಕಲಿಯಬಹುದು. ಕಲಿಯುತ್ತೀರೇನು?"

"ಆಗಲಿ ಸಾರ್."

"ಒಳ್ಳೆಯದು, ಅಗೋ ಆ ಕಪಾಟಿನಲ್ಲಿ ಆರ್ಡರ್ ಫಾರಂ ತೆಗೆದುಕೊಡಿರಿ."

ಶ್ಯಾಮಲಾ ಕಪಾಟಿನಲ್ಲಿ ತಡುಕಿ ಒಂದು ಫಾರಂ ತೆಗೆದುಕೊಟ್ಟಳು.

"ಇದರ ಕಾಲಂಗಳಲ್ಲಿ ನಿಮ್ಮ ಹೆಸರು ವಿಳಾಸ ಭರ್ತಿಮಾಡಿರಿ"

ಅವಳು ಅದರ ಎಲ್ಲಾ ಪಂಕ್ತಿಗಳನ್ನು ಅನುಕ್ರಮವಾಗಿ ತುಂಬಿ ಭರ್ತಿ ಮಾಡಿದಳು. ಡಾ॥ ಫರೀದ್ ಅವಳ ದೇಹ ಶುಕ್ತಿಯನ್ನು ಗಮನಿಸುತಿದ್ದು ಮನದಲ್ಲೇ ಹರ್ಷಿತನಾದ. ಅವಳು ಭರ್ತಿಮಾಡಿದ ನಂತರ 'ಇನ್ನೇನು?' ಎಂಬಂತೆ ತಲೆಯೆತ್ತಿ ನೋಡಿದಳು. ಬಾಯಿ ಬಿಟ್ಟು ಏನೂ ಕೇಳಲಿಲ್ಲ.

"ಸಹಿ ಹಾಕಿರಿ."

ಅನಂತರ ಅವನು ಸಹಿ ಹಾಕಿ ಕೆಲಸದ ಆರ್ಡರ್ ಕೊಟ್ಟ.

ಒಂದೇ ಬಾಣಕ್ಕೆ ಎರಡು ಹಕ್ಕಿ! ಇದರೊಂದಿಗೆ ಟೈಪಿಂಗ್ ಸಹ ಕಲಿತು ಕೊಳ್ಳುವೆ. ಒಳ್ಳೆಯ ಅವಕಾಶವೇ ಸಿಕ್ಕಿದೆ. ಕೆಲಸವನ್ನೇನೋ ಹಿಡಿದಿದ್ದಾಯ್ತು. ತಂದೆಗೆ

ಹೇಳಲಿಲ್ಲ. ಹೇಳಹೋದರೆ ಇನ್ನಾವ ರಾಮಾಯಣವೋ...ಕಿವಿಯ ಸನಿಹ ದಲ್ಲಿಯೇ ಯಾವುದೋ ಅಶರೀರವಾಣಿ ಕೂಗಿ ಹೇಳಿತು.

ಸುಖದುಃಖಗಳ ಗಣಿಯಾಗಿ ಮನೆಯನ್ನು ಸೇರಿದಳು ಶ್ಯಾಮಲಾ.

ನಡುಮನೆಗೆ ಪದಾರ್ಪಣೆ ಮಾಡುತ್ತಲೂ ಶಾಂತಲಾ ಆತುರದಿಂದ ಕೇಳಿದಳು "ಏನಾಯ್ತು ಶ್ಯಾಂ? ಕೆಲಸ ಸಿಕ್ಕಿತೇ?"

"ಅಪ್ಪ ಇದ್ದಾರೆಯೇ?" ಪಿಸುದನಿಯಲ್ಲಿ ಕೇಳಿದಳು ಶ್ಯಾಮಲಾ; ಕೊಠಡಿಯ ಕಡೆ ಕಣ್ಣು ಹೊರಳಿಸಿ.

"ಇಲ್ಲ. ಇನ್ನೂ ಬಂದಿಲ್ಲ" ತಲೆ ಆಡಿಸಿದಳು ಅವಳು.

" ನೀನು ಅಪ್ಪನ ಮುಂದೆ ಈ ಸುದ್ದಿ ಎತ್ತಬೇಡ....ಕೆಲಸ ಸಿಕ್ಕಿದೆ. ಅಪ್ಪನಿಗೆ ತಿಳಿಸದೆಯೇ ಎಷ್ಟು ಕಾಲ ನಡೆಯುತ್ತೋ ನಡೆಯಲಿ. ಅನಂತರ ದೇವರೇ ಗತಿ."

೫

ಹೊರಗಡೆ ವಾಹನಗಳ ಗದ್ದಲ. ಒಳಗಡೆ ಮನೋವಿಪ್ಲವ.

ಕುಳಿತು ಮಲಗಿ ಮೈಸೋತು ಹೋಗಿದೆ. ಒಳ-ಹೊರಗೆ ಸ್ವಲ್ಪವಾದರೂ ಅಡ್ಡಾಡುವಂತಿಲ್ಲವಲ್ಲಾ ಎಂಬುದು ಒಡಲ ಸಂಕಟ. ಮೂರು ಕರವಸ್ತ್ರಗಳನ್ನು ತಯಾರಿಸಿದ್ದಾಯಿತು. ನಾಲ್ಕನೆಯ ಕರವಸ್ತ್ರಕ್ಕೆ ಹೂವಿನ ಚಿತ್ರ ಬರೆದುಕೊಡುವೆ ಎಂದ ಶ್ಯಾಮಲಳಿಗೆ ಬಿಡುವು ದೊರೆಯದೆ ಅದು ಹಾಗೇ ಉಳಿದಿತ್ತು. ನಾಲ್ಕುವಸ್ತ್ರ ಕೊಟ್ಟರೆ ನಾಲ್ಕು ರೂಪಾಯಿ ದೊರೆಯುತ್ತೆ. ಅದರಲ್ಲಿ ನಿನಗೆ ಇನ್ನಷ್ಟು ಬಟ್ಟೆ ತಂದುಕೊಡುವೆ ಅಂದಿದ್ದಾಳೆ ಶ್ಯಾಮಲಾ. ಅವಳಿನ್ನೂ ಮನೆಗೆ ಬಂದಿಲ್ಲ. ಅವಳು ಬರುವತನಕ ಸುಮ್ಮನೇ ಹೊತ್ತು ಕಳೆಯುವುದು ಎಷ್ಟು ಕಷ್ಟ...ಎಂದು ಶಾಂತಲಾ ಬೇಸರಪಟ್ಟು ಕೊಳ್ಳುತ್ತಿರುವಾಗಲೇ ಶರತ್ ಒಳಗಡೆ ಪದಾರ್ಪಣೆ ಮಾಡಿದ.

" ಇಂದು ಶಾಲೆಗೆ ಹೋಗಿದ್ದೆಯಾ ಶರತ್?"

"ಹೌದು."

"ನಿಮ್ಮ ಲೈಬ್ರರಿಯಿಂದ ಒಳ್ಳೆ ಪುಸ್ತಕ ತಂದುಕೊಡು ಶರತ್."

"ನಿನಗಾಗುವಂತಹ ಸಣ್ಣ ಸಣ್ಣ ಪುಸ್ತಕಗಳು ನಮ್ಮ ಲೈಬ್ರರಿಯಲ್ಲಿ ಇಲ್ಲವಲ್ಲಾ."

"ಯಾವುದೋ ಒಂದು ತಂದುಕೊಡು. ಸಾಧ್ಯವಾದರೆ ಓದುವೆ."

"ನಿನ್ನಿಂದ ಸಾಧ್ಯವಾಗದು ನನಗೊತ್ತು. ಮತ್ತೇಕೆ ಪುಸ್ತಕ ತರುವ ಶ್ರಮ?"

ಆ ಮಾತಿಗೆ ತುಟಿಗಳು ಬಿರಿಯಲಿಲ್ಲ. ನೊಂದು ನೀರಾಯಿತು ಎಳೆಯ ಮನಸ್ಸು. ತಲೆ ಬಾಗಿ ಕರವಸ್ತ್ರಗಳನ್ನು ಮಡಿಸಿಡತೊಡಗಿದಳು. ದಾರ ಸೂಜಿಗಳ ಜೊಡಣೆ ಆಗಿತ್ತು. ಓದಲು ಪುಸ್ತಕವಿಲ್ಲ; ಹೊಲಿಯಲು ಬಟ್ಟೆಯಿಲ್ಲ. ನೋಟ ತಲೆಬಾಗಿಲ ಕಡೆ ಹರಿಯಿತು; ಶ್ಯಾಮಲೆ ಬಂದಳೇನೋ....ಎಂಬ ಆಸೆ ಮನದಲ್ಲಿ. ಆದರೆ ದೃಷ್ಟಿಗೆ ಬಿದ್ದುದು ಅಪ್ಪ. ಎಂದೂ ತಲೆಯೆತ್ತಿ ನೋಡದವಳ ನೇರ ದೃಷ್ಟಿಗೆ ಇಂದು ಕಂಡದ್ದು ಅಪ್ಪನೆ! ತಕ್ಷಣ ತಲೆಬಾಗಿದಳು. ಪುಟ್ಟ ದೇಹದಾದ್ಯಂತ ಮೆಲ್ಲನೆ ಸಣ್ಣ ಝುರಿಯಂತೆ ಚಳಿ ಮೂಡಿ ನವಿರು ನಿಮಿರಿತು.

ಶರತ್ ಯಾವ ಗಳಿಗೆಯಲ್ಲಿ ಒಳಗಡೆ ಜಾರಿಕೊಂಡಿದ್ದನೋ ಉಳಿದವಳು ಶಾಂತಲಾ ಮಾತ್ರ. ದಪದಪ ಸದ್ದುಮಾಡುವ ಬೂಡ್ಸುಗಳ ಸಹಿತ ಒಳರೂಮಿಗೆ ನಡೆದ. ಸ್ವಲ್ಪ ಸಮಯದಲ್ಲಿ ಮುಖ ಮಜ್ಜನ ಮಾಡಿ, ಬದಲಿ ಬಟ್ಟೆತೊಟ್ಟು ಟ್ರಿಮ್ಮಾಗಿ ಹೊರಬೀಳುವ ಮುನ್ನ "ಗೌರೀ ಗೌರೀ?" ಎಂದೂ ಕೂಗಿ ಕರೆದ. ಒಳಗಡೆ ಹಿಟ್ಟು ರುಬ್ಬುತಿದ್ದ ಮಡದಿಗೆ ಕೇಳಿಸಲಿಲ್ಲವೇನೋ ಅವಳು ಓಗೊಡಲಿಲ್ಲ. ಗಂಗಾರಾಂ ಎರಡು ಹೆಜ್ಜೆ ಮುಂದೆ ಬಂದು ಸಿಟ್ಟಿನಿಂದ ಏರುದನಿಯಲ್ಲಿ ಗದರಿದ, ಶಾಂತಲೆಯನ್ನು ಕುರಿತು,

"ಕರೆದರೆ ಓಗೊಡಬಾರದೇ ಮೂಳಿ!"

ಅವಳು ಮಿಡಿಕಿ ಬಿದ್ದು "ನೀವು ನನ್ನ ಕೇಳಿದಿರಿ ಎನಿಸಲಿಲ್ಲ ನನಗೆ. ಅಮ್ಮ ಒಳಗಿದ್ದಾರೆ" ಎಂದಳು ಕ್ಷೀಣಿತ ದನಿಯಲ್ಲಿ.

ಆ ವೇಳೆಗೆ ಒಳಗಿದ್ದ ಶರತ್, ಗುಕ್ಕನೆ ನಡುಮನೆಗೆ ಬಂದು ಒದರಿದ "ಯಾವಾಗ ನೋಡಿದರೂ ಮನೆಯಲ್ಲಿ ರೌದ್ರಾವತಾರ! ಇದು ಮನೆಯೇ, ಸಂತೆಯೇ? ನಾವು ಮೂಕ ಮೌನಿಗಳಾಗಿರುವುದರಿಂದಲ್ಲವೇ ಹೀಗೆ?"

ಮಗಹೀಗಾದಾನೆಂದು ಭಾವಿಸಿರದಗಂಗಾರಾಂ ಮತ್ತಷ್ಟು ಸಿಡಿದೆದ್ದ "ಎದುರು ಮಾತಾಡಿದರೆ ನಾಲಿಗೆ ಸೀಳಿಬಿಟ್ಟೇನು? ಮೂರಡಿ ಮೂಳ ನನಗೆ ಹೇಳುವಷ್ಟು ಬೆಳೆದೆಯಾ?"

"ಅಲ್ಲದೆ ಮತ್ತೇನು? ಯಾವತ್ತೂ ಧೂರ್ತತನ! ದುಡಿದ ದುಡ್ಡು ಹಾಳು ಮೂಳಿಗೆ! ಮನೆಯಲ್ಲಿ ನರಕ ಹಿಂಸೆ!"

ಅವನ ಮೇಲೆ ಸಿಟ್ಟಿನಿಂದ ಎಗರಿಹೋದ ಗಂಗಾರಾಂ!

"ಜೋಕೆ! ನನ್ನ ಮೈ ಮುಟ್ಟಿದರೆ ಈಗಲೇ ಮುಗಿಸಿಬಿಡುವೆ! ಅನಂತರ ವಾದರೂ ಈ ಮನೆ ತಣ್ಣಗಿರಲಿ!"

"ಓಹೋ! ಯಜಮಾನ ಮನೆಗೆ ಬಂದರೆ ಬಂದು ವಿಚಾರಿಸಿಕೊಳ್ಳ ಬೇಡವೇ?"

ಗಂಗಾರಾಂ ಪ್ರತಿಯಾಗಿ ಜೋರಿನಿಂದ ನುಡಿದರೂ ಒಂದು ಹೆಜ್ಜೆ ಹಿಮ್ಮೆಟ್ಟಿದ್ದ. ಸಿಟ್ಟು-ರೋಷ-ಅಸಾಹಯಕತೆಗಳಿಂದ ಬುಸುಗುಡಿಯಿತು ಸಿಟ್ಟಿನ ನಾಗರ. ಆ ಹುಡುಗನ ಮುಂದೆ ತನ್ನ ಸೋಲನ್ನು ಒಪ್ಪಿಕೊಳ್ಳುವುದಂತೂ ಸಾಧ್ಯ ವಿಲ್ಲದ ಮಾತು. ಅಂತಲೇ ಅಡಿಗೆ ಮನೆಗೆ ನುಗ್ಗಿದ.ಕೈಯಲ್ಲಿ ಕಾಫಿ ಹಿಡಿದಿದ್ದ ಅವಳು ಹೊಸ್ತಿಲ ಬಳಿ ಕಾದಿದ್ದಾಳೆ. ತಂದೆ ಮಕ್ಕಳ ವಾಗ್ವಾದ ಮುಗಿಯಲಿ ಎಂದು. ಹೃನ್ಮನಗಳ ತಾಪಾನುತಾಪ ಕಂಬನಿಯಾಗಿ ಇಳಿದಿದೆ.

"ಇಂದು ನನಗೆ ಕಾಫಿ ಬೇಡವಾಗಿತ್ತು! ಹೊರಗೆ ಪಾರ್ಟಿಯಿದೆ...ಯಜಮಾನ ಮನೆಗೆ ಬಂದರೆ ಏನುಬೇಕು-ಏನು ಬೇಡ ಎಂಬುದನ್ನು ವಿಚಾರಿಸಿಕೊಳ್ಳದೆ ಕಾಫಿ ಮಾಡಿದ್ದಿ....! ಹೀಗಾದರೆ ಸಾಮಗ್ರಿಗೆಲ್ಲಿಯ ಬೆಲೆ?"

ಅಷ್ಟೇ ಅಲ್ಲ, ಇನ್ನೂ ಕೂಗಾಡಿದ ಗಂಟಲು ಹರಿಯುವವರೆಗೆ. ಗೌರೀಮಾ ಕಾಫಿಯನ್ನು ಒಲೆಯ ಬದಿಯಲ್ಲಿ ಮುಚ್ಚಿಡುವ ನೆಪದಲ್ಲಿ ಇತ್ತ ಬೆನ್ನು ಮಾಡಿದಳು.

ಹೃದಯ ಭಾರಭಾರವಾಗಿತ್ತು. ಈ ರೀತಿನೀತಿಗೆ ಎಂದಾದರೂ ಕೊನೆ ಯುಂಟೇ? ಚಿಂತಾಕ್ರಾಂತತೆಯಲ್ಲಿ ತನ್ನ ಅಸ್ತಿತ್ವವೇ ಸಮೂಲವಾಗಿ ಅಲುಗಾಡು ತ್ತಿದೆ. ಮುಂದೆಂದಾದರೂ ಜೀವನಶಾಂತಿ ಲಭಿಸುತ್ತೆ ಎಂಬುದು ಕನಸಿನ ಮಾತು... ಎಂದು ಚೀರುತ್ತಲೇ ಇದೆ ಅಂತರಾತ್ಮ.

ಶರತ್ ಇನ್ನೂ ಕೂಗಾಡುತ್ತಲೇ ಇದ್ದಾನೆ. ತಂದೆಯ ಸವಾಲಿಗೆ ಸವಾಲಾಗಿ.

* * *

ಶಾಂತಲಾ ನಡುಮನೆಯಲ್ಲಿ ಮೈಮುದಿಡಿ ಮಲಗಿದ್ದಾಳೆ. ಮನದಲ್ಲಿ ಅಂದಿಂದಿನ ದಿನಚರಿಯೆಲ್ಲಾ ಚಲನಚಿತ್ರದಂತೆ ಸುಳಿದಳಿಯುತ್ತಲಿದೆ. ದುಃಖ ದುಗುಡಗಳ ಕೋಟೆ ಎಳೆಯ ಒಡಲು. ಕಾಲಿಗೆ ತೈಲ ಉಜ್ಜುತ್ತ ಆರೇಳು ತಿಂಗಳು ಕಳೆದಿವೆ. ಅದರಿಂದ ಅಂತಹ ಪರಿಣಾಮವೇನೂ ಆಗಿಲ್ಲ. ಇನ್ನು ಆಗುತ್ತೆ ಎಂಬ ನಂಬುಗೆಯೂ ಇಲ್ಲ. ದುಃಖ...ದುಃಖ.

ಅಕ್ಕ-ಅಮ್ಮ ಹೇಳುವುದು ಖಂಡಿತಾ ಕಾಲಕ್ರಮದಲ್ಲಿ ಆಗಿಯೇ ಆಗುತ್ತೆ

ಎಂದು. ಬಹುಶಃ ನನ್ನ ಮನಃಸ್ವಾಂತನಕ್ಕಾಗಿಯೇ ಹೇಳುವ ಮಾತಿರಬಹುದೇನೋ... ಆ ಯೋಚನೆ ಬಂದೊಡನೆಯೇ ದೇಹದಾದ್ಯಂತ ನಸುಕಂಪನದ ಅಲೆ ಹರಿದಾಡತೊಡಗಿತು.

ಹೊರ ಬಾಗಿಲ ಚಿಲಕ ಕಟಕಟನೆ ಅಲ್ಲಾಡಿತು.

ಶಾಂತಲೆಯ ಮನಸ್ಸೆಲ್ಲಾ ಅಕ್ಕನ ಮೇಲೆ. ಐದೂವರೆ ಗಂಟೆಯಾದುದರಿಂದ ಅವಳೇ ಇರಬಹುದು ಎಂಬ ನಂಬುಗೆ. ಒಳಗಿನ ಚಿಲಕ ತೆಗೆದಳು ತಾಯಿ. ಶರತ್ ಬಾಯಿ ತುಂಬಾ ಮಾತಾಡುತ್ತಲೇ ಒಳಬಂದ.

''ಶಾಲೆಯಿಂದ ಬರುತಿದ್ದೀ ತಾನೆ?''

''ಅಲ್ಲಮ್ಮಾ! ಸ್ವರ್ಗದಿಂದ! ನಾಳೆ ಅಪ್ಪ ಅಲ್ಲಿಗೆ ಹೋದರೆ ಏನೇನು ಸೌಕರ್ಯವಿದೆ ನೋಡಿಕೊಂಡು ಬರೋಣ ಅಂತ ಹೋಗಿದ್ದೆ! ಅಲ್ಲಿಯ ವೈಭವ ನೋಡಬೇಕು. ರಾಜಮಹಾರಾಜರನ್ನೂ ಮೀರಿಸುವ ರಾಜೋಪಚಾರ ದೊರೆಯುತ್ತೆ. ಅಪ್ಪ ಅಲ್ಲಿ ತುಂಬ ಸುಖವಾಗಿರುತ್ತಾನೆ, ವಾರ್ಧ್ವಾ ಎಂತಹ ಸುಖ!''

ಎಲ್ಲರ ಮುಖದಲ್ಲೂ ನಗುವಿನಲೆ ಉಕ್ಕಿಹರಿಯಿತು. ಶರತ್ ಬಾಯ್ದೆರೆದು ಕಿಲಕಿಲ ನಗುತ್ತಲೇ ಇದ್ದಾನೆ, ಹಹ್ಹ ಹ್ಹ ಹ್ಹಾ!

''ನಿನ್ನ ತಮಾಷೆ ಸಾಕು....''

''ನೀವಲ್ಲಿಯೂ ಸೇವಕಿಯಾಗಿ ಅಪ್ಪಣೆಗಾಗಿ ಕಾದು ನಿಂತಿದ್ದಿರಿ!''

''ಓ, ಸುಮ್ಮನಿರೋ ಶರತ್!''

''ನಾನೇನಾಗಿದ್ದೆ ಗೊತ್ತೆ? ಅವರ ಚಿನ್ನದ ರಥಕ್ಕೆ ಡ್ರೈವರ್!''

ಆ ವೇಳೆಗೆ ಶ್ಯಾಮಲಾ ಒಳಗಡೆ ಪದಾರ್ಪಣೆ ಮಾಡಿದಳು. ಶರತ್ ಅಟ್ಟಹಾಸ ಅಮ್ಮನ ಮುಖದಲ್ಲಿನ ನಗುವನ್ನು ನೋಡಿ ''ಇದೇನಪ್ಪಾ ವಿಶೇಷ!'' ಎಂದಳು ಪ್ರಸಂಗೋಚಿತವಾಗಿ.

''ಸ್ವರ್ಗದ ವರ್ಣನೆ ಮಾಡುತ್ತಿದ್ದಾನೆ!'' ಶಾಂತಲಾ ಉತ್ತರಿಸಿದಳು.

''ಅಂದರೆ....?''

''ಅವನನ್ನೇ ಕೇಳು.''

''ಏನಪ್ಪಾ ಅದು?''

''ನಾನೀಗ ಸ್ವರ್ಗಕ್ಕೆ ಹೋಗಿ ಬಂದೆ!''

''ಸರಿ... ಏನು ಅದರ ಸಮಾಚಾರ?''

''ನನಗೀಗ ಕ್ರಿಕೆಟ್ ಮ್ಯಾಚಿಗೆ ಹೊತ್ತಾಯ್ತು. ನನಗೊಂದು ಲೋಟ ಕಾಫಿ.''

ಆ ಕೂಡಲೇ ನೀರು ಮನಗೆ ಓಡಿದ, ಹುಡುಗ.

* * *

"ಶಾಂತೀ, ಶಾಂತಲಾ! ಇಲ್ಲಿ ಕೇಳು ಈದಿನ ನನ್ನ ಸಂಬಳ ಬಂದಿದೆ. ಅದರಲ್ಲಿ ನಿನ್ನ ಕಾಲಿಗೆ ಷೂಸ್ಟಾಂಡ್ ಮಾಡಿಸುವೆ. ಅದನ್ನು ಹಾಕಿಕೊಂಡರೆ ನೀನು ಮನೆಯಲ್ಲೆಲ್ಲಾ ಓಡಾಡಬಹುದು. ಡಾಕ್ಟರು ಹೇಳಿ ಎಷ್ಟೋ ಕಾಲವಾಯಿತು. ಹೋಗೋಣ, ಏಳಮ್ಮ... ಅಳತೆ ಕೊಟ್ಟು ಬರಬಹುದು."

"ನಿನ್ನ ಹಣ ನನಗಾಗಿ ಖರ್ಚು ಮಾಡಿದರೆ ನಿನಗೆ ನಷ್ಟವಲ್ಲವೇ? ಮುಂದೆ ಏನಾದರೂ ಪ್ರಯೋಜನವಾಗುವುದಾದರೆ ಖರ್ಚು ಮಾಡುವುದು ಸರಿಯೆ. ಅಲ್ಲದ ಮೇಲೇಕೆ ವ್ಯರ್ಥ ಖರ್ಚು?"

"ಹಾಗೆಲ್ಲಾ ಯೋಚಿಸಿದರೆ ಆದೀತೇ? ಏಳು ಮಗೂ, ಹೋಗಿ ಬರೋಣ. ನಿನಗಾಗಿ ಏನು ಬೇಕಾದರೂ ಮಾಡಬಲ್ಲೆ. ನೀನು ನನ್ನ ಮುದ್ದು ತಂಗಿ, ನಿನ್ನ ಕಾಲು ಸರಿಹೋಗುವುದಾದರೆ ಎಷ್ಟು ಸಂತೋಷವಿದೆ.... ಷೂಸ್ಟಾಂಡ್ ಸಹಿತ ನೀನು ಓಡಾಡಿ ಅಭ್ಯಾಸ ಮಾಡಿಕೊಂಡರೆ ಕಾಲಿಗೆ ಕ್ರಮೇಣ ಬಲಬರಬಹುದೇನೋ... ನೋಡೋಣ. ಪ್ರತಿಯೊಂದೂ ನಮ್ಮ ಪ್ರಯತ್ನ ಅಷ್ಟೆ. ಕಟ್ಟಕಡೆಗೆ ಒಂದಾದರೂ ಫಲಿಸಬಹುದು. ಜೀವನದಲ್ಲಿ ಯಾವತ್ತೂ ಆಶಾವಾದಿಗಳಾಗಿರಬೇಕು. ನೀನು ಸದಾ ಜುಗುಪ್ಸೆಪಟ್ಟುಕೊಳ್ಳುತ್ತಿರುತ್ತಿ. ಅದು ತಪ್ಪು. ಈ ದೇಹ ಚೆನ್ನಾಗಿದ್ದರೆ ನಾವು ಏನೆಲ್ಲಾ ಸಾಧಿಸಬಹುದು? ಒಂದು ಕಾಲಿಲ್ಲದಿದ್ದರೇನಂತೆ? ಊರು ದೊಣ್ಣೆಗಳಿಲ್ಲವೇ? ನಡೆಸುವ ಸಾಧನಗಳಿಲ್ಲವೇ? ಎಲ್ಲಾ ಸೌಕರ್ಯಗಳನ್ನು ಹೊಂದಿರುವ ನಾಗರಿಕ ದಿನಗಳಲ್ಲಿ ನಾವು ಬದುಕಿದ್ದು ವ್ಯಥೆ ಪಡುವುದೇಕೆ? you are my sweet sister!"

ತಂಗಿಯ ತಲೆಯನ್ನು ನೇವರಿಸಿ ಮುದ್ದುಗೈದು ತಲೆಬಾಚಿ ಬಟ್ಟೆ ಬದಲಿಸಿ ಷೂ ಅಂಗಡಿಗೆ ಆಟೋದಲ್ಲಿ ಕರೆದುಕೊಂಡು ಹೋಗಿ ಷೂ ಸ್ಟ್ಯಾಂಡಿಗೆ ಆರ್ಡರ್ ಕೊಟ್ಟು ಬಂದಳು.

"ಈ ಸಲಿ ಷೂ. ಮುಂದಿನ ಸಲಿ ನಿನಗೆ ಏನೆಲ್ಲಾ ಬೇಕೋ ಅದನ್ನೆಲ್ಲಾ ಅಲ್ಪಸ್ವಲ್ಪವಾಗಿ ತಂದುಕೊಡುವೆ. ಅಷ್ಟೇ ಅಲ್ಲ, ನೀನು ಕುಳಿತಲ್ಲೇ ಸಂಪಾದಿಸುವ ಬಗೆಯನ್ನೂ ಹೇಳಿಕೊಡುವೆ. ನಿನಗೆ ನಾಲ್ಕು ವಸ್ತ್ರದಿಂದ ನಾಲ್ಕು ರೂಪಾಯಿ ಬರುತ್ತೆ. ಅದರಿಂದ ಅರ್ಧ ಮೀಟರ್ ಬಟ್ಟೆ ತಂದರೆ ಎಂಟು ಕರವಸ್ತ್ರಗಳಾಗುತ್ತವೆ. ಅಂದರೆ ಅದರಿಂದ ಉತ್ಪತ್ತಿ ದ್ವಿಗುಣ. ನೀನು ಸರಾಗವಾಗಿ ಕೆಲಸ ಮಾಡಿದರೆ ದಿನಕ್ಕೊಂದು

ಕರವಸ್ತ್ರ ಹೊಲಿಯಬಹುದು. ದಿನಕ್ಕೊಂದಾದರೆ ತಿಂಗಳಿಗೆ ಮೂವತ್ತು ರೂಪಾಯಿ! ಈಗಾಗಲೇ ವ್ಯರ್ಥ ಕಾಲ ಕಳೆದುಹೋಯಿತು. ಇನ್ನು ಕಳೆಯಬಾರದು. ನಿನ್ನ ದುಡಿಮೆ ನಿನ್ನ ಔಷದಿ-ಟಾನಿಕ್-ಬಟ್ಟೆ-ದಾರ ಎಲ್ಲಕ್ಕೂ ಆಗುತ್ತೆ. ಹಾಗಾಗುವುದಾದರೆ ಎಂತಹ ಹೆಮ್ಮೆ? ಎಷ್ಟು ಆನಂದ....? ನೀನು ಅಂತಹ ಆನಂದವನ್ನು ಕಂಡುಕೊಳ್ಳಬೇಕು. ''

ಶಾಂತಲಾ ಮುಗುಳು ನಗುತ್ತ ಕಂಬನಿ ಮಿಡಿದಳು. ಕಂಬನಿ ಮಿಡಿಯುತ್ತ ಮುಗುಳು ನಕ್ಕಳು. ಅಕ್ಕನ ಒತ್ತಾಸೆಯಿಂದ ಹೊಸ ಬೆಳಕನ್ನು ಕಂಡಳು ಪುಟ್ಟ ಹುಡುಗಿ.

* * *

ಕ್ಲಬ್ಬಿನ ಆವರಣದಲ್ಲಿ ನಾಗರಿಕರ ಟೀಪಾರ್ಟಿ. ಸುಮಾರು ನಲವತ್ತು ಐವತ್ತು ಮಂದಿಯ ಸಹಕೂಟ. ರಂಗುರಂಗಿನ ಉಡುಪು ತೊಟ್ಟ ನಾಗರಿಕ ಸ್ತ್ರೀಪುರುಷರ ಸುಖಭೋಜನ. ಅವರಲ್ಲಿ ಗಂಗಾರಾಂ ಮತ್ತು ಘೋರ್ಪಡೆ ಒಂದೆಡೆ ಕುಳಿತು ಕೊಂಡರು.

ವಿದೇಶಿ ಮದಿರೆ ರಂಗುರಂಗಿನಿಂದ ಮೆರೆಯುತ್ತಿದ್ದಾಳೆ. ವಿವಿಧ ಖಾದ್ಯಗಳ ಕಂಪು ಇಂದ್ರಿಯಗಳನ್ನು ಮುತ್ತುತ್ತಿದೆ. ಸ್ತ್ರೀಪುರುಷರ ಮಾತುಕತೆ-ಚಕ್ಕಂದ-ಆಮೋದಗಳು ಕಿಲಕಿಲ ನಗೆ ಮಾತುಗಳಲ್ಲಿ ಹೊಮ್ಮುತ್ತಿವೆ. ಸ್ವರ್ಗವೇ ಧರೆಗಿಳಿದು ಬಂದಷ್ಟು ಸಂತಸದ ಹೊನಲು.

ಅವರೆಲ್ಲರ ಆಮೋದದಲ್ಲಿ ಪಾಲ್ಗೊಂಡ ಗಂಗಾರಾಂ ತನ್ನ ಬೆಲೆಯನ್ನೇನೂ ಕಳೆದುಕೊಳ್ಳಲಿಲ್ಲ. ಅವರಂತೆಯೇ ಕುಡಿದು ತಿಂದು ಮಜಮಾಡಿದ. ಘೋರ್ಪಡೆ ದೊಡ್ಡ ಕಾರ್ಖಾನೆಯ ಒಡೆಯ ಅರವತ್ತರ ಪ್ರಾಯ.ಗಂಗಾರಾಮನ ಜೇಬು ಬರಿದಾದಂತೆಲ್ಲಾ ತುಂಬುವವನು ಅವನೇ. ಮುಂದೆ ಅದನ್ನ ಚಕ್ರಬಡ್ಡಿ ಸಹಿತ ಸೆಳೆಯುವುದಕ್ಕೆ ಬೇರೊಂದು ಉಪಾಯ.

ಪಾರ್ಟಿ ಬಹಳ ಹೊತ್ತು ಸಾಗಿತ್ತು. ಮದಿರೆಯ ಅಮಲಿನಲ್ಲಿ ಬಹುಮಂದಿ ತೂಗಾಡುತ್ತ ಯರ್‍ರಾಬಿರ್‍ರಿಯಾಡುತ್ತಲಿದ್ದರೆ ಅವರವರನ್ನು ಅವರವರ ಕಾರಿಗೆ ಹತ್ತಿಸಲು ಜವಾನರು, ಹೋಟೆಲಿನ ಅಧಿಕಾರಿಗಳು ಹೆಣಗಿದರು. ಯಾರ ಹೆಂಡಿರನ್ನು ಯಾರ್‍ಯಾರೋ ಅಪ್ಪಿಕೊಳ್ಳಹೋಗುತ್ತಿದ್ದರೆ ಗೊಳ್ಳನೆ ನಗುವಿನಲೆ ಏಳುತ್ತಿತ್ತು. ಗಂಗಾರಾಂ, ಘೋರ್ಪಡೆ ಅಲ್ಲದೆ ಇನ್ನೂ ಕೆಲವರು ಒಂಟಿಯಾಗಿ ಬಂದಿದ್ದರು. ಅವರೂ ಸಹ ಕಾರು ಹತ್ತುವಾಗ ತಮ್ಮ ತಮ್ಮ ಸಂಗಾತಿಗಳಿಗಾಗಿ ಹುಡುಕಾಡು ವವರೇ.

ಘೋರ್ಪಡೆ ಗಂಗಾರಾಂ-ನನ್ನು ಎಳೆದುಕೊಂಡೇ ಕಾರು ಹತ್ತುತ್ತ ಮುದ್ದಿಸಿಯೇ ಮುದ್ದಿಸಿದ! ಒಡನೆಯೇ ನಗುವಿನಲೆ ಉಕ್ಕಿ ಹರಿಯಿತು!

* * *

ಶ್ಯಾಮಲಾ, ಶಾರದಾ ಕರ್ವೆ, ಪಂಡರೀ ಮೂವರೂ ಸಾಲಾಗಿ ಒಂದೇ ಮೇಜಿನ ಬಳಿ ಕುಳಿತು ಕೆಲಸ ಆರಂಭಿಸಿದಾಗಲೇ ಜವಾನ ಬಂದು ಶ್ಯಾಮಲಾಳನ್ನು ಬಾಸ್ ಬರಹೇಳಿದ್ದಾರೆಂದು ಹೇಳಿ ಹೋದ.

''ನೀನೂ ಬರುತ್ತೀಯಾ ಪಂಡರೀ?''

''ಅವರು ಕರೆದಿರುವುದು ನಿನ್ನ ನಾನೇಕೆ ಬರಲಿ?''

''ಹೊಸದು...ನನಗೆ ಸ್ವಲ್ಪ ಸಂಕೋಚ.''

''ಪರವಾಯಿಲ್ಲ, ಹೋಗು.''

ಶ್ಯಾಮಲಾ ಮರು ಮಾತಿಲ್ಲದೆ ಹೊರಟಳು. ಬಾಸ್ ಕೊಠಡಿ ಅಂಥಹ ವಿಶಾಲ ವಾದುದೇನೂ ಅಲ್ಲ. ಎಣ್ಣೆ ಒರೆದಂತೆ ಥಳಥಳಿಸುವ ಮೇಜು. ಎದುರಿಗೆ ನಾಲ್ಕು ಕುರ್ಚಿ. ಸುತ್ತಮುತ್ತು ಕಪಾಟುಗಳು ಅಷ್ಟೆ. ಅವನು ಬರೆಯುತ್ತಿದ್ದ ಕಾಗದವನ್ನು ಸರಿಸಿ ಅಂದ ''ನಾನು ಡಿಕ್ಟೇಶನ್ನು ಕೊಡುವೆ ಬರೆದುಕೊಳ್ಳಬೇಕು. ಅಲ್ಲೇ ಕುಳಿತುಕೊ.''

ಶ್ಯಾಮಲಾ ಮರುಮಾತಾಡದೆ ಕುಳಿತುಕೊಂಡಳು. ಅವನು ನೋಟ್‌ಬುಕ್ ಮತ್ತು ಪೆನ್ನು ಕೊಟ್ಟು ಹೇಳತೊಡಗಿದ. ನಾಲ್ಕಾರು ಕಾಗದಗಳು ರೂಪುಗೊಂಡುವು.

'' ಇವು ಈಗಲೇ ಟೈಪ್ ಆಗಲಿ. ಅವನ್ನು ಪಂಡರೀಗೆ ಕೊಟ್ಟು ಬಾ.''

ಶ್ಯಾಮಲಾ ಅವನ್ನು ಕೊಟ್ಟು ಬಂದಳು. ಡಾ॥ ಫರೀದ್ ಮುಂದುವರಿದ; ಪುನಃ ಕೆಲವು ಕಾಗದಗಳನ್ನು ಹೇಳಿ ಬರೆಸುವ ಕಾಯಕ ಸ್ವಲ್ಪ ಹೊತ್ತು ಸಾಗಿತು.

''ನೀನು ಟೈಪಿಂಗ್ ಕಲಿಯುತ್ತಿದ್ದೀಯಾ?''

''ಹೌದು. ''

''ನಿನಗೆ ತುಂಬಾ tedious ಎನಿಸುತ್ತಿದೆಯೇ?''

''ಏನಿಲ್ಲ...''

''ಸ್ವಲ್ಪವೂ ಬಿಡುವಿಲ್ಲದ ಕೆಲಸ.''

''ಪರವಾಯಿಲ್ಲ. ನಾನು ಕಲಿತುಕೊಳ್ಳುವೆ.''

''ತೊಂದರೆ ಎನಿಸಿದರೆ ಬಿಟ್ಟುಬಿಡು...ನನ್ನ ಒತ್ತಾಯವೇನಿಲ್ಲ.''

''ಮನೆಯಲ್ಲಿ ಕಲಿಯುವುದು ಸಾಧ್ಯವೇ ಇಲ್ಲ. ಇಲ್ಲಿ ಸಿಕ್ಕಿದುದರಿಂದ ನನಗೆ ತುಂಬಾ ಅನುಕೂಲ. ಖಂಡಿತ ಕಲಿತುಕೊಳ್ಳುವೆ.''

"ಬೇಷ್! ತುಂಬ ಜಾಣೆ ಹುಡುಗಿ!"

ಶ್ಯಾಮಲಾ ಲಜ್ಜೆ ಮತ್ತು ಸಂತಸಗಳಿಂದ ನಸುರಂಗು ತಳೆದಳು.

"ಇದು ಕಲಿಯುವ ವಯಸ್ಸು. ಕಲಿಯಲು ಸಂಕೋಚವಿರಬಾರದು. go ahead."

"......"

"Learn without fail"

ಆ ಉತ್ತೇಜನೆ ಮನವನ್ನು ಹೂವಿನಂತೆ ಅರಳಿಸಿತು.

## ೬

ಶ್ಯಾಮಲ ತಂದೆಗೆ ತಾನು ಕೆಲಸಕ್ಕೆ ಸೇರಿಕೊಂಡ ವಿಷಯವನ್ನು ತಿಳಿಯಪಡಿಸಿರಲಿಲ್ಲ. ಇನ್ನಾದರೂ ತಿಳಿಸೋಣವೆಂದರೆ ನಾಲಿಗೆಯೇ ಹೊರಳದು.

"ಅಮ್ಮಾ! ನೀವೇ ಹೇಳಿಬಿಡಿ ಅಪ್ಪನಿಗೆ."

"ನಾನವರ ಕೋಪ-ತಾಪ ತಡೆಯಲಾರೆ. ನೀನೇ ಹೇಳಿಬಿಡು."

"ಈ ದಿನ ಧೈರ್ಯ ಮಾಡಿಬಿಡು."

"ನನಗೆ ಧೈರ್ಯ ಮಾಡವುದಿರಲಿ, ಎದುರು ನಿಲ್ಲುವುದೇ ಭಯ. ಹೇಳಿದರೆ ಇನ್ನೇನು ರಾಮಾಯಣವೋ... ನನಗೆ ತುಂಬ ಕಿನಿಸಿಗೆ-ಹೆದರಿಕೆ-ಚಳಿ ಇನ್ನೇನೋ..."

ಎರಡೂ ಕೈಗಳನ್ನು ಎದೆಗೊತ್ತಿ ಹಿಡಿದುಕೊಂಡು ಮೈಮುದುಡಿದಳು ಶ್ಯಾಮಲಾ.

ಶರತ್ ಪುಸ್ತಕ ಚೆಂಡು-ಬ್ಯಾಟುಗಳನ್ನು ಕಪಾಟಿನಲ್ಲಿಡುತ್ತಲೇ ಕೇಳಿದ "ಏನು ಶ್ಯಾಂ?"

"ನಾನು ಕೆಲಸಕ್ಕೆ ಸೇರಿದ್ದು ಅಪ್ಪನಿಗೆ ಹೇಳಿಲ್ಲ. ಹೇಳುವುದು ಹೇಗೆ ಎಂಬ ಭಯ."

"ಬಿಡು. ನಾನಿರುವೆ, ಶೂರ! ಮೈಕ್‌ನಲ್ಲಿ ಹೇಳುವಂತೆ ಜೋರಾಗಿ ಒದರಿಬಿಡುವೆ!"

"ಮಹರಾಯಾ! ಏನಾದರೊಂದು ಗಂಡಾಂತರಕ್ಕೆ ದಾರಿ ಮಾಡಬೇಡ."

"ಗಂಡಾಂತರ್ಕೆ ದಾರಿ ಅಲ್ಲ. ಸ್ವರ್ಗಕ್ಕೆ ದಾರಿ!"

"ಛೀ! ಕೆಟ್ಟ ಮಾತೇಕೆ ಆಡುತ್ತಿ?"

"ಸ್ವರ್ಗದ ವಿಚಾರ ಕೆಟ್ಟಮಾತೇ?"

"ಅಲ್ಲದೆ ಮತ್ತೇನು? ನೀನು ಹುಡುಗಾಟಿಕೆ ಆಡಬೇಡ."

"ಅಲ್ಲಮ್ಮಾ! ಹೇಳೋ ರೀತಿಯಲ್ಲಿ ಹೇಳೋಣ. ದೈವೇಚ್ಛೆ ಏನಿದೆಯೋ ಹಾಗೆ ಆಗಲಿ. ಶ್ಯಾಂ, ಇಲ್ಲಿ ಕೇಳು! ನಿನ್ನ ಕೆಲಸ ಬಿಡು ಎಂದರೆ ನಾನು ಕೇಳುವವನಲ್ಲ. ಇವರ ರೀತಿ ನೀತಿಗಳು ಓಬೀರಾಯನ ಕಾಲದ್ದು. ಆದರೆ..."

"ಅದೇಕಪ್ಪಾ ಅರ್ಧಮಾತು?"

"ತಾನುಮಾತ್ರ Forward!"

"ಇರಲಿ, ಬಿಡು. ಒಬ್ಬರಾದರೂ ಮುಂದಿರಬೇಕಲ್ಲ?"

ಅವನು ನಕ್ಕುಬಿಟ್ಟ. ತಾಯಿ ಮರುಮಾತಿಲ್ಲದೆ ಒಳ ಹೋದಳು. ಹಿಂದಿನಿಂದ ಅತ್ತಲೇ ನಿಟ್ಟಿಸಿದ ನಯನದ್ವಯಗಳಲ್ಲಿ ವಿಶಾದ ಕಳೆ ಮೂಡಿತು.

* * *

ಗಂಗಾರಾಂ-ನನ್ನು ಕ್ಲಬ್ಬಿಗೆ ಕರೆದೊಯ್ಯಲು ಸ್ವತಃ ಘೋರ್ಪಡೆಯೇ ಬಂದಿದ್ದ.

ಆ ಸಣ್ಣ ರಸ್ತೆಯ ತಿರಿವಿನಲ್ಲಿ ತಿರುಗಲಾರದೆ ಕಷ್ಟದಿಂದ ತಿರುಗಿ ಬಂದಿತ್ತು ಘೋರ್ಪಡೆಯ ಬೆಂಜ್ ಕಾರು. ಮುರುಕು ಮನೆಯ ಮುಂದೆ ಅದ್ದೂರಿಯ ಕಾರು ಬಂದು ನಿಂದರೆ ಆ ಕಾಲೋನಿಯ ಜನರಿಗೆಲ್ಲಾ ಆಶ್ಚರ್ಯವೋ ಆಶ್ಚರ್ಯ! ಎಲ್ಲರೂ ಬಂದು ಹಣುಕುವವರೇ. ಗಂಗಾರಾಂ ಹುರುಪು ತುಂಬಿದೆ ವೈಖರಿಯಲ್ಲಿ,

"ಶ್ಯಾಮಲಾ, ಶ್ಯಾಮಲಾ! " ಎಂದು ಕರೆದ.

ಒಳಗಡೆಯಿಂದ ತಾಯಿ ಉತ್ತರಿಸಿದಳು "ಅವಳಿನ್ನೂ ಮನೆಗೆ ಬಂದಿಲ್ಲ."

"ಎಲ್ಲಿಗೆ ಹೋಗಿದ್ದಾಳೆ?"

ಗೌರೀಮಾ ತಳಮಳಿಸಿದಳು ಏನು ಉತ್ತರ ಹೇಳಬೇಕೋ ತಿಳಿಯಲಿಲ್ಲ. ಕೆಲವು ಕ್ಷಣ ತಬ್ಬಿಬ್ಬಾಗಿ ನಂತರ ಹೇಳಿದಳು "ಸಾಮಾನಿಗಾಗಿ ಹೊರ ಹೋಗಿದ್ದಾಳೆ."

ಗಂಗಾರಾಂ ಒಳಗಿಂದೊಳಗೇ ಸಿಟ್ಟಿನಿಂದ ಕುದಿಯುತ್ತ "ಎರಡು ಲೋಟ ಕಾಫಿ ಕೊಡು ಗೌರೀ!" ಎಂದ.

ಗೌರೀಮಾ ಕಾಫಿ ತಯಾರಿಸಿದಾಗಲೇ ಶ್ಯಾಮಲಾ ಮನೆಗೆ ಬಂದಳೇನೋ ಹೌದು. ಆದರೆ, ಆ ಬೆಂಜ್ ಕಾರು ಮತ್ತು ವರಾಂಡದಲ್ಲಿ ಕುಳಿತ ಧಡೂತಿ ಮನುಷ್ಯನನ್ನು ಕಂಡು ಅಚ್ಚರಿಯ ಕುಂಡದಲ್ಲಿ ಮುಳುಗೆದ್ದಳು. ಗಂಗಾರಾಂ ಹಿಂದೆಯೇ ಒಳಬಂದು "ಕಾಫಿತಂದುಕೊಂಡು ಶ್ಯಾಂ!" ಎಂದ. ಹೃನ್ಮನಗಳಲ್ಲಿ ಸಂಸತದ ಅಲೆ....

ತಂದೆಯ ಮುಖದಲ್ಲಿ ಕಂಡು ಬಂದ ವಿಚಿತ್ರಭಾವ ಹಾಗೂ ಅಪೂರ್ವ ಸರಳತೆಯನ್ನು ಕಂಡು ಇದೇನೋ ಒಂದು ರೀತಿಯ ವಿಶೇಷ ಎನಿಸಿದರೂ ಏನೆಂಬುದು ಅರ್ಥವಾಗಲಿಲ್ಲ. ಒಳಹೋಗಿ ಎರಡು ಬಿಸಿ ಕಾಫಿಯನ್ನು ತಂದು ಎದುರಿಗೆ ನಿಂತರೆ...ಘೋರ್ಪಡೆಯ ಆಸಕ್ತ ನೋಟ ಅವಳನ್ನು ನೋಡಿಯೇ ನೋಡಿತು.

''ಏನಮ್ಮಾ, ನಿನ್ನ ಹೆಸರೇನು?''

''ಶ್ಯಾಮಲಾ....!''

ಶ್ಯಾಮಲಾ ಹಿಂತಿರುಗುವುದರೊಳಗಾಗಿ ಪುನಃ ಕೇಳಿದ ''ಏನು ಮಾಡುತಿದ್ದೀ?''

ನುಡಿಯಲಾರದೇ ನುಡಿಯಿತು ನಾಲಿಗೆ ''ಓದುತ್ತಿರುವೆ.''

ಆ ಕ್ಷಣವೇ ಅಲ್ಲಿಂದ ಹೆಜ್ಜೆ ಕಿತ್ತಳು. ಒಳಬಂದೊಡನೆಯೇ ಕೇಳಿದಳು ತಾಯಿ ''ಏಕೆ ಹೀಗೆ ಓಡಿ ಬಂದೆ?''

''ಅವರು ಏನೇನೋ ಕೇಳಿದರು ಅದಕ್ಕೇ ಓಡಿ ಬಂದೆ.''

ನಸು ನಕ್ಕಳು ಗೌರೀಮಾ.

* * *

ಸಂಜೆ ಮನೆ ಮುಟ್ಟಿದಾಗ ಹತ್ತಿರ ಹತ್ತಿರ ಆರುಗಂಟೆ. ತಂಗಿಗಾಗಿ ಕರವಸ್ತ್ರ ಹೊಲಿಯಲು ಒಂದು ಮೀಟರ್ ಬಟ್ಟೆ. ಕಸೂತಿದಾರ. ಬಿಗಿ ಹಿಡಿಯುವ ಫ್ರೇಂ ತಂದಿದ್ದಾಳೆ.

''ಓಹೋಹೋ! ಇದಕ್ಕೆಲ್ಲಾ ಎಷ್ಟಾಯಿತು ಶ್ಯಾಂ?'' ಉತ್ಸಾಹದ ದನಿಯಲ್ಲಿ ಕೇಳಿದಳು ತಂಗಿ.

''ನಿನ್ನದೇ ನಾಲ್ಕು ರೂಪಾಯಿ ಇತ್ತು. ಅದಕ್ಕೆ ನಾನಿಷ್ಟು ಹಾಕಿ ತಂದಿರುವೆ. ಇನ್ನು ಎಂದಿನ ಖರ್ಚೆಲ್ಲಾ ನಿನ್ನ ಹಣದಿಂದಲೇ ಆಗುತ್ತೆ. ಇನ್ನು ಮುಂದೆ ನಿನಗೆ ಬಿಡುವಿಲ್ಲದಷ್ಟು ಕೆಲಸ ಕೊಡುವೆ. ಬೇಸರ ಈ ಬಳಿಯಲ್ಲಿ ಸುಳಿಯಬಾರದು?''

''ಇಷ್ಟಾದರೆ ಸಾಕೆ? ನಾನು ಎಷ್ಟು ದಿನ ಹೀಗಿರಲಿ? ನನ್ನ ವಿದ್ಯೆ-ಬುದ್ಧಿ-ಜೀವನ ಇವುಗಳ ಗತಿಯೇನು? ಅದನ್ನೆಲ್ಲಾ ಯೋಚಿಸುತ್ತಾ ಹೋದರೆ ಹೊಲಿಯುವ ಉತ್ಸಾಹ ಮೈಲಿ ಮೈಲಿ ದೂರ ಓಡುತ್ತೆ. ಪ್ರತಿಯೊಂದನ್ನೂ ಮರೆತು, ನನ್ನ ಅಸ್ತಿತ್ವವನ್ನೇ ಕಡೆಗಣಿಸಿಕೊಂಡರೆ ಮಾತ್ರ ಕಸೂತಿ. ಇಲ್ಲದಿದ್ದರೆ ದೇವರೇ ಗತಿ!

''ಅಮ್ಮನಿಗೆ ಹಗಲೆಲ್ಲಾ ಕೆಲಸ. ಇಲ್ಲಿ ಕೂಡಲು ಸಮಯವಿಲ್ಲ. ಅವರಿದ್ದಲ್ಲಿಗೆ ನಾನು ಹೋಗಲಾರೆ. ಮಾತು ಮುಗಿಯುವುದರೊಳಗಾಗಿ ತೆಕ್ಕನೆ ಕಣ್ಣುಗಳಲ್ಲಿ ನೀರಾಡಿತು.

''ಶಾಂತೀ, ಶಾಂತಲಾ! ನೀನು ನನ್ನ **sweet peppermint!** ನೀನು ಅಳಬಾರದು ಕಣೆ! ನೀನತ್ತರೆ ನಾನೂ ಅಳಬೇಕಾಗುತ್ತದೆ. ಹೇಗಾದರೂ ಮಾಡಿ ವರ್ತಮಾನವನ್ನು ಕಳೆದರೆ ಭವಿಷ್ಯ ಇದ್ದೇ ಇದೆ. ಎಲ್ಲಾ ದಿನಗಳೂ ಒಂದೇ ತೆರನಾಗಿರುವುದಿಲ್ಲ. ನೋಡೋಣ. ಎಂದು ಬದಲಾವಣೆಯಾಗುತ್ತೋ....''

ತಂಗಿಯನ್ನು ಬಿಗಿದಪ್ಪಿ ಮುದ್ದಾಡಿದಳು ಶ್ಯಾಮಲಾ.

ಶ್ಯಾಮಲಾ ಬಟ್ಟೆಯನ್ನು ಕತ್ತರಿಸಿ ಹದಿನಾರು ತುಂಡುಗಳಾಗಿ ವಿಂಗಡಿಸಿ ಕರವಸ್ತ್ರಗಳಿಗೆ ಅಣಿಮಾಡಿಕೊಟ್ಟಳು. ಶಾಂತಲಾ ಈಗೀಗ ಪುಟ್ಟಪುಟ್ಟ ಹೂವುಗಳನ್ನು ತಾನೇ ಬರೆದುಕೊಳ್ಳುತ್ತಾಳೆ. ಒಮ್ಮೆ ಉತ್ಸಾಹ ಗರಿಗೂಡಿದರೆ ಇನ್ನೊಮ್ಮೆ ಕುಸಿತ. ಆಸೆ-ಆಕಾಂಕ್ಷೆಗಳು ದೂರದೂರ ಸಾರಿ ಅಣಕಿಸುತ್ತವೆ. ಉತ್ತಮ ಭವಿಷ್ಯ ಕನಸಿನ ಗಂಟು ಆದರೂ, ಪ್ರಯತ್ನ ಪ್ರಯತ್ನವೇ.

ಒಣಗಿದ ಕಾಷ್ಠದಂತಹ ಕೈಗಳು ಸೂಜಿ....ದಾರದೊಡನೆ ಆಡುತ್ತಿದ್ದರೆ ನೋಡಿಕೊಳ್ಳಲು ತನಗೇ ಸಂಕಟ...ತಾನೇ ದುಃಖದ ಕೋಟೆ. ಆದರೂ, ಗಳಿಗೆ ಗಳಿಗೆಗೂ ಕಸೂತಿ ಕಲೆ ರಂಗುರಂಗನಿಂದ ಮೈದುಂಬಿಕೊಳ್ಳುವಾಗ ದುಃಖ-ಸಂಕಟಗಳು ಅರುಗಾಗುವುದು ನಿಜ...

ತಾಯಿ ಒದು ಲೋಟ ಹಾರ್ಲಿಕ್ಸನ್ನು ಬರೀ ನೀರಿನಲ್ಲಿ ಮಾಡಿ ತಂದಿದ್ದಾಳೆ. ಹಾಲು ಸಕ್ಕರೆಯ ಅಭಾವ ರೋಗಿಗೂ ತಪ್ಪದು.

''ಇಂದು ನಿನಗಾಗಿ ಒಂದು ಕೆ.ಜಿ. ಸಕ್ಕರೆ ತರುತ್ತಾಳಂತೆ ಶ್ಯಾಮಲಾ.''

''ಹೀಗಿದ್ದರೆ ಇರಲಿ, ಅವಳ ದುಡ್ಡೆಲ್ಲಾ ನನಗೇ ಖರ್ಚಾಗುತ್ತೆ. ಪಾಪ, ಶ್ಯಾಮಲಾ! ಅವಳಿಗೊಂಡು ಒಳ್ಳೆಯ ಬಟ್ಟೆಯೂ ಇಲ್ಲ. ಆಫೀಸಿಗೆ ಹೋದರೂ ಉಟ್ಟದ್ದೇ ಉಡಬೇಕು.''

''ಮುಂದಿನ ಸಲಿ ತಂದರಾಯಿತು ಬಿಡು.''

ಶಾಂತಲಾ ಹಾರ್ಲಿಕ್ಸ್ ಲೋಟೆಯನ್ನು ಬರಿದು ಮಾಡಿದಳು; ಔಷಧಿ ಕಷಾಯವನ್ನು ಕುಡಿದಂತೆ.

* * *

ಇಂದು ಶಾರದಾ ಕರ್ವೆ ಬರಲಿಲ್ಲ. ಜ್ವರವೆಂದು ಒಂದು ವಾರ ರಜೆ ಹಾಕಿದ್ದಾಳೆ.

ಪಂಡರೀ ಶ್ಯಾಮಲೆಯನ್ನು ನೋಡುತ್ತಲೂ ''ನಾವಿನ್ನು ಒಂದು ವಾರ ಶಾರದೆಯ ಕೆಲಸವನ್ನೂ ಮಾಡಿಕೊಳ್ಳಬೇಕು. ಅವಳು ಮರಳುವ ತನಕ ನೀನು ಟೈಪಿಂಗ್ ಕಲಿಯಲು ಸಾಧ್ಯವಾಗದು ಎನಿಸುತ್ತೆ ನನಗೆ. ಎಷ್ಟೊಂದು ಕೆಲಸ ಬೀಳುತ್ತೆ ಗೊತ್ತಾ?''

''ಮುಂದಿನ ತಿಂಗಳು ಪರೀಕ್ಷೆಯಿದೆ. ಪ್ರಾಕ್ಟೀಸ್ ಮಾಡಿಕೊಳ್ಳಲು ಬೇರೆಲ್ಲೂ ಅವಕಾಶವೇ ಇಲ್ಲ ಏನು ಮಾಡಲಿ ಹೇಳು?''

''ನೋಡೋಣ, ಹೇಗಾಗುತ್ತೋ; ಮೊದಲು ಕೆಲಸ ಮುಗಿಯಲಿ.''

ಸ್ವಲ್ಪಹೊತ್ತು ಕೆಲಸ ಸಾಗಿತು. ಪತ್ರ ವ್ಯವಹಾರ. ಮಾರಾಟವಾದ ವಸ್ತುಗಳ ಬಿಲ್ ತಯಾರಿಕೆ. ರಶೀದಿಗಳ ವಿಲೇವಾರಿ. ಕಾಗದಗಳ ವಿಲೇವಾರಿ. ಹೀಗೆ ಒಂದಲ್ಲ ಒಂದು ಕೆಲಸ. ದಿನವೆಲ್ಲಾ ಮಾಡಿದರೂ ಮುಗಿಯದ ಕೆಲಸ. ಅಟೆಂಡರುಗಳು ಈ ಪತ್ರ ತಯಾರಾಯಿತೇ? ಆ ಪತ್ರ ತಯಾರಾಯಿತೇ? ಎಂದು ಪದೇಪದೇ ಕೇಳಿಕೊಂಡು ಬರುತ್ತಲೇ ಇರುತ್ತಾರೆ. ಇನ್ನೂ ತಯಾರಾಗಲಿಲ್ಲವೇ ಎಂಬ ಅವಸರ ಬೇರೆ.

ಜವಾನ ಬಂದು ''ನಿಮ್ಮನ್ನು ಬಾಸ್ ಕರೆಯುತ್ತಿದ್ದಾರೆ'' ಎಂದು ಶ್ಯಾಮಲೆಗೆ ತಿಳಿಸಿ ಹೋದ. ಶ್ಯಾಮಲಾ ಟ್ರೇಕಡೆ ನೋಡಿದಳು ಅಂಚೆಗೆ ಅಣಿಗೊಳಿಸುವ ಪತ್ರಾವಳಿಯ ರಾಶಿ. ಏಳಲಾರದೇ ಎದ್ದುಹೋದಳು ಬಾಸ್ ಕೊಠಡಿಗೆ.

''ಪತ್ರ ಬರೆಯುವುದಿದೆ, ನೋಟ್‌ಬುಕ್ ಪೆನ್ನು ತೆಗೆದುಕೊ.''

ಕೈಯಲ್ಲಿದ್ದ ಸಿಗಾರನ್ನು ಒಂದು ದಮ್ ಎಳೆದು ಒಂದೆರಡು ಪಂಕ್ತಿ ಹೇಳಿ ಬರೆಸಿದ್ದನೇನೋ ಅಷ್ಟರಲ್ಲಿ ಬಾಗಿಲ ಬಳಿ ಕಟಕಟ ಸದ್ದು.

''Yes please!''

ಒಳ ಬಂದವನು ರಾಂಪುರೆ ಕಂಪನಿಯ ಡೈರೆಕ್ಟರ್. ಡಾ॥ ಫರೀದ್ ದಿಗ್ಗನೆದ್ದು ಅವನಿಗೆ ಹಸ್ತಲಾಘವ ನೀಡಿ ಸ್ವಾಗತಿಸಿದ.

''ಏನಪ್ಪಾ, ಹೇಗಿದ್ದೀ? ಹೇಗೆ ನಡೆಯುತ್ತಿದೆ ನಿನ್ನ ಕಾರ್‌ಬಾರ್? ''

''ಯಥೋಚಿತ ನಿನ್ನದೇ ಪರವಾಯಿಲ್ಲ. ನಿನಗೆ ಕೈತುಂಬ ಸಿಬ್ಬಂದಿ ಇದ್ದಾರೆ. ಕೆಲಸ ಚೆನ್ನಾಗಿ ನಡೆಯುತ್ತಿದೆ ಅಲ್ಲವೇ? ನಮ್ಮಲ್ಲೂ ಸಿಬ್ಬಂದಿಗೆ ಕೊರತೆ ಇಲ್ಲ. ಕೆಲಸ ಮಾತ್ರ ತೀರಾ ಮಂದಗತಿ!''

''ಅದೇಕೆ...?''

''ಸೋಮಾರಿತನ...ಸಿಗರೇಟು-ಕಾಫಿ-ತಿಂಡಿ-ಊಟ ಇವುಗಳಲ್ಲೇ ಹೊತ್ತು ಗಳೆಯುತ್ತಾರೆ. ಕಣ್ಣೆದುರಿದ್ದರೇ ಕೆಲಸ. ಇದಕ್ಕೇನುಪಾಯ? ಮಾತಾಡಿದರೆ ಸ್ಟ್ರೈಕ್! ಪರಿಸ್ಥಿತಿ ಹೀಗೆ.''

''ಇದು ನಮ್ಮಲ್ಲಿಲ್ಲ ಎನ್ನಲಾರೆ. ಎಲ್ಲ ಕಡೆಯೂ ಇದೇ ಪಾಡು, ಯಾರಿಗೂ ಕೆಲಸ ಬೇಡ. ಹಣ ಸುಲಭರೂಪದಲ್ಲಿ ಬರಬೇಕು.''

''ಈ ಕಾಲದ ಜನ ಬಲೂ ಸೋಮಾರಿಗಳು!''

''ಅಕ್ಷರಶಃ ಸತ್ಯ.'' ಸಿಗರೇಟಿನ ಹೊಗೆಯನ್ನು ಪುಪ್ಪನೆ ಊದಿದ ಡಾ|| ಫರೀದ್. ಅತಿಥಿಗೆ ಕಾಫಿಯನ್ನು ತರಿಸಿ ಆತಿಥ್ಯ ನಡೆಸಿದ ಅತಿಥೇಯ.

ಅವರವರ ಮಾತುಕತೆಯಿಂದಾಗಿ ಇವಳ ಕೆಲಸ ಹಾಗೇ ಉಳಿಯಿತು. ಒಮ್ಮೆ ''ಅನಂತರ ಬರಲೇ?'' ಎಂದು ಕೇಳಿಕೊಂಡಳು ಕೂಡ.

''ಸ್ವಲ್ಪ ತಾಳು....''

ಶ್ಯಾಮಲಾ ಆ ಅತಿಥಿ ಮಹಾಶಯ ಹೊರಟು ಹೋಗುವವರೆಗೂ ಕಾದಿದ್ದು ಕೆಲಸ ಮುಗಿಸಿದಳು. ಮಧ್ಯಾಹ್ನದ ಲಂಚ್ ಬಿಡುವಿನಲ್ಲಿ ಟೈಪಿಂಗ್ ಹೋಗುವ ಬದಲು ಶ್ಯಾಮಲಾ ಮಾಡಿದ್ದು ಶಾರದೆಯ ಕೆಲಸ. ದಿನವೂ ಹೀಗೆಯೇ. ಕೆಲಸದ ಮಧ್ಯೆ ಅಡಚಣೆ ಬಂದರೂ ಬರದಿದ್ದರೂ ಟೈಪಿಂಗ್ ಕಲಿಯಲು ಸಾಧ್ಯವಾಗಲಿಲ್ಲ. ಶಾರದಾ ಎಂದು ಬರುತ್ತಾಳೋ ಎಂದು ಹಾರೈಸಿತು ಬಡಜೀವ.

* * *

ಶ್ಯಾಮಲಾ ಟೈಪಿಂಗ್ ಕ್ಲಾಸ್ ಒಡೆಯನ ಬಳಿಗೆ ಹೋಗಿ ''ಸರ್, ಶಾರದಾ ಬರುವವರೆಗೆ ಸಂಜೆ ಮನೆಗೆ ಹೋಗುವಾಗ ಕಲಿತುಕೊಳ್ಳಲು ಅವಕಾಶ ಮಾಡಿಕೊಡಿ. ದಯವಿಟ್ಟು ನಿರಾಕರಿಸಬಾರದು. ಅಭ್ಯಾಸ ತಪ್ಪಿದರೆ ಪರೀಕ್ಷೆಯಲ್ಲಿ ಪಾಸಾಗಲಾರೆ.'' ಎಂದು ಕೇಳಿಕೊಂಡಳು.

''ಬೇರೆ ಯಾರಾದರೂ ಅವರ ಸಮಯ ಬಿಟ್ಟುಕೊಟ್ಟ ಹೊರತು ಹೊಂದಿಸಿ ಕೊಳ್ಳುವುದು ಕಷ್ಟ. ಏನು ಮಾಡಲಿ ಹೇಳು....''

''ದಯವಿಟ್ಟು ನೀವು ಯಾರನ್ನಾದರೂ ಕೇಳಿನೋಡಿ ಸರ್. ''

''ನಿನ್ನ ಆಫೀಸ್ ಮುಗಿಯುವುದು ಎಷ್ಟು ಹೊತ್ತಿಗೆ?''

''ಸಂಜೆ ಐದೂವರೆಗೆ.''

''ರಾಮಸ್ವಾಮಿ ಐದೂವರೆಗೆ ಬರುತ್ತಾನೆ. ಅವನಿಗೆ ತಡೆದು ಬರಲು ಹೇಳಿ ನೋಡುವೆ.''

“ಅಷ್ಟು ಉಪಕಾರ ಮಾಡಿ.”

ಅವಳು ಆಫೀಸಿಗೆ ಹೋಗಿ ಕೆಲಸ ಆರಂಭಿಸಿದಳು. ರಾಮಸ್ವಾಮಿ ಒಪ್ಪಿಕೊಂಡರೆ ಸಾಕು...ಎಂದು ಎದೆಯ ಹಕ್ಕಿ ಕಾಣದ ದೇವರಿಗೆ ಕೈಮುಗಿದು ಬೇಡಿಕೊಂಡಿತು.

## ೭

ಆರು ಗಂಟೆವರೆಗೆ ಟೈಪಿಂಗ್ ಕ್ಲಾಸ್ ಮುಗಿಸಿ ಹೊರಬಂದರೆ ಜಿರಿಜಿರಿ ಸುರಿಯುವ ತುಂತುರು ಮಳೆ. ತಲೆಯ ಮೇಲೆ ಸೆರಗೆಳೆದುಕೊಂಡು ಬಸ್ಸಿಗಾಗಿ ಕಾದರೆ ಬಸ್ಸುಗಳು ಸಾಕಷ್ಟು ಬಂದರೂ ನೂರೊಂದನೇ ಬಸ್ಸು ಪತ್ತೆಯೇ ಇಲ್ಲ. ಇನ್ನು ಕಾಯುವುದು ಸಾಧ್ಯವಿಲ್ಲೆಂದು ಕಾಲ್ನಡಿಗೆಯಲ್ಲಿಯೇ ಹೊರಟಳು. ಮುಂದಿನ ನಿಲ್ದಾಣಗಳಲ್ಲಿ ಸಿಗಬಹುದೆಂದು ಕಣ್ಣಾಡಿಸುತ್ತಲೇ ನಡೆದಳು. ಆಗಲೇ ಗಂಟೆ ಏಳಾಗುತ್ತ ಬಂತು. ನೂರ ಮೂರನೇ ಬಸ್ಸು ಮನೆಯ ಹತ್ತಿರದ ಸರ್ಕಲ್ಲಿನಲ್ಲಿ ನಿಲ್ಲುತ್ತೆ, ಅದರಲ್ಲಿ ಹೋದರೆ ಮನೆಗೆ ಒಂದು ಫರ್ಲಾಂಗ್ ನಡೆಯಬೇಕಷ್ಟೆ. ಅದೆಷ್ಟೋ ಮೇಲು ಒಂದುಕೊಂಡು ಅದನ್ನೇ ಹಿಡಿದು ಮನೆ ಮುಟ್ಟಿದಾಗ ಗಂಟೆ ಏಳೂಕಾಲು.

ಮಗಳ ಹೆಜ್ಜೆಗಳು ತಲೆ ಬಾಗಿಲಲ್ಲಿ ಕೇಳಿಸಿದಾಗಲೇ ಸಿಡಿದ ದಡಾಕಿಯಂತೆ ಎದುರಾದ ಗಂಗಾರಾಂ ಘರ್ಜಿಸಿದ “ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ?”

ಅವಳ ಉತ್ತರ ಹೊಮ್ಮುವುದರೊಳಗಾಗಿ ಕೆನ್ನೆಯ ಮೇಲೆ ಪೆಟ್ಟು ಫಳೀರನೆ ಬಿತ್ತು!

“ಛಿ! ಬಸ್ಸು ಸಿಗಲಿಲ್ಲ..! ಕಾದು ಕಾದು ಮಳೆಯಲ್ಲಿ ತೊಯ್ದಿರುವುದು ಕಾಣುವುದಿಲ್ಲವೇ?”

ಎಂದೂ ಮಾತಾಡದವಳು ಇಂದು ಹೇಗೆ ಯಮಧೈರ್ಯ ಮಾಡಿದಳೋ ಅದು ಅವಳಿಗೇ ತಿಳಿಯದು ಬಹುಶಃ.

ಅವನು ಅಷ್ಟಕ್ಕೂ ಸಂತೃಪ್ತನಾಗದೆ ಕೂದಲಿನ ಮೇಲೆ ಹಿಡಿದು ಒಳಗೆ ತಳ್ಳಿ “ನಡೆ ಒಳಗೆ” ಎಂದ. ಸಿಟ್ಟಿನ ಭರದಲ್ಲಿ ಮೈ ಆದುರಿತು.

ಕಣ್ಣುಗಳನ್ನು ಬಿರಿಬಿರಿ ಬಿಟ್ಟು ನೋಡುತ್ತಿದ್ದ ಶಾಂತಲಾ ಚಿಟ್ಟನೆ ಚೀರಿ ಕೊಂಡಳು. ಎರಡೂ ಕಣ್ಣುಗಳಲ್ಲಿ ನೀರು ಇಳಿದುಹೋಯಿತು. ಶ್ಯಾಮಲಾ ದುಃಖತಾಪಗಳಿಂದ “ಈಗ ಶರತ್ ಇರಬೇಕಿತ್ತು. ನಾವು ಮೂಕಮೌನಿಗಳಾದುದ

ರಿಂದಲೇ ಹೀಗೆ... ಮನುಷ್ಯತ್ವ ಲವಲೇಶವು ಇಲ್ಲ!'' ಎಂದು ಕೂಗಿ ಹೇಳಿ ತಂಗಿಯ ಬಳಿ ಕುಳಿತು ಅವಳ ಕೊರಳ ಕಟ್ಟಿಕೊಂಡು ಅತ್ತಳು.

ಒಳಗಡೆ ಗೌರೀಮಾ ಮುಸಿಮುಸಿ ಅಳುತ್ತಿದ್ದಾಳೆ. ಮನೆಯೆಲ್ಲಾ ಅಳುಮಯ. ಬಿಸಿಯುಸಿರಿನ ಪರಿತಾಪ. ದುಃಖ-ಸಂಕಟಗಳ ಗೋಳು.

* * *

ಶ್ಯಾಮಲಾ ಬಾಸ್‌ನಿಂದ ಡಿಕ್ಟೇಶನ್ ತೆಗೆದುಕೊಳ್ಳುತ್ತಿದ್ದಾಳೆ. ಮೂರು ನಾಲ್ಕು ಪತ್ರಗಳನ್ನು ಬರೆದು ಮುಗಿಸಿದ್ದಳೇನೋ, ಅಷ್ಟರಲ್ಲಿ ಬಾಗಿಲಲ್ಲಿ ಕಟಕಟ ಸದ್ದು.

''Yes please!''

ಒಳ ಬಂದವನು ಅಸಿಸ್ಟೆಂಟ್ ಮ್ಯಾನೇಜರ್ ನೂರಾನಿ.

''ನೋಡಿ, ಸರ್! ನಮ್ಮ ಇಬ್ಬರು ಸ್ಟೆನೋ ಒಂದೇ ಬಾರಿಗೆ ಕೈಕೊಟ್ಟಿದ್ದಾರೆ. ಕೆಲಸ ನಿಂತುಹೋಗಿದೆ. ಒಬ್ಬಳು ಮೊನ್ನೆ ಹದಿನೈದು ದಿನ ರಜೆ ಹಾಕಿದ್ದಾಳೆ. ಇನ್ನೊಬ್ಬಳು ಮನೆಯಿಂದಲೇ ಡಾಕ್ಟರ್ ಸರ್ಟಿಫಿಕೇಟ್ ಕಳಿಸಿ ರಜೆ ಬರೆದಿದ್ದಾಳೆ. ಮಾಲಾ ರಜೆ ಹಾಕಿದ್ದು ಇವಳಿಗೆ ಗೊತ್ತು. ಸ್ವಲ್ಪವೂ ಜವಾಬ್ದಾರಿ ಇಲ್ಲ. ಈ ಬಣ್ಣದ ಹುಡುಗಿಯರು ಎಂದಾದರೂ ಕೆಲಸ ಮಾಡವುದುಂಟೇ? ಯಾವ ಗಳಿಗೆಯಲ್ಲಿ ಹಾರಿಬಿಡುತ್ತಾರೋ ಊಹಿಸುವುದು ಕಷ್ಟ. ತೋಳಿಲ್ಲದ ಕುಪ್ಪುಸ, ತುಟಿಗೆ ರಂಗು, ಶೋಕು, ಜೋಕು ಇವೆಲ್ಲಾ ಕೆಲಸಕ್ಕಾಗಿ ಏನು? ಯಾವೊಬ್ಬ ಸಿಕ್ಕಿದ ಅಂದರೆ ಮುಗಿಯಿತು. ಮಂಗಳ ಹಾಡುತ್ತಾರೆ, ಇವರನ್ನು ಸೇರಿಸಿಕೊಳ್ಳುವುದೇ ತಪ್ಪು!''

''ಕೇಳಿ! ನೂರಾನಿ! ಗಂಡಸರಾದರೆ ಬೀಡಿ, ಸಿಗರೇಟು, ಕಾಫೀ ಗೀಫಿ ಅಂತ ಹೊತ್ತು ಕಳೆಯುತ್ತಾರೆ. ಹಾಗೆ ನೋಡಿದರೆ ಹುಡುಗಿಯರೇ ಎಷ್ಟೋ ಮೇಲು ಕೆಲಸದಲ್ಲಿ.''

''ಸರ್, ಬಣ್ಣದ ಚಿಟ್ಟೆಗಳ ಸಹವಾಸ ನನಗಂತೂ ಬೇಸರವಾಗಿ ಬಿಟ್ಟಿದೆ...ನೀವೇನೋ ಹಾಗಂತೀರಿ...ಇವರ ಕಥೆ ನೋಡಿದರೆ ವಿಚಿತ್ರ! ಸದಾ ದೂರವಾಣಿ ಸಂಪರ್ಕ. ಯಾರು ಯಾರೊಂದಿಗೋ ಕಾಡುಹರಟೆ. ವಿನಾಕರಾಣ ಹೊತ್ತು ಕಳೆಯುವುದರಲ್ಲಿ ನಿಸ್ಸೀಮರು. ಕಡಿಮೆ ಕೆಲಸ. ಹೆಚ್ಚು ಹರಟೆ. ಗಂಟೆ ಹೊಡೆಯುವುದನ್ನೇ ಕಾಯುತ್ತಿರುತ್ತಾರೆ...ಎಂಬುದಂತೂ ತಿಳಿದ ವಿಷಯ. ಹೇಗೆ ಇವರಿಗೆ ಪಾಠ ಕಲಿಸಬೇಕೊ ತಿಳಿಯದು. ಈಗೀಗ ಯಾರಿಗೂ ಕೆಲಸ ಮಾಡುವ ಯೋಚನೆಯೇ ಇಲ್ಲ....ವೃಥಾ ಕಾಲಹರಣ. ತಿಂಗಳ ಕೊನೆಯಲ್ಲಿ ಸಂಬಳ ಎಣಿಸುವುದು ಇಷ್ಟೇ ಬೇಕಾದುದು. ನನಗೆ ಇವರನ್ನೆಲ್ಲಾ ನೋಡಿ ಸಾಕಾಗಿದೆ.''

"ಈಗೇನು ಮಾಡುತ್ತೀರಿ?"

"ಇಲ್ಲಿಂದ ಇಬ್ಬರನ್ನು ಎರವಲು ಪಡೆಯಲೆಂದೇ ನಾನು ಬಂದದ್ದು."

ಅವರ ಒಂದೊಂದು ಮಾತೂ ಕಿವಿಗೆ ಲತ್ತೆ ಹೊಡೆದಂತೆ ಬೀಳುತ್ತಿವೆ. ಹೆಣ್ಣು ಎಲ್ಲಿದ್ದರೂ, ಹೇಗಿದ್ದರೂ ನಿಂದೆ ಎಂಬುದು ಬೆನ್ನ ಹಿಂದಿನ ಬುತ್ತಿ. ಆ ಬಣ್ಣದ ಚಿಟ್ಟೆಗಳ ಪರಿಪಾಡೇನೋ ಅವರವರ ಮನೆಗಳಲ್ಲಿ. ಅದನ್ನಿಲ್ಲಿ ಕೇಳುವವರಾರು? ಅವರಾದರೂ ಹೇಗೆ ಹೇಳಿಕೊಂಡಾರು?

ಯಾವುದೋ ಎಲ್ಲಿಯದೋ ವಿಷಾದ ಗೀತೆಯ ತುಡಿತ ತನ್ನ ಎದೆಯಲ್ಲಿ ಮಿಡಿಯಿತು.

ತತ್‌ಕ್ಷಣ ತನ್ನ ಮನೆಯ ಘೋರ ಜೀವನ ಚಿತ್ರ ಚಲನ ಚಿತ್ರದಂತೆ ಸುಳಿ ಸುಳಿದಳಿಯಿತು, ಚಿತ್ತಭಿತ್ತಿಯ ಮೇಲೆ. ದೇಹದಾದ್ಯಂತ ನಸು ಕಂಪನದ ಅಲೆ ಹರಿದಾಡತೊಡಗಿತು. ಕೆಲಸವಿಲ್ಲದೆ ಸುಮ್ಮನೆ ಕೂರುವ ಪ್ರಸಂಗದಿಂದ ಮನಸ್ಸೆಲ್ಲಾ ಮುಜುಗರ..."ಇವರ ವ್ಯವಹಾರ ಹೀಗೆ. ಕೊನೆಗೆ ನಿಂದೆ ನಮಗೆ."

ಕಿವಿಯ ಬಳಿಯಲ್ಲಿಯೇ ಯಾವುದೋ ಅಶರೀರವಾಣಿ ಕೂಗಿ ಹೇಳಿತು.

* * *

ಶರತ್ ಒಳ ಬಂದವನೇ ಹೇಳಿದ "ನನ್ನ ಕ್ಯಾನ್‌ವಾಸ್ ಷೂಜ್ ಹರಿದಿದೆ. ನನಗದನ್ನು ಕೊಳ್ಳದೆ ಗತ್ಯಂತರವಿಲ್ಲ. ಅಪ್ಪನನ್ನು ಕೇಳುವುದು ಹೇಗೆ? ಏನು ಮಾಡಲಿ?"

"ನೀನು ಅವರಿಗೆ ಜೋರು ಮಾಡುತ್ತಿ. ಜಗಳ ಆಡುತ್ತಿ.... ನಿನಗೆ ಕೊಟ್ಟಾರೆಯೇ?"

ಶಾಂತಲಾ ಮಾತಿಗೆ ಅವನೆಂದ "ನೀನು ಮೂಲೆಗುಮ್ಮ ಅಂತ ಕೊಡೊಲ್ಲ..."

ನಡುವೆ ತಡೆದು ನುಡಿದಳು ತಾಯಿ "ಅವಳನ್ನೇಕೆ ಹಾಗೆನ್ನುತ್ತಿ. ಪಾಪ, ನೊಂದ ಮಗು. ಅವಳಿಗೆಷ್ಟು ನೋವಾಗಲಿಕ್ಕಿಲ್ಲ. ಅವಳಿಗೆ ನೀನು ಸಂತಸ ನೀಡುವ ಬದಲಾಗಿ ಹೀಯಾಳಿಸುವುದುಂಟೇ? ನಿನಗೆ ಅಷ್ಟೂ ತಿಳಿಯದೇ?"

ಶಾಂತಲಾ ಮುಖಬಿಂಬ ಬಾಡಿಹೋಯಿತು. ಅವಳು ಏನೂ ಹೇಳಲಿಲ್ಲ.

"ಬಾಯಿಗೆ ಅಭ್ಯಾಸವಾಗಿದೆ. ತಮಾಷೆಗೆಂದೆ ಅದಕ್ಕೇಕೆ ಬೇಸರ?"

"ತಮಾಷೆಗೆಂದು ಚೂರಿ ಇರಿಯುತ್ತಲೇ ಇದ್ದರೆ ಹೇಗಾದೀತು? ಅದನ್ನೆಲ್ಲಾ ಯೋಚಿಸಕೂಡದೇ? "

"ಸರಿ...ಸಾರಿ! ಶಾಂತಲಾ. ಇನ್ನು ಆದಷ್ಟು ಜ್ಞಾಪಕ ಇಟ್ಟುಕೊಳ್ಳುವೆ."

"ಏನಾದರೂ ಹೇಳಿಕೊ. ನನ್ನ ಕರ್ಮಕ್ಕೆ ಯಾರೇನು ಮಾಡಬಲ್ಲರು? ನೀನು ತೆಗಳಿದರೂ ಒಂದೇ. ಹೊಗಳಿದರೂ ಒಂದೇ. ಒಳಿತು-ಕೆಡಕು ನನ್ನ ಬದುಕಿಗೆ ಅಂಟಿದ್ದು."

"ಪರವಾಯಿಲ್ಲ. ನೀನು ಇಷ್ಟೊಂದು ತಿಳಿದುಕೊಂಡಿದ್ದೀಯಲ್ಲ. ಅದೇ ವಿಶೇಷ!"

"ಶರತ್ ನಿನ್ನದು ಯಾವಾಗಲೂ ದುಡುಕು. ಅಪ್ಪ ಬಂದಮೇಲೆ ರೇಗಿಕೊಳ್ಳಬೇಡ. ಏನು ಕೇಳಿದರೂ ನಿಧಾನವಾಗಿ ಕೇಳು. ಅಪ್ಪನ ದುಡುಕು ನಿನಗೆ ಬಹಳಷ್ಟು ಬಂದಿದೆ. ನೀನು ಅಪ್ಪನ ಬದುಕನ್ನು ನೋಡಿಯಾದರೂ ಕಲಿಯ ಬಾರದೇ? ಮೊನ್ನೆ ನೀನು ಇದ್ದಿದ್ದರೆ ದೊಡ್ಡ ರಾಣಾರಂಪವಾಗುತ್ತಿತ್ತು. ಪಾಪ, ಶ್ಯಾಮಲಾ ಹೊಡೆತ ತಿಂದು ಸುಮ್ಮನಾದಳು. ವಿನಾಕಾರಣ ಹಿಂಸೆ...."

"ಆಗ ನಾನಿದ್ದಿದ್ದರೆ ಅಕ್ಕನ ಮೈ ಮುಟ್ಟುವುದು ಸಾಧ್ಯವಿತ್ತೇ? ಏನೆಲ್ಲ ನಡೆಯುತ್ತಿತ್ತೊ?"

"ಸರಿ, ನೀನಿಲ್ಲದುದು ಒಳ್ಳೆಯದಾಯ್ತು!"

"ಹಾಗೆಂದರೆ ಪರಿಹಾರವೇನು? ಎಲ್ಲಿಯತನಕ ದುರವಸ್ಥೆ?"

"ಮೊನ್ನೆ ಅವರಿಗೆ ಸಿಟ್ಟು ಬರಲು ಮೂಲ ಕಾರಣ. ಒಳಬಂದವರೇ 'ಶ್ಯಾಮಲಾ!' ಎಂದೂ ಕೂಗಿ ಕರೆದರು. ಇನ್ನೂ ಬಂದಿಲ್ಲವೆಂದು ತಿಳಿದುಬಂದಾಗ ಬಹಳ ಹೊತ್ತು ಕಾದರು. ಆದರೂ, ಬರಲಿಲ್ಲವಾದುದರಿಂದ ಘೋರ್ಪಡೆ ಹೊರಟುಹೋದರು. ಅದೇ ಅವರಿಗೆ ಸಿಟ್ಟುಬರಲು ಕಾರಣ. ಅವರು ಘೋರ್ಪಡೆ ಯನ್ನು ಕರೆತಂದುದರಲ್ಲಿ ಏನೋ ಉದ್ದೇಶವಿರಬೇಕು...."

ಶಾಂತಲಾ ವಿಷಯವನ್ನು ಮುಂದಿಟ್ಟಾಗಲೇ ಶ್ಯಾಮಲಾ ಒಳ ಬಂದಳು. ಒಳಗೆ ನಡೆಯುತ್ತಿದ್ದ ಸಂಭಾಷಣೆಯನ್ನು ಕೇಳಿ "ಏನಮ್ಮಾ ಶಾಂತಿ?" ಎಂದಳು.

"ಆದಿನ ಅಪ್ಪ ನಿನ್ನ ಹೊಡೆದಾಗ ನಾನಿರಬೇಕಿತ್ತು ಎನ್ನುತ್ತಾನೆ ಶರತ್. "

"ಇನ್ನೂ ದೊಡ್ಡ ಲಟಾಪಟಿ ಆಗುತ್ತಿತ್ತು ಅಷ್ಟೇ. ಈ ಗಲಾಟೆಗಳು ಯಾರಿಗೆ ಬೇಕು ಹೇಳು?"

"ಒಮ್ಮೆ ಬುದ್ಧಿ ಕಲಿಸದಿದ್ದರೆ ಕಾಲಾನುಕಾಲಕ್ಕೂ ಹೀಗೆಯೇ ಅಲ್ಲವೇ?"

"ಏನು ಮಾಡೋಣ? ನಮ್ಮ ಗ್ರಹಚಾರ."

ದುಃಖಭರಿತವಾಣಿ ಎದೆಯಾಳದಿಂದ ಹೊರಬಿತ್ತು.

* * *

೧೧೭ ೧೧೮

ಶಾಂತಲಾ ಎಲ್ಲಾ ಕರವಸ್ತ್ರಗಳನ್ನೂ ಹೊಲಿದು ಮುಗಿಸಿದ್ದಾಳೆ.

ರಂಗುರಂಗಿನಿಂದ ರಂಜಿಸುವ ಅವನ್ನು ನೋಡುತ್ತಿದ್ದರೆ ತನಗೇ ಸಂತಸ. ಈಗಾಗಲೇ ಕೈ ಎಷ್ಟೊಂದು ಪಳಗಿದೆ ಎಂಬುದು ತನಗೇ ಆಶ್ಚರ್ಯ.

ಶ್ಯಾಮಲ ಆಫೀಸಿಗೆ ಹೊರಡುವಾಗ ಅವೆಲ್ಲವನ್ನೂ ತೆಗೆದುಕೊಂಡು ''ಈ ಸಲ ಇನ್ನಷ್ಟು ಬಟ್ಟೆ ತರುವೆ. ನಿನ್ನ ದುಡಿಮೆ ನಿನಗೇ ಇರಲಿ. ನಿನಗೆ ಏನೇನು ಬೇಕೋ ಹೇಳು ಕೊಂಡುತರುವೆ.''

''ಸಧ್ಯ, ನನಗೇನೂ ಬೇಡ. ನೀನು ಬಟ್ಟೆಗೆ ಹೇಗೂ ದುಡ್ಡು ಕೊಡಬೇಕಷ್ಟೆ?''

''ಇರಲಿ, ಅದೇನೂ ಹೆಚ್ಚಲ್ಲ. ಏನು ಬೇಕು ಹೇಳು.''

''ಬಟ್ಟೆ-ದಾರ ತೆಗೆದುಕೊ ಸಾಕು.''

''ನಿನ್ನ ಉಳಿದ ಹಣವನ್ನೆಲ್ಲಾ ಕೂಡಿ ಹಾಕಿ ಮೊತ್ತ ಹಿರಿದಾದ ಮೇಲೆ ಒಳ್ಳೆಯ ವಸ್ತುವನ್ನೇ ಕೊಳ್ಳೋಣ. ನೀನು ಯೋಚಿಸುತ್ತಿರು. ಏನು ಬೇಕೆನಿಸುತ್ತೋ ಅದನ್ನೇ ತರೋಣ ಆಯಿತೇ?'' ಅಷ್ಟೆಂದು ತಂಗಿಯ ಕೆನ್ನೆಯನ್ನು ಮುದ್ದಿಸಿ ಹೊರಟಳು ಶ್ಯಾಮಲಾ.

ಶ್ಯಾಮಲಾ ಪಾಠ ಹೇಳಿದ್ದಾಳೆ. ಅದನ್ನು ಬರೆದನಂತರ ಲೆಕ್ಕ ಮಗ್ಗಿಗಳನ್ನೂ ಕಲಿಯಬೇಕು. ಈ ದಿನವೆಲ್ಲಾ ನನಗೆ ಪಾಠ ಮಾತ್ರ...ಎಂದುಕೊಳ್ಳುತ್ತಿದ್ದಾಗಲೇ ಸ್ವಾಮಿನಿ ತೈಲದ ಭರಣಿಯ ಸಹಿತ ಬಂದು ''ಕಾಲು ನೀಡು ಶಾಂತೀ'' ಎಂದಳು.

''ಎಷ್ಟು ದಿನಗಳಿಂದ ಉಜ್ಜುತಿದ್ದರೂ ಗುಣಕಾಣುತಿಲ್ಲಮ್ಮಾ.''

''ನೋಡೋಣ, ತಕ್ಷಣ ಯಾವುದೂ ಆಗುವುದಿಲ್ಲ. ಕಾದು ನೋಡಬೇಕು.''

''ನನಗೆ ಶಾಲೆಗೆ ಹೋಗಿ ಬರುವಷ್ಟು ಸಾಧ್ಯವಾದರೆ ಸಾಕಮ್ಮ.''

''ಆದಿನ ಬಂದೇ ಬರುತ್ತೆ ಮಗೂ!''

''ಆ ದಿನ ಬೇಗ ಬರಬೇಕು. ಪೂರಾ ಕಾಲ ಕಳೆದ ಮೇಲೆ ಬಂದರೆ ಏನು ಪ್ರಯೋಜನ, ಅಮ್ಮಾ?''

''ನಿಜ, ಮಗಳೇ! ನಾನು ನಿನಗಾಗಿ ಹರಕೆ ಇಟ್ಟುಕೊಂಡಿರುವೆ. ದೇವರು ದೊಡ್ಡವನು, ಅವನು ಕಾಪಾಡಬೇಕು. ನೀನೂ ಅವನನ್ನು ಯಾವಾಗಲೂ ಧ್ಯಾನಿಸುತ್ತಿರು.''

''ಈಗ ನನಗಿನ್ನೇನು ಯೋಚನೆ, ದೇವರನ್ನು ನೆನೆಯುವುದನ್ನು ಬಿಟ್ಟರೆ? ಕೈಕೆಲಸ ಮಾಡಿದರೆ ಮನಸ್ಸು ನೆನೆಯವುದು ದೇವರನ್ನೇ. ಅಕ್ಕ ಯಾವಾಗಲೂ ಹೇಳುವುದು ಅದನ್ನೇ. ಪುಸ್ತಕದಲ್ಲಿ ಗುರುತಿಸಲು ಎಷ್ಟೊಂದು ದೇವರ ಚಿತ್ರಗಳನ್ನು

ಕೊಟ್ಟಿದ್ದಾಳೆ ನೋಡು. ಪುಸ್ತಕ ತೆರೆದಾಗಲೆಲ್ಲಾ ಕಾಣುವುದು ದೇವರುಗಳನ್ನೇ, ಅಂದಮೇಲೆ, ದೇವರಿಗೇಕೆ ಕರುಣೆಯಿಲ್ಲ. ನನ್ನ ಗೆಳತಿಯರೆಲ್ಲಾ ಎಷ್ಟು ಸಲ ಜ್ವರ ಬಂದು ಮಲಗಲಿಲ್ಲ? ಯಾರಿಗೂ ಕಾಲು ಬಿದ್ದು ಹೋಗಲಿಲ್ಲ. ನನಗೆ ಮಾತ್ರ ಹೀಗೆ.''

''ಏನು ಮಾಡೋಣ? ನಾವು ಪಡೆದುಕೊಂಡು ಬಂದುದು ನಮಗೆ. ಅವರದು ಅವರಿಗೆ.''

ಗೌರೀಮಾ ತೈಲ ಉಜ್ಜುತ್ತ ಹೇಳಿದಳು ''ನೋಡು, ಈ ತೈಲ ಎಷ್ಟೋ ಕೆಲಸ ಮಾಡಿದೆ ಎನ್ನಬಹುದು. ಕಾಲಿನ ಮಾಂಸಖಂಡ ಸ್ವಲ್ಪ ಉತ್ತಮವಾದಂತೆ ತೋರುತ್ತಿದೆ. ಆಗಂತೂ ಏನೇನೂ ಸತ್ವ ಇರಲಿಲ್ಲ ಖಂಡದಲ್ಲಿ ಈಗೀಗ ಸ್ವಲ್ಪ ಉತ್ತಮ ತೋರುತ್ತಿದೆ. ಕಾಲ ಕ್ರಮೇಣ ಸರಿಹೋಗಬಹುದು ಮಗಳೇ!''

''ಆದರೆ ಸಾಕಲ್ಲ.'' ಆ ಕ್ಷಣದಲ್ಲಿ ಎಲ್ಲೋ ಅಲಕ್ಷಿತ ಆಸೆಯ ಬೆಳಕು ಬಂದೊದಗಿಂತೆ ಕಣ್ಣುಗಳಲ್ಲಿ ಬೆಳಗಿ ಮಾಯವಾಯಿತು.

''ಈ ದಿನ ಶ್ಯಾಮಲಾ ಇನ್ನೊಂದು ಹಾರ್ಲಿಕ್ಸ್ ತರುವುದಾಗಿ ಹೇಳಿದ್ದಾಳೆ. ಒಳ್ಳೆಯ ಆಹಾರ ಬಿದ್ದರೆ ಪುಷ್ಟಿಯಾಗುತ್ತೆ. ಅದರಿಂದಲೂ ಒಳ್ಳೆಯದಾಗಬಹುದು.''

''ಅಕ್ಕ ನನಗಾಗಿ ತುಂಬ ಖರ್ಚು ಮಾಡುತ್ತಾಳೆ. ಈ ದಿನ ಷೂ ಬರಬಹುದು ಅದಕ್ಕೆಲ್ಲಾ ಎಷ್ಟು ದುಡ್ಡಾಗುತ್ತೆ, ಪಾಪ, ಅವಳಿಗೇ ತುಂಬಾ ಕಷ್ಟ. ನನಗೇಕೆ ಖರ್ಚು ಮಾಡಬೇಕು. ಅದೂ ಈ ವ್ಯರ್ಥ ಜೀವಕ್ಕೆ?''

ಗೌರೀಮಾ ಎದೆಯಿಂದ ನಿಟ್ಟುಸಿರೊಂದು ತಪ್ಪಿಸಿಕೊಂಡಿತು. ಉತ್ತರಿಸಲಿಲ್ಲ ಅವಳು.

* * *

ಇಂದು ಶಕೀಲಾಳ ಪತ್ರ ಆಗಮಿಸಿತು.

.....ಪ್ರತಿ ಸಲವೂ ನಾನು ತೋಡಿಕೊಳ್ಳುವುದು ಸಂಸಾರದ ಬವಣೆ ಯನ್ನೇ. ಎಲ್ಲರ ಮನೆಯ ದೋಸೆಯೂ ತೂತು. ನಮ್ಮದಾದರೋ ಕಾವಲಿಯೇ ತೂತು.

ನನಗೀಗ ಪಗಾರ ಎಂಟುನೂರು. ಪತಿ ಹಮಾಶಯನಿಂದ ಸಂಸಾರದ ಖರ್ಚಿಗೆ ಚಿಕ್ಕಾಸೂ ಇಲ್ಲ...ಇದರಲ್ಲೇ ಮುಂಬೈ ಜೀವನ ಎಂದರೆ ಹೇಗಿರಬೇಡ. ಮನೆ ಬಾಡಿಗೆ, ಮಕ್ಕಳ ವಿದ್ಯೆ ನಾನು ನೋಡಿಕೊಳ್ಳುವೆ. ನೀನು ಊಟದ ಖರ್ಚು ನೋಡಿಕೋ, ಎಂಬುದು ಅವರ ವಾದ.

ಖರ್ಚು ವೆಚ್ಚದ ಪಟ್ಟಿ ಮುಂದಿಟ್ಟರೂ ನಂಬುವುದಿಲ್ಲ. ಇದ್ದುದರಲ್ಲೇ ಸರಿತೂಗಿಸು ಎಂಬುದೊಂದೇ ಮಾತು. ಮಕ್ಕಳ ವಿದ್ಯೆ ಮನೆ ಬಾಡಿಗೆ ಕಳೆದು ಉಳಿದ ಹಣ ಬ್ಯಾಂಕಿಗೆ ಹೋಗುವುದಾದರೆ ಆಪದ್ಧನ ಎಂದು ಸಮಾಧಾನಪಟ್ಟುಕೊಳ್ಳ ಬಹುದು. ಆದರೆ, ಬಹುಪಾಲೆಲ್ಲಾ ಹಾಳು ಹವ್ಯಾಸಗಳಿಗೆ. ಮೇಲಾಗಿ ಕೆಲಸ ಕಾರ್ಯ ಗಳಲ್ಲಿ ಏನೇನೂ ಸಹಕಾರವಿಲ್ಲ. ಐಷಾರಾಮದ ಬದುಕು. ನವಾಬೀ ರೀತಿ-ನೀತಿ. ಒಳಗೂ ಹೊರಗೂ ನಾನೊಬ್ಬಳೇ. ಮಕ್ಕಳಿಗೂ ಈಗೀಗ ತಂದೆಯ ಉಂಬಳಿ... ಅದೇ ಪ್ರತಾಪ. ಅದೇ ಪಿಶಾಚತ್ವ

ಮೊನ್ನೆ ನಾನೊಬ್ಬಳೇ ಮಾಡಲಾರೆ ನೀವೂ ಸ್ವಲ್ಪ ಕೂಡಿರಿ ಎಂದರೆ ಬಂದ ಉತ್ತರ ಎಂಥಾದ್ದು ಗೊತ್ತೇ? ಎಡಗೈ ಕೆಲಸ ಎಡಗೈಗೆ. ಬಲಗೈ ಕೆಲಸ ಬಲಗೈಗೆ...!

ಇದಕ್ಕೇನೆನ್ನೋಣ? ನನಗೆ ಸಿಟ್ಟು ಸಂಕಟ ಏಕಕಾಲದಲ್ಲಿ ಉದಿಸಿದುವು. ಸಹಿಸಿಕೊಂಡೆ...ಸಹಿಸಕೊಂಡೆ. ಸಹಿಸಿಕೊಳ್ಳಲೇಬೇಕಾಯಿತು. ಈ ಮಕ್ಕಳು ತಾತನ ಜನ್ಮ ನಕ್ಷತ್ರದಲ್ಲಿಯೇ ಜನಿಸಿದ್ದಾರೆಂದು ತೋರುತ್ತದೆ. ಅದೇ ಸಿಟ್ಟು, ಅದೇ ಗುಣ.

ಈಗ ನಾನು ಏನು ಮಾಡಬೇಕು ಹೇಳಿ? ಕೆಲಸ ಬಿಡುವೆ ಎಂದರೆ ಮುಂದೆ ನನಗೇ ತುಂಬಾ ಕಷ್ಟ. ಈ ಜೀವನಗತಿಯನ್ನು ಹೀಗೆಯೇ ಎಂದು ನಿರ್ಧರಿಸು ವುದಕ್ಕಾಗುತ್ತದೆಯೇ? ನಾವು ಕಾಲೋಚಿತವಾಗಿ ನಡೆಯಬೇಕೇ ಹೊರತು ಜೀವನೋಚಿತವಾಗಿ ಅಲ್ಲ. ಮುಂದಿನ ಕಾಲಗತಿಯಲ್ಲಿ ಏನೇನು ಆಗಲಿದೆಯೋ, ಏನೇನು ಕೊಚ್ಚಿ ಹೋಗಲಿದೆಯೋ? ಯಾರಿಗೆ ಗೊತ್ತು? ನಾನು ಬದುಕಿರುವತನಕ ವಾದರೂ ಇನ್ನೊಬ್ಬರನ್ನು ಆಶ್ರಯಿಸದೆ ಉಳಿಯುವಷ್ಟಾದರೂ ನನಗೆ ಆರ್ಥಿಕ ರಕ್ಷಣೆ ಬೇಕಷ್ಟೆ? ಅದಕ್ಕೋಸ್ಕರ ದುಡಿಯುತ್ತಿರುವೆ ಇನ್ನಾರಿಗಾಗೂ ಅಲ್ಲ.

ಅಪ್ಪನಿಗೆ ಈಗ ವಯಸ್ಸಾಯಿತು. ಇನ್ನಾದರೂ ಶಾಂತಿ ಸಮಾಧಾನಗಳು ಮೂಡಬಹುದು ಕುಟುಂಬದಲ್ಲಿ. ಶರತ್ ಸರಿಯಾಗಿ ಓದುತಿದ್ದಾನೆಯೇ? ಅವನು ಸರಿದಾರಿ ಹಿಡಿದರೆ ನಿಮಗೆಲ್ಲಾ ಕ್ಷೇಮ. ಈ ಬದುಕಿನ ಸುಳಿಯಲ್ಲಿ ಯಾವು ಯಾವುದು ಗಿರಗಿಟ್ಟಿ ಹೊಡೆಯಲುಂಟೋ! ಈ ಅನಿಶ್ಚಿತವಾದ ಬದುಕಿನಲ್ಲಿ-ಅಶಾಶ್ವತವಾದ ಶರೀರದಲ್ಲಿ ನಂಬಿಕೆಯಿಡುವುದುಂಟೇ? ಇರುವಷ್ಟು ಕಾಲ ಹೋರಾಡಿ ಕಣ್ಣು ಮುಚ್ಚಿದರಾಯಿತು. ಭಗವಂತ ಸಾವಿನಲ್ಲಾದರೂ ಸುಖ ಕೊಟ್ಟರೆ ಸಾಕು. ರೋಗದಿಂದ ನೋಯದೆ, ನರಳದೆ, ಮೂಲೆಗುಂಪಾಗದೆ ತಟ್ಟನೆ ಸತ್ತರೆ ಸಾಕು. ನಾನು ಬೇಡುವುದು ಅದೊಂದೇ....

* * *

ಅಕ್ಕನ ಕಾಗದವನ್ನು ಸಂಪೂರ್ಣ ಓದಿಕೊಂಡಳು ಶಾಂತಿ.

ಆ ಕೊನೆಯ ಹಿರಿಯಾಸೆ...ರೋಗದಿಂದ ನೋಯದೆ, ನರಳದೆ, ಮೂಲೆ ಗುಂಪಾಗದೆ ತಟ್ಟನೆ ಸತ್ತರೆ ಸಾಕು. ನಾನು ಬೇಡುವುದು ಅದೊಂದೇ...

ಹಾಗೆಂದು ಬರೆಯಲು ಏನು ಕಾರಣ? ನನ್ನನ್ನು ಚುಚ್ಚಲೆಂದೇ? ಶಾಂತಿ ಇದ್ದಾಳೆಯೇ, ಸತ್ತಿದ್ದಾಳೆಯೇ? ಎಂದು ಒಂದು ಮಾತನ್ನೂ ಬರೆಯುವುದಿಲ್ಲವಲ್ಲಾ. ನನ್ನನ್ನು ಸಂಪೂರ್ಣ ಮರೆತಿದ್ದಾಳೋ ಅಥವಾ ದುರ್ಲಕ್ಷಿಸಿದ್ದಾಳೋ ಊಹಿಸುವುದು ಕಷ್ಟ. ಅಮ್ಮ ಮತ್ತು ಶ್ಯಾಮಲೆಯರಿಂದ ಉಸಿರಾಡುತ್ತಿದೆ ಈ ಬಡ ಜೀವ. ನಿಜಕ್ಕೂ ಹೇಳುವುದಾದರೆ ನನಗೆ ಬದುಕು ಖಂಡಿತ ಇಷ್ಟವಿಲ್ಲ. ಸಾಯುವ ಸುಲಭ ವಿಧಾನ ಗೊತ್ತಿದ್ದಿದ್ದರೆ ಸಾಯಬಹುದಾಗಿತ್ತು. ಸಾಯುವುದು ಹೇಗೆ? ಏನು ಮಾಡಿದರೆ ಸಾವು ಸಂಭವಿಸುತ್ತೆ? ಶ್ಯಾಮಲಾ ಮತ್ತು ಅಮ್ಮ ನನ್ನನ್ನು ಸಾಯಲು ಬಿಡುವುದಿಲ್ಲ. ಅವರಿಬ್ಬರೂ ಇಲ್ಲದಿದ್ದರೆ ಕೊಳೆತು ಹುಳಿಯಬೇಕಿತ್ತು...ನನಗೇಕೆ ಈ ಕಷ್ಟಕೊಟ್ಟ ಭಗವಂತ? ನಾನೇನಾದರೂ ತಪ್ಪು ಮಾಡಿದೇನೆಯೇ? ಒಂದು ವೇಳೆ ತಪ್ಪು ಮಾಡಿದ್ದರೆ ಬಾಲಚೇಷ್ಟೆ ಮಾಡಿರಬಹುದು; ಅದಕ್ಕಾಗಿ ಈ ಉಗ್ರಶಿಕ್ಷೆ? ಎಂಥೆಂಥಹವರೋ ಏನೇನೋ ತಪ್ಪುಮಾಡಿ ಸುಖವಾಗಿದ್ದಾರೆ. ಕೊಲೆ ಮಾಡಿದವರು ಕೋರ್ಟಿನಿಂದ ಬಿಡುಗಡೆ ಹೊಂದಿ ಸುಖವಾಗಿದ್ದಾರೆ. ನನ್ನಂತೆ ಮೂಲೆಗುಂಪಾಗಿ ನರಳುವವರು ಯಾರೂ ಇಲ್ಲ.

ನನ್ನ ವಿದ್ಯೆ ಬುದ್ಧಿಗೆ ಕಲ್ಲುಹಾಕಿ ಮೂಲೆ ಕೂಡಿಸುವುದಕ್ಕೆ ಕಾರಣವೇನು ದೇವರಿಗೆ? ದೇವರು ಯಾರ ಕಡೆಗೂ ವಾಲದೆ, ಪಕ್ಷಪಾತಿಯಾಗದೆ ಇರಬೇಕಾದುದು ನ್ಯಾಯ....ಆದರೆ, ನನ್ನ ವಿಚಾರದಲ್ಲಿ ಮಾತ್ರ ಇಷ್ಟೊಂದು ಕ್ರೂರಿಯಾಗಲು ಕಾರಣ? ಅದೇ ಅರ್ಥವಾಗುತ್ತಿಲ್ಲ....

ಆಲೋಚಿಸಿದಷ್ಟೂ ವಿಷಯ ಗಹನ. ಕರವಸ್ತ್ರ ಹೊಲಿಯುವುದಾಗಲೀ, ಪಾಠ ಕಲಿಯುವುದಾಗಲೀ ಮನಸ್ಸಾಗಲಿಲ್ಲ. ದುಃಖ-ದುಗುಡಗಳ ಮೊನಚು ಮುಳ್ಳುಗಳು ಮನವನ್ನು ಚುಚ್ಚುತ್ತಲೇ ಇರುತ್ತವೆ. ಚಿಂತಾಕ್ರಾಂತತೆಯಲ್ಲಿ ಹೊತ್ತು ಉರುಳಿದುದೇ ತಿಳಿಯಲಿಲ್ಲ.

ಸಂಜೆ ಅಡರಿತು. ಶ್ಯಾಮಲಾ ಒಳ ಹೆಜ್ಜೆಯಿಟ್ಟಳು.

* * *

''ಶ್ಯಾಂ, ಶ್ಯಾಮಲಾ ಎಂದರೆ ಮನಸ್ಸಿಗೆ ಎಂತಹ ಆಪ್ಯಾಯಮಾನವೋ... ದೇವರು ಅವಳಿಗೆ ತಾನೇ ಸುಖಕೊಟ್ಟಿದ್ದಾನೆಯೇ? ಹಿಂಸೆ, ಹಿಂಸೆ. ಪರಮಹಿಂಸೆಯ ಪೀಡನೆ'' ಎಂದುಕೊಂಡಳು ಶಾಂತಲಾ.

ಶ್ಯಾಮಲಾ ಶೌಚಾಲಯಕ್ಕೆ ಹೋಗಿ ಕೈಕಾಲು ತೊಳೆದುಕೊಂಡವಳೇ ನೇರವಾಗಿ ಬಂದುದು ಶಾಂತಿಯ ಬಳಿಗೆ. ತಲೆಯನ್ನು ನೇವರಿಸಿ, ಬೊಗಸೆಯಲ್ಲಿ ಮುಖವನ್ನು ಹಿಡಿದೆತ್ತಿ "ಇಂದು ಏನೆಲ್ಲಾ ಮಾಡಿದೆ ಶಾಂತಿ?"

ಆ ಪ್ರಶ್ನೆಗೆ ಉತ್ತರಿಸಲಾರದೇ ಹೋದಳು ಶಾಂತಿ. ಮ್ಲಾನ ಮುಖಬಿಂಬದಲ್ಲಿ, ಮಿನುಮಿನುಗುವ ಕಣ್ಣಾಲಿಗಳಲ್ಲಿ ಶೋಕಛಾಯೆ ಮಿನುಗಿ ಮಾಯವಾಯಿತು.

"ಏನಮ್ಮಾ, ಏನೋ ಒಂದು ಬಗೆಯಾಗಿದ್ದಿ?"

"ಏನಿಲ್ಲ; ಸುಮ್ಮನೆ ಬೇಸರ ಅಷ್ಟೆ."

"ಹಾಗೆಲ್ಲಾ ಬೇಸರಪಟ್ಟುಕೊಳ್ಳಬಾರದು. ನೋಡು, ನಿನಗೇನು ತಂದಿರುವೆ?"

"ಏನು?"

"ಹಾರ್ಲಿಕ್ಸ್, ಅಮುಲ್ ಮಿಲ್ಕ್ ಪೌಡರ್, ಸಕ್ಕರೆ."

"ಇದೇಕೆ?"

"ಮನೆಯಲ್ಲಿ ಅನೇಕವೇಳೆ ಹಾಲಿರದೆ ನಿನ್ನ ಪೌಷ್ಠಿಕ ಆಹಾರಕ್ಕೆ ಕೊರತೆ ಬೀಳುತ್ತೆ. ಅದಕ್ಕಾಗಿಯೇ ತಂದೆ. ಹಾರ್ಲಿಕ್ಸ್‌ನೊಂದಿಗೆ ಸ್ವಲ್ಪ ಮಿಲ್ಕ್ ಪೌಡರ್ ಸೇರಿಸಿದರೆ ಒಳ್ಳೆಯ ಪಾನೀಯವಾಗುತ್ತೆ.ಅಷ್ಟೇ ಅಲ್ಲ. ಪೌಷ್ಠಿಕವೂ ಹೌದು. ನಿನ್ನ ದೇಹಸ್ಥಿತಿ ಕ್ಷೀಣಿಸಿರುವುದರಿಂದ ಕಾಲು ಚೇತರಿಸಿಕೊಳ್ಳುತ್ತಿಲ್ಲ. ನಿನ್ನ ದೇಹಾರೋಗ್ಯ ಕ್ಷೀಣಿಸಿದರೆ ಕಾಲೂ ಸಹಜವಾಗಿ ಕ್ಷೀಣಿಸುತ್ತೆ. ನೀನು ಸದಾ ಪೌಷ್ಠಿಕಾಹಾರ ತೆಗೆದುಕೊಳ್ಳಲೇಬೇಕು. ಅದಿಲ್ಲದೆ ಹೋದರೆ ನೀನು ಚೇತರಿಸಿಕೊಳ್ಳಲಾರೆ.....ಸುಮ್ಮನೆ ಕಾಲಹರಣ ಒಳ್ಳೆಯದಲ್ಲ. Remember that time is more than money. ಕಾಲವನ್ನು ಸರಿಗಟ್ಟುವುದೇ ಜೀವನ ಪಟುತ್ವ, ಎಂದಿಗೂ ನಾವು ಕಳೆದ ಕಾಲವನ್ನು ಹಿಂದಕ್ಕೆ ಪಡೆಯಲಾರೆವು ತಿಳಿಯಿತೇ? ಇಗೋ ಈಗೊಂದು ಲೋಟ ಹಾರ್ಲಿಕ್ಸ್ ತರುವೆ....ನೀನು ಕುಡಿ. ಈಗ ಮಾತ್ರವಲ್ಲ; ದಿನವೂ ಕುಡಿಯಬೇಕು."

ಶ್ಯಾಮಲಾ ಹಾರ್ಲಿಕ್ಸ್ ಮಾಡಿ ಕುಡಿಸಿದಳು.

"ಇಂದು ನಿನ್ನ ಷೂ ಬರುತ್ತೆ. ಏಳು ಗಂಟೆಯೊಳಗಾಗಿ ಕಳುಹಿಸುವೆ ಎಂದಿದ್ದಾನೆ ಅಂಗಡಿಕಾರ. ಅದರಿಂದ ನಿನಗೆ ಸ್ವಲ್ಪ ಅನುಕೂಲವಾಗಬಹುದು."

ಶಾಂತಲಾ ಮುಗುಳು ನಕ್ಕಳು.

* * *

ಆ ತಂಗಿಯ ಮುಖದ ಮೇಲೆ ಒಂದು ಮುಗುಳ್ನಗೆ ಮೂಡಿತೆಂದರೆ ಎಷ್ಟೋ ಸಮಾಧಾನ. ಶ್ಯಾಮಲಾ ತಾಯಿಗೆ ನೆರವು ನೀಡುವ ಸಲವಾಗಿ ಅಡಿಗೆ ಮನೆಗೆ

ಹೋದಾಗಲೇ ಹಿತ್ತಿಲ ಬಾಗಿಲ ಮೂಲಕ ಶರತ್ ಪಾದರಕ್ಷೆಗಳ ಪಟಪಟ ಸದ್ದು ಮಾಡುತ್ತ ಒಳಬಂದ. ನೋಡಿದರೆ ಹೊಸ ಷೂಗಳು, ಹೊಸ ಬಟ್ಟೆಗಳು! ಹುಡುಗ ಆನಂದಪ್ರೀತನಾಗಿದ್ದಾನೆ!

''ಎಲ್ಲಿಂದ ತಂದೆ ಮಗನೇ?'' ಅಚ್ಚರಿಯಿಂದ ಕೇಳಿದಳು ಗೌರೀಮಾ.

''ಅಪ್ಪನಿಂದ ಹಣಗಿಟ್ಟಿಸಿದೆ!''

''ಅರೆರೆ! ನೀನು ಸದ್ದಿಲ್ಲದೆ ಗಿಟ್ಟಿಸಿದುದು ಬಹಳ ಆಶ್ಚರ್ಯ!''

''ನಾನು ಏನು ಮಾಡಿದೆ ಗೊತ್ತೇ?'' ಹಿಹ್ಹಿಹ್ಹೀ ಕಿಲಕಿಲ ನಗತೊಡಗಿದ ಶರತ್.

''ಇಲ್ಲ....ಹೇಳಪ್ಪಾ!'' ಅಂಗಲಾಚಿದಳು ಶ್ಯಾಮಲಾ.

ಶಾಂತಲೆಗೂ ಆಶ್ಚರ್ಯ...ಇವನು ಹೇಗೆ ಅಪ್ಪನಿಂದ ದುಡ್ಡುಕಿತ್ತ? ಆ ಬಗ್ಗೆ ಒಂದು ಚಕಾರವನ್ನೂ ಎತ್ತಲಿಲ್ಲ ಹುಡುಗ! ಈಗ ನೋಡಿದರೆ ಮೋಜನಿಂದ ಬಂದಿದ್ದಾನೆ!

''ನಾನು ಏನು ಉಪಾಯ ಮಾಡಿದೆ ಗೊತ್ತೋ?''

''ಹೇಳಪ್ಪಾ, ಹೇಳು! ಬೇಗ ಕೇಳಿ ಬಿಡೋಣ.''

''ಆಫೀಸಿಗೆ ಹೋಗಿ ಹಣ ಕೇಳಿದೆ! ಅಲ್ಲಿ ಅಪ್ಪನ ಸಹಪಾಟಿಗಳು ತುಂಬ ಜನ ಇದ್ದುದರಿಂದ ಅಪ್ಪನಿಗೆ ಸೊಲ್ಲೆತ್ತಲಾಗಲಿಲ್ಲ! ಮರು ಮಾತಾಡದೆ ಇನ್ನೂರು ರೂಪಾಯಿ ಕೊಟ್ಟರು. ನನಗೆ ಬೇಕಾಗಿದ್ದೂ ಇನ್ನೂರು. ಅವರು ಕೊಟ್ಟಿದ್ದೂ ಇನ್ನೂರು!''

ಶರತ್ ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳುವಷ್ಟು ಉತ್ಸಾಹದಿಂದ ನಕ್ಕುಬಿಟ್ಟ. ಎಲ್ಲರ ಮುಖದಲ್ಲೂ ನಗುವಿನಲೆ ಉಕ್ಕಿ ಹರಿಯಿತು.

## ೮

ಶಾಂತಲಾ ಷೂ ಹಾಕಿ ಸೊಟ್ಟಪಟ್ಟವಾಗಿ ನಡೆಯುತ್ತಿರುವಾಗಲೇ ಗಂಗಾರಾಂ ಒಳಬಂದ. ಪಾದರಕ್ಷೆಗಳು ಪಟತ್ಕಾರಗೈದರೆ ಸತ್ ಶಾಂತಿಯ ತಲೆಯ ಮೇಲೆ ಸುತ್ತಿಗೆಯಿಂದ ಬಡಿದಂತಹ ಸದ್ದು, ಶಾಂತಲಾ ತಟ್ಟನೆ ನೋಟವನ್ನು ತಲೆಬಾಗಿಲ ಕಡೆ ಹೊರಳಿಸಿದಳು.

ಗಂಗಾರಾಂ ಸನಿಹಕ್ಕೈತಂದು ಕೇಳಿದ ''ಎಲ್ಲಿತ್ತು ಈ ಷೂ? ''

"ಶ್ಯಾಮಲಾ ಮಾಡಿಸಿಕೊಟ್ಟಳು."

"ಎಷ್ಟು ಆದಕ್ಕೆ?"

"ಗೊತ್ತಿಲ್ಲ..."

"ನಿನಗೇಕೆ ಹಣ ದಂಡ ಮಾಡಿದ್ದಾಳೆ?"

ಗಂಗಾರಂ ಪಾದರಕ್ಷೆಯ ಸ್ವರೂಪವನ್ನು ದಿಟ್ಟಿಸಿ ನೋಡಿದ. ಸ್ಟೀಲಿನ ರಾಡುಗಳು ತೊಡೆವರೆಗೂ ಇವೆ. ಅದರ ಬಲದಿಂದ ನಡೆಯುವುದು ಸಾಧ್ಯವಿದೆ. ಹುಡುಗಿ ಅಲ್ಲಲ್ಲೇ ಓಡಾಡುತ್ತಾಳೆ. ಒಮ್ಮೊಮ್ಮೆ ಆ ರಾಡುಗಳನ್ನು ಕೈಯಿಂದ ಹಿಡಿದು ಕೊಂಡು ಓಡಾಡಬಲ್ಲಳು, ಈಗ ಮೊದಲಿನಂತೆ ಕುಳಿತಲ್ಲೇ ಕುಳಿತಿರಬೇಕಿಲ್ಲ.

"ಗೌರೀ..."

ಗೌರೀಮಾ ಹೊರಬಂದಳು.

"ಈ ಷೂಜಿಗೆ ಕೊಡಲು ಹಣವೆಲ್ಲಿತ್ತು?"

"ಗೊತ್ತಿಲ್ಲ..."

"ಎಷ್ಟು ಕೊಟ್ಟಿದ್ದಾಳೆ?"

"ಅದೂ ಗೊತ್ತಿಲ್ಲ..."

ಗೌರೀಮಾ ಒಳಹೋದಳು ಕಾಫೀ ತಯಾರಿಸುವ ಸಲುವಾಗಿ....ಮನದಲ್ಲೇ ಅಳುಕು ಇನ್ನು ಶ್ಯಾಮಲೆಯ ಗತಿ ಮುಗಿಸಿಬಿಡುತ್ತಾರೆ. ಏನು ಗತಿಯೋ...ಎದೆಯ ಹಕ್ಕಿ ದುಃಖಿಸುತ್ತಿದ್ದಂತೆಯೇ ಕಾಫಿಯನ್ನು ಒಯ್ದುಕೊಟ್ಟು ಬಂದಳು. ತಂದೆಯ ಚುಚ್ಚು ನೋಟವನ್ನು ತಪ್ಪಿಸಿಕೊಳ್ಳುವ ಸಲುವಾಗಿ ಅಡಿಗೆ ಮನೆಯನ್ನು ಸೇರಿಕೊಂಡಳು ಶಾಂತಲಾ. ಹಾಗೆ ತಾನೇ ತಾನಾಗಿ ಓಡಾಡಿ ಹತ್ತಿರ ಹತ್ತಿರ ವರ್ಷವೇ ಆಗಿತ್ತು. ಹೀಗೆಯೇ ಅಭ್ಯಾಸ ಮಾಡಿಕೊಂಡರೆ ಶಾಲೆಯವರೆಗೂ ನಡೆಯಬಲ್ಲೆ ಎಂಬ ಆಲೋಚನೆ. ಆದರೆ...ಈ ಅಪ್ಪ ಏಕೆ ಹೀಗೆ ಅದೇ ಅರ್ಥವಾಗುತ್ತಿಲ್ಲ.

"ಮಗಳೇ! ಅವರು ಏನಾದರೂ ಅಂದುಕೊಳ್ಳಲಿ ನೀನು ನಡೆಯುವ ಅಭ್ಯಾಸ ಮಾಡಿಕೊ."

"ಅಪ್ಪನನ್ನು ನೋಡಿದರೆ ಭಯ."

"ಅವರ ಕೋಪ ಯಾವಾಗಲೂ ಇದ್ದದ್ದೆ! ನೀನು ಸುಮ್ಮನಿದ್ದು ಬಿಡು."

ತಾಯಿ ಅವಳಿಗೆ ಹಾರ್ಲಿಕ್ಸ್-ತಿಂಡಿ ಕೊಟ್ಟು ಕಾಲು ಮಣೆಯ ಮೇಲೆ ಕುಳ್ಳಿರಿಸಿದಳು. ಕಾಲು ನೀಡಿ ಕುಳಿತ ಶಾಂತಲಾ "ಅಪ್ಪ ಕ್ಲಬ್ಬಿಗೆ ಹೋಗುವ ತನಕ ಅಕ್ಕ ಬರದಿದ್ದರೆ ಸಾಕು."

"ನನಗೂ ಹಾಗೆನಿಸುತ್ತೆ. ಅವಳು ಕೆಲಸಕ್ಕೆ ಸೇರಿದುದನ್ನು ಇನ್ನೂ ತಿಳಿಸಿಯೇ ಇಲ್ಲ. ಅದಕ್ಕಿನ್ನೇನು ರಾಮಾಯಣವೋ..."

"ಅವರಿಗೆ ಶರತ್ ಸರಿಯಾದ ಮಗ!"

* * *

ಶರತ್ ಪುಸ್ತಕದ ಚೀಲವನ್ನು ಕೋಣೆಯಲ್ಲಿಟ್ಟು ಒಳ ಬಂದು "ಓಹೋಹೋ! ಕುಂಟಿಗೊಂದು ಹೊಸಕಾಲು!" ಎಂದು ಕಿಲಕಿಲ ನಕ್ಕುಬಿಟ್ಟ.

"ನೀನು ಯಾವಾಗಲೂ ಅವಳನ್ನು ಹೀಯಾಳಿಸುತ್ತಿ! ಅದು ಸರಿಯಲ್ಲ. ಪಾಪ, ಅವಳೇನು ಮಾಡಿದ್ದಾಳೆ ನಿನಗೆ?"

"ಅವಳೇನೂ ಮಾಡಲಿಲ್ಲ. ಸುಮ್ಮನೆ ತಮಾಷೆ ಮಾಡಿದೆ ಅಷ್ಟೆ."

"ನಿನಗೆ ತಮಾಷೆ, ಅವಳಿಗೆ ಪ್ರಾಣ ಸಂಕಟ."

"ಶಾಂತಿ, ನಿನ್ನ ಮೂಲೆ ಗುಮ್ಮ ಅಥವಾ ಕುಂಟಿ ಎಂದರೆ ಬೇಸರವೇ ಹೇಳು? ನಾನು ಮಾಡೋದು ತಮಾಷೆ ಅಲ್ಲವೇ?"

ಶಾಂತಲಾ ತಲೆಯಾಡಿಸುತ್ತ "ನೀನು ಏನಾದರೂ ಅಂದುಕೊ. ಬೇಸರ ವಿಲ್ಲ. ಇದ್ದುದನ್ನು ಇದ್ದಂತೆಯೇ ಹೇಳುತ್ತೀ. ಹೇಳಿಕೋ ಅದರಿಂದೇನೂ ಆಗುವುದಿಲ್ಲ."

"ಸರಿ, ಮತ್ತೆ. ನಿನಗೆಲ್ಲಾ ಗೊತ್ತು."

"ಶರತ್, ನೀನು ಬಲು ತುಂಟ. ಸ್ವಲ್ಪವೂ ಕರುಣೆಯಿಲ್ಲ. ಪಾಪ, ಅದರ ಕಷ್ಟ ಅದಕ್ಕೆ. ಇನ್ನು ಹೀಗೆಲ್ಲಾ ಮಾತಾಡಬಾರದು ಕಂಡೆಯಾ?"

ಗೌರೀಮಾ ಮಗಳನ್ನು ಮುದ್ದಿಟ್ಟುಕೊಂಡು ಸಂತೈಸಿದಳು.

* * *

ಡಾ|| ಫರೀದ್ ಕಪಾಟಿನ ಕಡೆ ಕೈ ತೋರಿಸಿ "ಸೀಸೆಯಲ್ಲಿ ಮಾತ್ರೆಗಳಿವೆ. ತೆಗೆದುಕೊಡು. ಇಂದು ನನಗೆ ತುಂಬ ತಲೆನೋವು. ಈಗ ಮನೆಗೆ ಹೋಗಲೇಬೇಕು. ಮನೆಯಲ್ಲಿ ಹಾಯಾಗಿ ಮಲಗಿಬಿಡುವೆ."

ಶ್ಯಾಮಲೆಯ ಕಡೆ ನೋಡುತ್ತ ಹೇಳಿಕೊಂಡ.

ನಾಲ್ಕು ಪತ್ರಗಳನ್ನು ಬರೆಸಿದನಷ್ಟೆ. ತಲೆನೋವು ಎನ್ನುತ್ತಾ ಹಿಂದಕ್ಕೆ ವಾಲಿದ. ಅವಳು ಮಾತ್ರೆ ತೆಗೆದು ಲೋಟಿಗೆ ಹೂಜಿಯಿಂದ ನೀರು ಬೊಗ್ಗಿಸಿಕೊಟ್ಟಳು. ಅವನು ಮಾತ್ರೆ ತಿಂದು ನುಡಿದ,

"ಇಂದು, ನನ್ನಿಂದ ಏನೂ ಆಗದು ಶ್ಯಾಮಲಾ. ಪಂಡರಿಗೆ ಹೇಳು ಇವಿಷ್ಟನ್ನ ಟೈಪ್ ಮಾಡಿಡಲಿ. ಮಧ್ಯಾಹ್ನ ಸಾಧ್ಯವಾದರೆ ಬಂದು ಸಹಿ ಹಾಕುವೆ. Otherwise ನಾಳೆ ಬೆಳಿಗ್ಗೆ."

"ಆಗಲಿ ಸಾರ್!"

ಶ್ಯಾಮಲಾ ಕಾಗದಗಳ ಸಹಿತ ಹೊರಬಂದು ಪಂಡರಿಗೆ ಕೊಟ್ಟು "ಇವನ್ನ ಟೈಪ್ ಮಾಡಿಡಬೇಕಂತೆ."

"ಇಂದು ಇಷ್ಟೇನಾ?"

"ತುಂಬ ತಲೆನೋವು, ಮಧ್ಯಾಹ್ನ ಅಥವ ನಾಳೆ ಸಹಿ ಹಾಕುವೆ. ಈದಿನ ಮನೆಗೆ ಹೋಗಲೇಬೇಕು. ಇವಿಷ್ಟು ಟೈಪ್ ಮಾಡಿಡಲು ಹೇಳು ಎಂದಿದ್ದಾರೆ."

ಈ ಕಾಗದಗಳನ್ನು ಈಸಿಕೊಂಡ ಪಂಡರೀ ನುಡಿದಳು "ಅವರು ಕಾಹಿಲೆ ಬಿದ್ದರೆ ಆಸ್ಪತ್ರೆ ಸೇರಬೇಕು. ಅವರ ಸಂಸಾರ ಇರುವುದು ಪಂಜಾಬಿನಲ್ಲಿ."

"ಜೊತೆಗೆ ಇನ್ನಾರೂ ಇಲ್ಲವೇ?"

"ಆಳುಕಾಳು ಅಷ್ಟೆ."

"ಓಹೋ..."

"ಇವರೇ ಅಲ್ಲಿಗೂ ಇಲ್ಲಿಗೂ ಓಡಾಡುತ್ತಿರುತ್ತಾರೆ."

ಅಲ್ಲಿಗೆ ಆ ಪ್ರಸ್ತಾಪ ಮುಗಿಯಿತು.

ಶ್ಯಾಮಲಾ ಅಕೌಂಟ್ ಪುಸ್ತಕ ಹಿಡಿದು ಕುಳಿತಿದ್ದರೂ ಮನಸ್ಸೆಲ್ಲಾ ತಂಗಿಯ ಮೇಲೆ... ಈದಿನ ಅವಳಿಗೆ ಹೆಚ್ಚು ಹೆಚ್ಚು ನಡೆದಾಡಿ ಅಭ್ಯಾಸ ಆಗಿರಬಹುದು... ನಡೆಯುತ್ತೇನೆಂದು ಖುಷಿಪಟ್ಟುಕೊಂಡಿರಬಹುದು. ಅಪ್ಪ ಗದರಿಸಿಕೊಂಡರೆ ಕಷ್ಟ... ನಾನು ಹೋದೊಡನೆಯೇ ತನ್ನ ಹೊಸ ಅನುಭವ ಹೇಳಿಕೊಳ್ಳುವುದರಲ್ಲಿ ಉತ್ಸಾಹ ತೋರುತ್ತಾಳೆ. ಬಹಳ ಒಳ್ಳೆಯ ಮಗು. ತಪ್ಪುಮಾಡಿ ನಮ್ಮ ಮನೆಯಲ್ಲಿ ಹುಟ್ಟಿತು. ದಯೆ-ಧನ ಇದ್ದವರ ಮನೆಯಲ್ಲಿ ಹುಟ್ಟಿದ್ದಿದ್ದರೆ ಸುಖವಾಗಿರುತಿತ್ತು. ನಮ್ಮಲ್ಲಿ ದಯೆಯೂ ಇಲ್ಲ. ಧನವೂ ಇಲ್ಲ... ನಮ್ಮಂತಹ ದೀನ ದರಿದ್ರರನ್ನು ದೇವರೇ ಕಾಪಾಡಬೇಕು.

ಲೆಖ್ಖ ಮಾಡುತ್ತಿದ್ದರೂ ಮಾನಸ ಪಕ್ಷಿ ಸುಳಿದಾಡುತಿದ್ದುದು ಮನೆಯಲ್ಲಿ.

* * *

ಗಂಗಾರಾಂ ಒಳ ಹೆಜ್ಜೆ ಇಟ್ಟಾಗಲೇ ಶರತ್ ಆಕಸ್ಮಿಕವಾಗಿ ಎದುರಾದ.

ಆಫೀಸಿನಲ್ಲಿ ತಂದೆಯನ್ನು ಕಂಡನಂತರ ಎದುರಿಗೆ ಸಿಕ್ಕದಂತೆ ದಿನವೂ ಎಚ್ಚರ ವಹಿಸುತ್ತಿದ್ದ.

''ಸ್ಕೂಲಿಗೆ ಸರಿಯಾಗಿ ಹೋಗುತ್ತಿರುವೆಯಾ?''

''ಹೌದು. ಅಪ್ಪಾ! ಮಾಸ್ಟರನ್ನು ಕೇಳಿ.''

''S.S.L.C. ಪಾಸಾಗುತ್ತೀ ತಾನೇ?''

''ಪ್ರಯತ್ನಿಸುವೆ..''

''ಹಾಗೆಂದರೇನೋ....''

''ಕಷ್ಟಪಟ್ಟು ಓದುತ್ತಿರುವೆ ಎಂದರ್ಥ!''

''ಒಂದು ವೇಳೆ ಫೇಲಾದರೆ?''

''ದೈವೇಚ್ಛೆ!''

''ಅತೀ ಮಾತಾಡುತ್ತಿ. ಹಲ್ಲುಮುರಿದು ಕೈಗೆ ಕೊಟ್ಟೇನು!''

''ನಿಮ್ಮ ಪ್ರಶ್ನೆಗಳಿಗೆ ಉತ್ತರಿಸಬೇಕಾಗಿತ್ತು. ಉತ್ತರಿಸಿದೆ ಅಷ್ಟೆ.''

ಸರಕ್ಕನೆ ಶರತ್ ಹೊರಗಡೆ ಜಾರಿದ. ಮೈಮನಗಳು ಚಕಮಕಿ. ತಂದೆಯ ಭಯ ಈಗ ಮೈಲಿ ದೂರ. ಕ್ರಿಕೆಟ್ ಆಟದ ಹುಚ್ಚು ತಲೆಯಲ್ಲಿ. ಪರೀಕ್ಷೆಯಲ್ಲಿ ಪಾಸಾಗದಿದ್ದರೂ ಕ್ರಿಕೆಟ್ಟಿನಲ್ಲಿ ಸೈ ಎನ್ನಿಸಿಕೊಳ್ಳಲೇಬೇಕು. ಸೈಕ್ಲಿಂಗ್‌ನಲ್ಲಿ, ಓಡುವುದರಲ್ಲಿ, ಈಜುವಿಕೆಯಲ್ಲಿ ಸದಾ ಮುಂದೆ ಮುಂದೆ ಬರುತಿದ್ದಾನೆ. ಯಾವೊಂದೂ ಸ್ಥಿರವಾಗಿಲ್ಲದ ಪ್ರಯುಕ್ತ ಚಂಚಲತೆ-ಸಮಯ ಸಂಕೋಚ. ಏನೆಲ್ಲಾ ಒಂದುಗೂಡಿದ್ದುವೋ....ಯಾವೊಂದರಲ್ಲೂ ಕೀರ್ತಿ ಕಳಶ ಏರಿಸಲಿಲ್ಲ. ತಲೆಗೆ. ಅದಕ್ಕೆ ಇನ್ನೂ ಸಾಕಷ್ಟು ಕಾಲಾವಕಾಶವಿದ್ದುದರಿಂದ ನಿಶ್ಚಿಂತೆ-ನಿರ್ದಾಕ್ಷಿಣ್ಯ-ನಿರ್ಭೀತ.

I am the master of my fate! ಎನ್ನುವ.

''ನೀನು ಹೀಗೆಂದರೆ ಹೇಗೆ ಶರತ್? ಅಪ್ಪ ಮೊದಲೇ ಬೆಂಕಿಯ ಕಿಡಿ. ನಿನ್ನ ಕಾಲ ಮೇಲೆ ನೀನು ನಿಲ್ಲುವವರೆಗೆ ಸ್ವಲ್ಪ ದಾಕ್ಷಿಣ್ಯವಿರುವುದು ಒಳ್ಳೆಯದು.''

''ಅದೇ ಆಗಲೇ ಹೇಳಿದೆನಲ್ಲಾ, I am the master of my fate!''

''ಶರತ್! ತೀರಾ ಉದ್ಧಟತನ ಒಳ್ಳೆಯದಕ್ಕಲ್ಲ!''

''ನನ್ನ ಹಣೆಯಲ್ಲಿ ಕೆಟ್ಟದ್ದೇ ಬರೆದಿದ್ದರೆ ನೀನೇನು ಮಾಡುತ್ತೀ ಹೇಳು?''

''ಸ್ವಪ್ರಯತ್ನ ಮುಖ್ಯ.''

''ನಾನು ಇಲ್ಲಿಯವರೆಗೆ ಏರಿರುವುದು ಸ್ವಪ್ರಯತ್ನದಿಂದಲೇ.''

ಶ್ಯಾಮಲಾ ಸ್ವಲ್ಪಹೊತ್ತು ಮಾತಾಡದೆ ಆಲೋಚನಾಕ್ರಾಂತಳಾದಳು.

"ನೋಡು ಶ್ಯಾಂ! ಅಪ್ಪನನ್ನು ಬಗ್ಗಿಸುದುದಲ್ಲದೆ ಹಣ ಕಕ್ಕಿಸಿಯೂ ಬಿಟ್ಟೆ! ಈಗ ನನ್ನ ಮುಂದೆ ಮೊದಲಿನಷ್ಟು ಆರ್ಭಟವಿಲ್ಲ. ನೋಡೋಣ."

ಶ್ಯಾಮಲಾ ಅವನ ಮುಂಗುರುಳಿನಲ್ಲಿ ಬೆರಳಾಡಿಸುತ್ತ ಯೋಚಿಸಿದಳು... ಹುಡುಗ ಜಾಣ. ಸ್ವಲ್ಪ ತಗ್ಗಿ ಬಗ್ಗಿ ನಡೆದರೆ ಎಷ್ಟು ಒಳ್ಳೆಯದು.

ಆದರೆ ಚಿತ್ತಭಿತ್ತಿಯ ಮೇಲೆ ಸುಳಿದಳಿದ ಸೂಕ್ತಿ ಉಷ್ಣಂ ಉಷ್ಣೇನ ಶಮ್ಯತೇ.

ಶ್ಯಾಮಲಾ ವಿಚಾರ ಶೀಲಳಾದಳು. ತಮ್ಮನ ಧೋರಣೆ ಪುರುಷ ಸಹಜ ವಾದರೂ ಬಾಲ್ಯಕ್ಕೆ-ಬಾಲ್ಯದ ಜೀವನಗತಿಗೆ ಸರ್ವತ್ರ ವಿರೋಧ ಎಂಬುದು ಆತ್ಮನಿರ್ಣಯ.

ಅವಳು ಬಾಯಿ ಬಿಟ್ಟು ಏನೂ ಹೇಳಲಿಲ್ಲ. ಮನದಾಳದಲ್ಲಿ ಚಿಂತೆಯ ಕೀಟದ ಉಪದ್ರವ.

ಶಾಂತಲಾ ಅಂದೆಲ್ಲಾ ಸರಿಯಾಗಿ ನಡೆಯುವುದನ್ನು ಅಭ್ಯಾಸ ಮಾಡುವುದರಲ್ಲೇ ಹೊತ್ತು ಕಳೆದಿದ್ದಾಳೆ. ಅದರಿಂದ ಸುಮಾರಾಗಿ ನಡೆಯಲು ಸಾಧ್ಯವಾದರೂ ಕುಳಿತುಕೊಳ್ಳಲು ಕುರ್ಚಿಯೇ ಬೇಕು. ಈಗೀಗ ಅದನ್ನು ಕಟ್ಟಿಕೊಳ್ಳುವುದಾಗಲೀ ಬಿಚ್ಚಿಕೊಳ್ಳುವುದಾಗಲೀ ತಾನೇ ಮಾಡಿಕೊಳ್ಳುವ ಹುರುಪು. ತನ್ನಿಂದಾಗದಿದ್ದರೆ ಮಾತ್ರ ಇತರರ ಸಹಾಯದ ಬೇಡಿಕೆ.

ಅಂತೂ ಅವಳ ಬದುಕಿಗೊಂದು ತಿರುವು ಕೊಟ್ಟಂತಾಯಿತು ಎಂಬ ಸಂತಸ ಶ್ಯಾಮಲೆಗೆ.

* * *

ಡಾ|| ಫರೀದ್ ಮೂರು ದಿನಗಳ ವಿಶ್ರಾಂತಿಯ ಬಳಿಕ ಆಫೀಸಿಗೆ ಮರಳಿದ.

ಸಾಲಾಗಿ ಕುಳಿತ ಮೂವರು ಹುಡುಗಿಯರ ಕಡೆ ನೋಡುತ್ತಲೇ ಮೆಟ್ಟಿಲುಗಳನ್ನು ಹತ್ತಿ ತನ್ನ ಆಫೀಸಿಗೆ ಹೋದ. ಮೂರು ದಿನದ ಟಪ್ಪಾಲು ಒಡೆದಿರಲಿಲ್ಲ. ಎಲ್ಲವನ್ನೂ ಒಡೆದು ಓದಿ ಕರೆಗಂಟೆ ಒತ್ತಿದ. ಶಾರದಾ ಕರ್ವೆ ಬಾಗಿಲಲ್ಲಿ ಸಣ್ಣ ಸದ್ದು ಮಾಡಿ "ಒಳಗೆ ಬರಬಹುದೇ?" ಎಂದು ಕೇಳಿದಳು.

"Yes please!"

"ಪೆನ್ನು ಕಾಗದ ತೆಗೆದುಕೊ..."

ಅವಳು ಅಣಿಯಾಗಿ ಕುಳಿತುಕೊಳ್ಳುತ್ತಲೂ ಎಲ್ಲ ಕಾಗದಗಳಿಗೂ ಉತ್ತರ ಬರೆಸಿದನಂತರ "ಟೈಪ್ ಮಾಡಲು ಕೊಡು" ಎಂದ ಬಳಿಕ "ಈ ದಿನವೇ ಎಲ್ಲವೂ ಪೋಸ್ಟ್ ಆಗಬೇಕು."

''ಆಗಲಿ, ಸರ್!'

ಅವಳು ಹೊರಟಳು. ಡಾ|| ಫರೀದ್ ಕುರ್ಚಿಯ ಬೆನ್ನಿಗೆ ತಲೆಯಿರಿಸಿ ಕಣ್ಮುಚ್ಚಿದ. ಚಿತ್ತಭಿತ್ತಿಯ ಮೇಲೆ ಕಳೆದಳಿದ ಜೀವನ ಚಿತ್ರ ಚಲನಚಿತ್ರದಂತೆ ಸುಳಿದಳಿಯ ಹತ್ತಿತು...ಎದೆಯಾಳದಿಂದ ನಿಟ್ಟುಸಿರೊಂದು ಹೊರಹೊಮ್ಮಿತೇನೋ...ಅನಂತರ

''ತಪ್ಪು, ತಪ್ಪು. ಏನಾದರೂ ತಪ್ಪು ನಮಗೆ ತಿಳಿಯದಂತೆಯೇ ನಡೆದು ಹೋಗುತ್ತೆ. ಅದಕ್ಕೆ ನಾನೇ ಹೊಣೆ ಎಂದಾಗಲೀ, ನಾನು ಪಾಪಿ ಎಂದಾಗಲೀ ಭಾವಿಸಲಾರೆ. ಎಂದೋ ನಡೆದ ತಪ್ಪಿಗೆ-ಎಂದೋ ಕಳೆದು ಹೋದ ಕಾಲಕ್ಕೆ ಇಂದು ಪರಿತಪಿಸಿ ಮಾಡುವುದೇನು? ಹೀಗೆ ನಡೆಯುವಷ್ಟು ಕಾಲ ನಡೆಯಲಿ. ಸಧ್ಯ, ಹೆಚ್ಚಿನ ಆಸೆ-ಆಕಾಂಕ್ಷೆಗಳನ್ನು ಇಟ್ಟುಕೊಂಡವನಲ್ಲ. ದಿನಗಳು ಹೇಗಾದರೂ ಕಳೆಯಲಿ. ನಾನು ಆಗಲೇ ಹುಟ್ಟು ಹಾಕಿರುವ ಉದ್ಯೋಗ ನನ್ನ ಜೀವನಕ್ಕೆ ಪೂರೈಕೆಯಾಗುತ್ತದೆ. ಇನ್ನು ಯೋಚಿಸಬೇಕಾದುದೇನೂ ಇಲ್ಲ. ಬದುಕಿರುವ ತನಕ ಐಹಿಕ ಸುಖಭೋಗ ಮಾತ್ರ. ಲೋಕದಲ್ಲಿ ಎಲ್ಲರೂ ಬಯಸುವುದು ಇದನ್ನೇ. ಆ ಎಲ್ಲರಲ್ಲಿ ನಾನೂ ಒಬ್ಬ. ಜಗತ್ತು ನಾಗಾಲೋಟದಿಂದ ಮುನ್ನುಗ್ಗುವಾಗ ನಾವೇಕೆ ಹಿಂದುಳಿಯಬೇಕು?''

ಮಾನಸಪಕ್ಷಿ ವಿಚಾರ ವಿಹಾರ ನಡೆಸುತ್ತಲೇ ಇತ್ತು. ಅವನು ಅವಲೋಕಿಸುತ್ತಲೇ ಇದ್ದ.

## ೬

ಶಾಂತಲಾ ತಯಾರಿಸಿಕೊಟ್ಟ ಕರವಸ್ತ್ರ-ದಿಂಬಿನ ಚೀಲಗಳಿಗೆ ಬಂದ ಒಳ್ಳೆಯ ಬೆಲೆಯಿಂದ ಅಂದಿಂದಿಗೂ ಐವತ್ತು-ಅರವತ್ತು ರೂಪಾಯಿಗಳ ಸಂಗ್ರಹವಾಯಿತು. ಆ ಹಣವನ್ನು ತೆಗೆದು ಅವಳ ಕೈಗಿಟ್ಟು ಕೇಳಿದಳು ಶ್ಯಾಮಲಾ ''ಈಗ ಹೇಳು, ಇದರಿಂದ ನಿನಗೆ ಏನೇನು ಬೇಕೋ ಅದನ್ನು ತಂದುಕೊಡುವೆ, ನಿನ್ನ ಹಣ, ನಿನಗಾಗಿಯೇ ಇರಲಿ ಸ್ವೀಟೀ!''

''ನನಗೇನು ಬೇಕು? ನೀನೇ ಎಲ್ಲಾ ತಂದು ಕೊಡುತ್ತಿದ್ದೀಯೇ, ಇನ್ನೇನು ಕೇಳಲಿ ನಾನು?''

ಅದೇ ವೇಳೆಗೆ ಪಾಂಚಾಲಿ ಒಳ ಬಂದಳು. ಕೈಯಲ್ಲೊಂದು ಮುದ್ದಾದ ಬೊಂಬೆ.

''ಹಾ! ಎಷ್ಟು ಚೆನ್ನ ಆ ಬೊಂಬೆ!'' ಎರಡೂ ಕೈಗಳನ್ನು ನೀಡಿದಳು ಅವಳ ಕಡೆಗೆ ಶಾಂತಲಾ.

''ಚೆನ್ನಾಗಿದೆ ಅಲ್ಲವೇ? ನಿನ್ನೆ ಕೊಂಡುಕೊಂಡೆ.''

"ಎಷ್ಟುಕೊಟ್ಟೆ?"

"ಮೂವತ್ತು ರೂಪಾಯಿ."

ಅದರ ಅಂದ-ಚೆಂದವನ್ನು ನೋಡುತ್ತ ಕೇಳಿದಳು ಶ್ಯಾಮಲಾ "ನಿನಗೊಂದು ಬೊಂಬೆ ಬೇಕೆ?"

"ಬೇಕು...ತಂದು ಕೊಡು ಅಕ್ಕಾ!"

"ಎಲ್ಲಿ ತೆಗೆದುಕೊಂಡೆ ಪಾಂಚಾಲೀ?"

"ವಿಶ್ರಿಮಲ್ ಅಂಗಡಿಯಲ್ಲಿ...ಅಲ್ಲಿ ಇನ್ನೂ ಬೇಕಾದಷ್ಟಿವೆ!" ಕಣ್ಣರಳಿಸಿದಳು ಪಾಂಚಾಲಿ.

"ಆಗಲಿ, ಕರವಸ್ತ್ರ ಮತ್ತು ದಿಂಬಿನ ಚೀಲಗಳಿಗೆ ಬಟ್ಟೆ ಮತ್ತು ಒಂದು ಒಳ್ಳೆಯ ಬೊಂಬೆ ಈವೊತ್ತು ತರುವೆ, ಆಯಿತೇ?" ನುಡಿದಳು ಶ್ಯಾಮಲಾ.

"ಶ್ಯಾಂ! ನೀನು ಬರುವುದನ್ನೇ ಕಾಯುತ್ತಿರುವೆ!"

"ನೀನೇಕೆ ಶಾಲೆಗೆ ಹೋಗಲಿಲ್ಲ ಪಾಂಚಾಲೀ?"

"ಇಂದು ರಜೆ ಇತ್ತು. ನಿನ್ನೆ ನಡೆದ ಸ್ಪೋರ್ಟ್ಸ್‌ಗಾಗಿ."

"ನೀವಿಬ್ಬರೂ ಆಟ ಆಡಿ. ನಾನು ಆಫೀಸಿಗೆ ಹೊರಡುವೆ." ಎಂದ ಶ್ಯಾಮಲಾ ಪಾಂಚಾಲಿಗೆಂದಳು "ಈಗ ನಿನ್ನ ಗೆಳತಿ ಷೂ ಹಾಕಿಕೊಂಡು ನಡೆಯಬಲ್ಲಳು."

"ಹಾಗೇನು? ಎಲ್ಲಿ, ಷೂ ಹಾಕಿಕೊ ನೋಡೋಣ? "

ಶಾಂತಲಾ ಷೂ ಹಾಕಿಕೊಳ್ಳಲು ತಾನೇ ಕೈ ನೀಡಿ ಸಹಾಯ ಮಾಡಿದಳು ಪಾಂಚಾಲಿ. ನಾಲ್ಕು ಸ್ಟೀಲಿನ ರಾಡುಗಳ ಮಧ್ಯೆ ಸೀರಿ ಸೀಕಲಾದ ಕಾಲು. ಗೆಳತಿಗೆ ತಾನು ನಡೆಯುವ ವಿಧಾನವನ್ನು ತೋರಿದಳು ಅತ್ತಿತ್ತ ಮೆಲ್ಲಗೆ ಅಡ್ಡಾಡಿ. ಸ್ವಲ್ಪ ದಿನ ಚೆನ್ನಾಗಿ ಅಭ್ಯಾಸ ಮಾಡಿಕೊಂಡರೆ ನಾನು ಶಾಲೆಗೆ ಬರಬಲ್ಲೆ!" ಆಗ ಪುಟ್ಟ ಕಣ್ಣುಗಳಲ್ಲಿ ಮಿನುಗಿದ ಆಸೆಯ ಬೆಳಕು ದರ್ಶನೀಯವಾಗಿತ್ತು.

ಪಾಂಚಾಲಿ ಸಂತಸದಿಂದ ನುಡಿದಳು "ಪರವಾಯಿಲ್ಲ. ಸ್ವಲ್ಪ ದಿನ ಹೋದರೆ ಪೂರ್ತಿ ಸರಿಹೋಗಬಹುದು. ನೋಡೋಣ. ಪ್ರಯತ್ನ ಮುಖ್ಯ."

ಶ್ಯಾಮಲಾ ಹೊರಡುತ್ತ ಹೇಳಿದಳು "ನೀವಿಬ್ಬರೂ ಇದ್ದೀರಿ. ಚೆನ್ನಾಗಿ ಆಟ ಆಡಿ. ಇಂದು ಕರವಸ್ತ್ರ ಹೊಲಿಯದಿದ್ದರೂ ಪರವಾಯಿಲ್ಲ."

"ಈವೊತ್ತು ಬೊಂಬೆ ತರುತ್ತಿ ತಾನೇ?"

"ಆಗಲಿ, ಮರೆಯದೆ ತರುವೆ."

* * *

ಈ ದಿನ ಪಂಡರೀ ರಜೆ ಹಾಕಿದ್ದಾಳೆ.

ಅವಳ ಕೆಲಸವೂ ಶಾರದೆಯ ಪಾಲಿಗೆ ಬಂದಿತ್ತು. ಟೈಪ್‌ರೈಟರಿಗೆ ನಿಮಿಷವೂ ಬಿಡುವಿಲ್ಲದಷ್ಟು ಕೆಲಸ. ಅವಸರದಲ್ಲಿ ಟೈಪ್ ಮಾಡುವಾಗ ಅನೇಕ ತಪ್ಪುಗಳು ಸಂಭವಿಸಿದುವು. ಅವುಗಳನ್ನು ಓದಿ ತಪ್ಪುಗಳನ್ನು ತಿದ್ದಿದಳು ಶ್ಯಾಮಲಾ. ಅನಂತರ ಬಾಸ್ ಬಳಿಗೆ ತೆಗೆದುಕೊಂಡು ಹೋದಳು ಸಹಿ ಹಾಕಿಸುವ ಸಲುವಾಗಿ.

''ಏನಮ್ಮಾ ಕಾಗದಗಳು ಸಿದ್ಧವಾದುವೇ?''

''ಹೌದು.''

''ಒಮ್ಮೆ ಓದಿಬಿಡು.''

ಶ್ಯಾಮಲಾ ಪತ್ರಗಳನ್ನು ಓದಿ ಹೇಳಿದಳು. ಅನಂತರ ಅವನು ಎಲ್ಲಕ್ಕೂ ಸಹಿ ಹಾಕಿ ಹೇಳಿದ,

''ಬೀರುವಿನಿಂದ ಒಂದು ಮಾತ್ರೆ ತೆಗೆದುಕೊಡು. ತಲೆನೋವು ಇನ್ನೂ ಪೂರ್ತಿ ಗುಣವಾಗಲಿಲ್ಲ. ಯಾವಾಗಲಾದರೂ ಬಂದಿತೆಂದರೆ ಹೀಗೆಯೇ ನನ್ನನ್ನು ಸತಾಯಿಸಿಯೇ ಹೋಗಬೇಕಾದರೆ. ನನ್ನ ಜುಟ್ಟು ಹಿಡಿಯುವವರು ಯಾರೂ ಹುಟ್ಟಲಿಲ್ಲ. ಅದಕ್ಕೆ ಇದು ಜುಟ್ಟು ಹಿಡಿಯುತ್ತೆ.''

''ಶ್ಯಾಮಲಾ ಸಣ್ಣಗೆ ಕಂಡೂ ಕಾಣದಂತಹ ಮುಗುಳು ನಗೆ ನಕ್ಕು ಮಾತ್ರೆಯನ್ನು ಕೊಟ್ಟು ಹೊರಬಂದಳು. ಕಾಗದಗಳನ್ನು ಕವರಿನಲ್ಲಿಟ್ಟು ಅಂಟಿಸಿ ಅಂಚೆಗೆ ಕಳುಹಿಸುವ ಕಾಯಕ ಆರಂಭ.

ಗಿರಾಕಿಗಳು ಬರುತ್ತಲೇ ಇರುತ್ತಾರೆ. ಅವರನ್ನು ಸಂಧಿಸಿ ಅವರವರಿಗೆ ಅನುಗುಣವಾದ ಭಾಗವಿಭಾಗಕ್ಕೆ ಕರೆದೊಯ್ದು ಅಲ್ಲಿಯ ಮ್ಯಾನೇಜರುಗಳನ್ನು ಪರಿಚಯಿಸುವುದು. ನಂತರ ಬಾಸ್‌ನೆಡೆಗೆ ಕರೆದೊಯ್ಯುವುದು. ಅವನು ಹೇಳಿದ ಆರ್ಡರ್ ಅನ್ನು ಆರ್ಡರ್ ಫಾರಂ-ಗೆ ಭರ್ತಿ ಮಾಡುವುದು ಹೀಗೆ ಮಾಡಬೇಕಾದ ಕೆಲಸಕ್ಕೆ ಕೊನೆಯೇ ಇಲ್ಲವೇನೋ...

ಬಾಸ್ ಬಂದವರೊಡನೆ ಮಾತಾಡುತ್ತ ಕೂಡುವ. ಮಾತುಕತೆ ಎಷ್ಟೋ ಹೊತ್ತು ಸಾಗುವುದು. ಶ್ಯಾಮಲಾ ಕಾದು ಕಾದು ಹೊರಬೀಳುವಳು.

* * *

''ಪಂಡರೀ ಏಕೆ ರಜೆ ಹಾಕಿದ್ದಾಳೆ?''

''ಅವಳು ಫಿಲಂ ಡೈರೆಕ್ಟರನ್ನು ಭೇಟಿಯಾಗಬೇಕಂತೆ ಶ್ಯಾಂ''

''ಏತಕ್ಕಾಗಿ?''

"ಫೋಟೋಜನಿಕ್‌ಫೇಸ್ ಇದ್ದರೆ ಅವಳು ನಟಿ ಆಗಬಹುದು!"

"ನಟನಾ ಕೌಶಲ್ಯವಿರಬೇಕಲ್ಲ?"

"ಅದು ಇದೆಯೋ ಇಲ್ಲವೋ, ಆ ಧೈರ್ಯವಂತೂ ಅವಳಿಗಿದೆ."

"ಹೋಗಲಿ ಬಿಡು. ಎಲ್ಲಾದರೂ ಸರಿಯಾಗಿರಲಿ!"

"ಸರಿಯಾಗಿಯೋ, ಸುಖವಾಗಿಯೋ...?"

"ಎರಡೂ ಒಂದೇ! ಎಂದರೂ 'ಸರಿಯಾಗಿ ಎನ್ನುವುದಕ್ಕೆ' ವಿಶೇಷಾರ್ಥ ವಿದೆ."

"ನಿಜ...ನಿಜ" ಮುಗುಳು ನಕ್ಕಳು ಶಾರದಾ ಕರ್ವೆ.

"ಅವಳಿಗೆ ಮೊದಲಿನಿಂದಲೂ ಅದೇ ಹುಚ್ಚು. ಅವಳಿಲ್ಲಿ ಕೆಲಸಮಾಡುತ್ತಿದ್ದರೂ ಮನಸ್ಸೆಲ್ಲಾ ಅಲ್ಲೇ. ಅಷ್ಟೊಂದು ಆಸೆ ಇರುವಾಗ ಒಮ್ಮೆ ಪ್ರಯತ್ನಿಸಿ ನೋಡಿದರೆ ಗೀಳು ಹರಿಯುತ್ತದೆ, ಫಲಿತಾಂಶ ಏನಿದ್ದರೂ ಅನಂತರ."

"ಫಲಿತಾಂಶ ರಿವರ್ಸ್ ಆದರೆ....?"

"ಓ! ಅತ್ತು ಬಿಡುತ್ತಾಳೆ. ಅಷ್ಟೊಂದು ಆಸೆಯಿದೆ ಅವಳಿಗೆ"

"ಹಾಗಾದರೆ, ಒಳ್ಳಿತಾಗಲಿ ಎಂದು ಹಾರೈಸೋಣ."

Life is mostly froth and bubble ಎಂದಿದ್ದಾರೆ ಹಿರಿಯರು. ಆದರೂ, ನಮಗೆ ಆಸೆ-ಆಕಾಂಕ್ಷೆಗಳೆಷ್ಟು? ಇನ್ನೂ ಗಳಿಸುವ-ಎಷ್ಟು ಗಳಿಸಿದರೂ ಸಾಲದ ಆಸೆ ಕುದುರುತ್ತಲೇ ಇರುತ್ತೆ. ನಮ್ಮ ಆಸೆಗೆ ಕೊನೆಯೇ ಇಲ್ಲ. ಅದೂ ಅಲ್ಲದೆ, ಸಲ್ಲದ ಬದುಕು; ಸಲ್ಲದ ವ್ಯವಹಾರ. ಸ್ವಾರ್ಥ-ಸ್ವಾಹಗಳ ಹಾವಳಿ...."

"ನಿಜ. ಶಾರದಾ! ಎಷ್ಟೋ ಸಂಸಾರಗಳಲ್ಲಿ ರಕ್ಷಕರೇ ಭಕ್ಷಕರಾಗಿರುತ್ತಾರೆ. ಸ್ವಾರ್ಥ-ಸ್ವಾಹ ಎರಡರ ಹೊರತು ಮತ್ತೊಂದಿಲ್ಲ. ಸತಿಯ ಮೇಲಂತೂ ಎಲ್ಲಿಲ್ಲದ ದಬ್ಬಾಳಿಕೆ. ಅವಳು ಕಾಸು ಕೇಳದೆ ಹೊಟ್ಟೆ ತುಂಬಾ ಉಣಿಸಬೇಕು...ನಾಲ್ಕು ಗೋಡೆಯ ಮಧ್ಯೆ ಸೊತ್ತಾಗಿ-ತೊತ್ತಾಗಿ ಉಳಿಯಬೇಕು. ಇಂಥಿಂಥ ವ್ಯವಹಾರಗಳು ಮನೆಮನೆಯಲ್ಲೂ ನಡೆಯುತ್ತವೆ. ಕೆಲವರದು ಗೋಪ್ಯ. ಇನ್ನು ಕೆಲವರದು ಬಹಿರಂಗ ಅಷ್ಟೇ ವ್ಯತ್ಯಾಸ."

"ಹಿಂದೂಸ್ಥಾನದಲ್ಲಿ ಶೇಕಡಾ ಎಪ್ಪತ್ತೈದು ಮಂದಿ ಮಹಿಳೆಯರ ಪಾಡು ನರಕ ಸದೃಶ. ಅಂದಮೇಲೆ ಹೇಳಿಕೊಳ್ಳುವುದಕ್ಕಿಂತ ಹೇಳಿಕೊಳ್ಳದಿರುವುದು ಲೇಸು. ಅಂಗೈ ತೋರಿಸಿ ಅವಲಕ್ಷಣ ಎನಿಸಿಕೊಳ್ಳುವುದೇಕೆ?"

"ನಮ್ಮಲ್ಲಿ ಸಮತಾವಾದ ಬರುವುದು ಒಳ್ಳೆಯದು. ಕೇಳು, ನಾವು ಮಾನವ

ಕುಲವನ್ನು ಅಳೆಯಬೇಕಾದರೆ ವ್ಯಕ್ತಿಯನ್ನು ಮಾಪಕವಾಗಿಟ್ಟುಕೊಳ್ಳಬೇಕು. ವ್ಯಕ್ತಿಯ ಮಟ್ಟ ಸಮಾಜದ ಕೈಗನ್ನಡಿ.''

''ಮಾರ್ಕ್ಸ್ ವಾದದಲ್ಲಿ ಸಮಾನತೆ ಎಂಬುದು ವರ್ಗ ಭೇದವಿಲ್ಲದ್ದು. ಮಾನವ ಕುಲದಲ್ಲಿ ವ್ಯಕ್ತಿತ್ವ ಮುಖ್ಯವಲ್ಲ. ವ್ಯಕ್ತಿಮಾಪನ ಎಂದರೆ ಖಂಡತೆ. ಇಡೀ ಸಮಾಜ ಅಥವಾ ಸಾಮೂಹಿಕ ಎನ್ನುವುದು ವಿಶೇಷ. ಅಖಂಡತೆ ಎನ್ನುವುದೇ ವ್ಯಕ್ತಿತ್ವ. ಅಖಂಡತೆಯಲ್ಲಿ ಕಾಣುವ ವಿಶೇಷವೇ ನಾವು ಅವಧರಿಸಬೇಕಾದ ಸತ್ಯ. 'ವ್ಯಕ್ತಿ' ಎಂಬ ಕೇಂದ್ರ ಬಿಂದುವಿಗೆ ಅವಕಾಶವಿಲ್ಲ. ಆದ್ದರಿಂದ ಪುರುಷ ಪ್ರಧಾನವಾದ ಈ ರಾಷ್ಟ್ರದಲ್ಲಿ ಸ್ತ್ರೀ ಕುಲವನ್ನೇ ಮಾಪಕವಾಗಿಟ್ಟುಕೊಳ್ಳುವುದು ಸೂಕ್ತ. ವಿದೇಶಗಳಲ್ಲಿ ಸ್ತ್ರೀ-ಪುರುಷ ವರ್ಗ ಭೇದವಿಲ್ಲ. ಆದ್ದರಿಂದ ವ್ಯಕ್ತಿಯನ್ನು ಕುರಿತು ಪ್ರತಿವಾದಿಸುತ್ತಾರೆ. ನೀನು ಯೋಚಿಸಿ ನೋಡು, ಮಾರ್ಕ್ಸ್ ವಾದ ಇಡೀ ಸಮಾಜ ವ್ಯವಸ್ಥೆಯನ್ನೇ ಅಥವಾ ಸಾಮೂಹಿಕ ಐಕ್ಯತೆಯೇ ಒಂದು ವ್ಯಕ್ತಿ; ಸಮಾಜ-ವ್ಯಕ್ತಿ ಎರಡೂ ಬೇರೆ ಬೇರೆ ಅಲ್ಲ; ಎನ್ನುತ್ತದೆ. ಅವರು ಮಹಿಳೆಯರಿಗಾಗಿ ಪ್ರತ್ಯೇಕವಾಗಿ ವಾದಿಸಿಲ್ಲ ಎಂಬುದು ಸುವ್ಯಕ್ತ. ಅಲ್ಲಿ ಸ್ತ್ರೀ ಪುರುಷ ಸಮಾನತೆ ಹೊಂದಿರುವುದರಿಂದ ಪ್ರತ್ಯೇಕತೆಯ ಪ್ರಶ್ನೆ ಏಳುವುದಿಲ್ಲ.''

''ಅದು ನಿಜವೇ''

''ಇನ್ನೊಂದು ವಿಚಾರ. ನೋಡು, ಸ್ವಾತಂತ್ರ್ಯ-ವೈಯಕ್ತಿಕ ಸ್ವಾತಂತ್ರ್ಯದಿಂದಲೇ ಇನ್ನೊಂದು ವ್ಯಕ್ತಿಯ ಶೋಷಣೆ. ಪುರುಷರಿಂದ ಸ್ತ್ರೀಯರ ಶೋಷಣೆ, ಮೇಲಿನ ವರ್ಗದವರಿಂದ ಕೆಳಗಿನ ವರ್ಗದವರ ಶೋಷಣೆ ನಡೆಯುವುದು ಸತ್ಯ. ಮಾರ್ಕ್ಸ್‌ನ ತತ್ವ ಹಾಗಲ್ಲ. ಸಮಾಜ ಎನ್ನುವುದು ಒಂದೇ ವ್ಯಕ್ತಿ. ಇಲ್ಲಿ ವರ್ಗಭೇದಕ್ಕೆ-ಶೋಷಣೆಗೆ ಅವಕಾಶವಿಲ್ಲ. ನಮ್ಮಲ್ಲಿ ಏನೇ ಹೇಳಿದರೂ ತತ್ವ ತತ್ವವೇ ಜೀವನ ಸ್ಥಿತಿ-ಜೀವನ ಸ್ಥಿತಿಯೇ.''

''ಅದು ನಿಜ.'' ತಲೆದೂಗಿದಳು ಶಾರದಾ ಕರ್ವೆ.

## ೧೦

ಗಂಗಾರಾಂ ಒಳಬಂದವನೇ ಕರೆದ ''ಶ್ಯಾಂ! ಶ್ಯಾಮಲಾ!''

''ಅವಳಿಲ್ಲಪ್ಪಾ....''

"ಎಲ್ಲಿಗೆ ಹೋಗಿದ್ದಾಳೆ ?"

"ಆಫೀಸಿಗೆ ಹೋಗಿದ್ದಾಳೆ ?"

"ಆಫೀಸಿಗೆ...?"

"ಯಾವ ಆಫೀಸಿಗೆ....? ಅಲ್ಲೇನು ಕೆಲಸ."

"ಡಾ॥ ಫರೀದ್ ಆಫೀಸಿನಲ್ಲಿ ಕೆಲಸ."

"ಗೌರೀ...."

ಗೌರೀಮಾ ಹೊರ ಬಂದಳು.

"ಶ್ಯಾಮಲಾ ಎಲ್ಲಿಗೆ ಹೋಗಿದ್ದಾಳೆ ?"

ಶಾಂತಲಾ ಹೇಳಿದ್ದನ್ನು ಕೇಳಿಸಿಕೊಂಡಿದ್ದ ಗೌರಿಗೆ ಇನ್ನು ಮುಚ್ಚಿಡಲಾಗಲಿಲ್ಲ. ಅಂತರ್ಯದಲ್ಲಿ ಸಣ್ಣ ನಡುಕ. ಹೇಳಲೋ ಬಿಡಲೋ ಎಂಬ ಸಮಸ್ಯೆ. ಕಾಣದ ಕೈಗಳು ಹೃದಯವನ್ನು ಹಿಂಡುತ್ತಿವೆ. ಯಾವುದೋ ಅಪಶಕ್ತಿ ಕೊರಳನ್ನು ಒತ್ತಿ ಹಿಡಿದಿದೆ. ಪ್ರಯತ್ನಿಸಿದರೂ ತುಟಿಗಳು ಬಿರಿಯವು.

"ಬೊಗಳು! ಎಲ್ಲಿಗೆ ಹೋಗಿದ್ದಾಳೆ ?"

"ಕೆಲಸಕ್ಕೆ...."

"ಎಂಥ ಕೆಲಸ ?"

"ಗೊತ್ತಿಲ್ಲ ?"

"ಯಾರ ಬಳಿಯಲ್ಲಿ ? "

"ಡಾ॥ ಫರೀದ್ ಆಫೀಸಿನಲ್ಲಿ"

"ನನಗೆ ಹೇಳದೆ-ಕೇಳದೆ ಹೇಗೆ ಸೇರಿದ್ದಾಳೆ ?"

"......."

"ಹೇಳು! ನೀನೇಕೆ ಹೇಳಲಿಲ್ಲ ?"

ಅದೇ ವೇಳೆಗೆ ಶರತ್ ಧುತ್ತೆಂದು ಎದುರಾದ. "ಅಪ್ಪಾ! ವೃಥಾ ಗಲಾಟೆ. ಎಲ್ಲರಿಗೂ ಅವರವರ ಅಗತ್ಯಗಳು ಇರುತ್ತವೆ. ನೀವು ದುಡ್ಡು ಕೊಡೋಲ್ಲ. ಕೆಲಸವನ್ನೂ ಮಾಡಬೇಡ ಎಂದರೆ ಹೇಗೆ? ಅವಳು ಮಾಡುತ್ತಿದ್ದಾಳೆ ಮಾಡಲಿ. ನೀವೇಕೆ ಅದಕ್ಕೆ ಅಡ್ಡಿ ಬರಬೇಕು? ಅವಳು ಮಾಡಿದರೆ ನಿಮಗಾಗುವ ತೊಂದರೆಯೇನು?"

"ನನ್ನ ಮುಂದೆ ಮಾತಾಡಲು ನಿನಗೆಷ್ಟರ ಧೈರ್ಯ ? ನೀನು ದಿನೇ ದಿನೇ ಮಿತಿಮೀರುತ್ತಿದ್ದೀ! ನಿನ್ನ ಚರ್ಮ ಸುಲಿದು ಬಿಟ್ಟೇನು!"

ಆ ತಕ್ಷಣ ಅವನನ್ನು ಹೊಡೆಯಲು ಕೈಯೆತ್ತುತ್ತಲೂ ಹುಡುಗ ಎರಡೂ

ಕೈಗಳನ್ನು ಗಟ್ಟಿಯಾಗಿ ಹಿಡಿದ! ಕೈ ಅಲುಗಿಸಲಾಗದಂತಹ ವಜ್ರ ಮುಷ್ಟಿ! ಗಂಗಾರಾಂ ಕೈಬಿಡಿಸಿಕೊಳ್ಳಲು ಹೆಣಗಾಡಿದ. ಬಿಡಿಸಿಕೊಳ್ಳುವುದಿರಲಿ, ಅಲುಗಿಸಲೂ ಸಾಧ್ಯವಾಗಲಿಲ್ಲ!

ಶಾಂತಲಾ ಬೆರಗಣ್ಣು ಬಿಟ್ಟು ನೋಡುತ್ತಿದ್ದಾಳೆ! ಗೌರೀಮಾ ಮುಂದಿನ ಅವಗಡವನ್ನು ತಪ್ಪಿಸುವ ಸಲುವಾಗಿ ನಡುವೆ ನುಗ್ಗಿ ''ದಮ್ಮಯ್ಯ ಮಗನೇ! ಬಿಟ್ಟು ಬಿಡಪ್ಪಾ''ಎನ್ನುತ್ತ ಅಂಗಲಾಚಿ ಎರಡೂ ಕೈಗಳನ್ನು ಹಿಡಿದುಕೊಂಡಳು. ಆದರೆ, ಆ ಮಗ ಬಿಟ್ಟಾನೆಯೇ ? ವಜ್ರ ಮುಷ್ಟಿಯ ಬಿಗಿತ ಹೆಚ್ಚುತ್ತಿದ್ದಂತೆ ನೋವು ತಾಳಲಾರದೆ ''ಅಯ್ಯೋ!''ಎಂದು ಚೀರಿಕೊಂಡ ಗಂಗಾರಾಂ ಪ್ರಾಣಾಂತಕ ನೋವಿನಿಂದ.

''ಇದೇ ಕೊನೆ! ಈ ಧೂರ್ತತನ ಬಿಟ್ಟುಬಿಡಿ!''ಹಿಡಿದ ಬಿಗಿತ ಇನ್ನಷ್ಟು ಬಿಗಿಯಿತು.

''ಅಯ್ಯಯ್ಯೋ! ನನ್ನ ಕೊಲ್ಲುತ್ತೀಯೇನೋ ? ಅಯ್ಯಯ್ಯೋ! ಅಯ್ಯಯ್ಯೋ!''

''ಬಿಡು ಶರತ್! ಚೀರಿದಳು ಶಾಂತಲಾ.

''ಬಿಡು....ಬಿಡು! ಶರತ್!'' ತಾಯಿಯ ಬೇಡಿಕೆ-ಆತಂಕಪೂರ್ಣ ಬೇಡಿಕೆ.

ಶರತ್ ಅಪ್ಪನ ಕೈಗಳನ್ನು ಬಿಟ್ಟ. ಅಷ್ಟರಲ್ಲೇ ಕಣ್ಣಿಗೆ ಕತ್ತಲು ಕವಿಯುವಷ್ಟು ನೋವು ಅನುಭವಿಸಿದ ಗಂಗಾರಾಂ. ಸೀದಾ ಒಳಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡ. ಎರಡೂ ಕೈಗಳು ಇಕ್ಕಳಕ್ಕೆ ಸಿಕ್ಕಿದಷ್ಟು ಕೆಂಪು ತಳೆದಿವೆ.

ಶರತ್ ಚಪ್ಪಾಳೆ ತಟ್ಟಿ ನಗುತ್ತಿದ್ದಾನೆ! ಹಹ್ಹಹ್ಹ! ಹಿಹೀಹ್ಹೀ!

ಗೌರೀಮಾ ನೊಂದ ದನಿಯಲ್ಲಿ ನುಡಿದಳು ''ದೊಡ್ಡವರೊಂದಿಗೆ ಹೀಗೆಲ್ಲಾ ಆಡಬಾರದು ಮಗೂ!''

''ದೊಡ್ಡವರು ಸರಿಯಾಗಿರಬೇಕು ತಾನೆ ?''

''ಶರತ್! ನಿನ್ನ ತಪ್ಪನ್ನು ಅರಿತುಕೊ. ಹೀಗೆ ದೊಡ್ಡವರೊಂದಿಗೆ ಕುಸ್ತಿಗೆ ನಿಲ್ಲಬಾರದು ಕಂಡೆಯಾ ?''

''ಕುಸ್ತಿ ಮಾಡಲಿಲ್ಲಮ್ಮಾ. ಕೈಗಳನ್ನು ಬಿಗಿ ಹಿಡಿದು ನನ್ನ ಶಕ್ತಿ ತೋರಿಕೊಟ್ಟೆ ಅಷ್ಟೆ!''

ಅವನಿಗೆ ನಗುವೋ ನಗು. ಶಾಂತಲಾಗೆ ಭಯಾಶ್ಚರ್ಯಗಳ ಆವೇಗ ಮನದಲ್ಲಿ. ಸ್ವಾಮಿನಿ ಸಣ್ಣಗೆ ನಡುಗುತ್ತಲೇ ಇದ್ದಾಳೆ! ಮಗನಿಗೆ ತಂದೆಯನ್ನು ಹೊಡೆಯುವ

ಕೊಲ್ಲುವ ಯೋಚನೆಯಿರಲಿಲ್ಲ. ಅವನು ತಮಾಷೆಗಾಗಿಯೇ ಬಿಗಿ ಹಿಡಿದಿದ್ದಾನೆ ಎಂಬುದರ ಅರಿವಾದರೂ ಗಡಗಡ ನಡುಗುತ್ತಲೇ ಇದೆ ಮೈ. ಶಾಂತಲೆಯ ಶಯ್ಯಾಪ್ರಾಂತದಲ್ಲಿ ಮಗಳನ್ನು ತಬ್ಬಿ ಮಲಗಿಬಿಟ್ಟಳು.

* * *

ಸ್ವಲ್ಪೇ ಹೊತ್ತಿನೊಳಗಾಗಿ ಆಗಮಿಸಿದ ಶ್ಯಾಮಲಾ ಮನೆಯ ಪರಿಸ್ಥಿತಿಯನ್ನು ಮನದಲ್ಲೇ ಅಳೆದು ಸುತ್ತಮುತ್ತ ನೋಡುತ್ತಿದ್ದಂತೆಯೇ ಶರತ್ ಎದುರಾದ. ಅವನ ಮುಖದಲ್ಲಿ ತುಂಟನಗೆ ತಾಂಡವವಾಡುತ್ತಿದೆ. ಕಣ್ಣುಗಳಲ್ಲಿ, ಮುಖಭಾವದಲ್ಲಿ, ಮೈಯಲ್ಲಿ ಎಲ್ಲೆಲ್ಲಿಯೂ ತುಂಟತನವೇ....

''ಏನೋ ಶರತ್ ?''

''ನೀನೇ ಊಹಿಸಿಕೋ....!''ನಗು. ನಗು. ಒಂದೇ ಸಮನೆ ಕಿಲಕಿಲ ನಗು. ಮಾಡುಮುಟ್ಟುವಷ್ಟು ನಗು.

''ಅಕ್ಕಾ! ಅವನು ಅಪ್ಪನ ಎರಡೂ ಕೈಗಳನ್ನು ಬಿಗಿಹಿಡಿದು ಕೂಗಿಸಿ ಬಿಟ್ಟ. ಅಪ್ಪನಿಗೆ ಕೈ ಮುರಿಯುವಷ್ಟು ನೋವು ಮಾಡಿದ್ದಾನೆ.''

''ಏಕೆ ?....ಏಕೆ ?''

''ಅವನನ್ನೇ ಕೇಳು!''

ಅದೇ ವೇಳೆಗೆ ಗೌರೀಮಾ ಹೊರ ಬಂದಳು. ಅವಳ ಮುಖದಲ್ಲಿ ತುಂಟನಗೆ ಇಲ್ಲವಾದರೂ ಏನೋ ಒಂದು ಬಗೆಯ ಅರ್ಥೈಸಲಾಗದ ಒಗಟಿಂದ ಕೂಡಿದ ಮುಖಭಾವ. ಅದರಲ್ಲಿ ಕೋಪದ ಬಿಗಿತವೂ ಇಲ್ಲ;ತಮಾಷೆಯ ಸಡಿಲವೂ ಇಲ್ಲ. ಗಾಂಭೀರ್ಯದ ಗೋಪ್ಯವೂ ಇಲ್ಲ.

''ಏನಮ್ಮಾ ? ಶರತ್ ಏಕೆ ಕೈ ಹಿಡಿದ ?''ಪ್ರಶ್ನೆ ಅಚ್ಚರಿಯಿಂದ ಕೂಡಿತ್ತು.

''ಸಧ್ಯ, ಅವನಿನ್ನೇನೂ ಮಾಡಲಿಲ್ಲವಲ್ಲಾ, ನನಗೆ ಅಷ್ಟೇ ಸಾಕು.''

ಅಷ್ಟು ಮಾತು ಮುಗಿಯುವುದರೊಳಗಾಗಿ ಗಂಗಾರಾಂ ದಡದಡನೆ ಹೊರಬಂದ. ಕಣ್ಣು-ಮುಖಗಳಲ್ಲಿ ಸಿಟ್ಟಿನ ಜಡಿ ಕಿಡಿಗಳು ಹೊಮ್ಮುತ್ತಿದ್ದುವು. ನಡುಮನೆಯ ಮಧ್ಯೆ ನಿಂತು ಮಾತನಾಡುತ್ತಿದ್ದ ಎಲ್ಲರೂ ಅತ್ತಿತ್ತ ಚದರಿದರು. ಅವನು ಪಚಪಚನೆ ಹತ್ತು ಮಾತಾಡಿ-ಕಿರಿಚಾಡಿ ಹೊರಬಿದ್ದ. ಬಿರುಗಾಳಿ ಜಾಡಿಸಿ ಹೋದಂತಾಯಿತು.

ಎಲ್ಲರೂ ಮುಖಮುಖ ನೋಡಿಕೊಂಡರು. ಒಂದು ಗಳಿಗೆ ಮನದಲೆಗಳು ಸ್ತಬ್ಧವಾದುವು. ಹೃದಯವ್ಯಾಪ್ತಿಗೆ ತುಸುಮೀರಿ ಮಿಡಿದ ಅನುಭವ....ಎಲ್ಲರಿಗೂ.

"ನೋಡು ಮಗೂ! ನೀನು ಹೀಗಾಡಿಬಿಟ್ಟೆ. ಅವರೆಲ್ಲಾದರೂ...."

ತುಟಿಕಚ್ಚಿದಳು ಗೌರೀಮಾ.

ಶಾಂತಲಾ ಅಲ್ಲಿಂದಲೇ ಅಂದಳು "ನಾನು ಅಂದೆ, ಬಿಡು. ಬಿಡು. ಅಂತ. ಆದರೂ ಕೈ ಬಿಡಲಿಲ್ಲ. ಅವರು ನೋವಾಗದೇ ಕಿರಿಚಿಕೊಳ್ಳಲಿಲ್ಲ!"

"ನೋವಿನ ಅರ್ಥ ಆಗದಿದ್ದುದರಿಂದಲೇ ನಮಗೆಲ್ಲಾ ಹಿಂಸೆ ಕೊಡುವುದು ? ಇನ್ನು ಮುಂದಾದರೂ ಸರಿಹೋಗಬಹುದು, ನೋಡೋಣ ಇದಕ್ಕಾಗಿ ಚಿಂತೆ ಏಕೆ?"

ಹುಡುಗ ಕ್ರಿಕೆಟ್ ಆಡುವ ಸಲುವಾಗಿ ಹೊರಟೇ ಬಿಟ್ಟ.

ಸ್ವಾಮಿನಿ ಮೂಕ ಮೌನಿಯಾದಳು. ಎದೆಯ ಹಕ್ಕಿ ಒಂದೇ ಸಮನೆ ಚೀರುತ್ತಿತ್ತು "ಮುಂದೆ ಏನು ಗತಿಯೋ ಶಿವನೇ!"

* * *

ಇಂದು ಶಕೀಲೆಯ ಹಸುರು ವರ್ಣರಂಜಿತ ಪತ್ರ.

....ನಿಮಗೆ ಪತ್ರ ಬರೆಯದೆ ತುಂಬ ದಿನಗಳೇ ಆದುವು. ಬರೆಯೋಣ ಎನ್ನುತ್ತಲೇ ದಿನಗಳು ಕಳೆದು ಹೋದುವು. ಹಗಲಿರುಳೂ ದುಡಿತ. ಒಂದಿನಿತು ಕೈ ಬಿಡುವಿಲ್ಲದ ಕೆಲಸ ಅಥವಾ ದುಡಿತ. ಹಗಲೆಲ್ಲಾ ಆಫೀಸು ಕೆಲಸವಾದರೆ ಬೆಳಗ್ಗೆ ಸಂಜೆ ಮನೆಗೆಲಸ. ಪತಿಮಹಾರಾಯನ ಮತ್ತು ಮಕ್ಕಳ ಸೇವೆ. ರಾತ್ರಿ ನೀರು ತುಂಬಿಕೊಳ್ಳುವ ಚಾಕರಿ. ರಾತ್ರಿ ಕೆಲಸ ಮುಗಿಸಿ ಹಾಸಿಗೆ ಸೇರುವಾಗ ಎಷ್ಟೋದಿನ ಗಂಟೆ ಹನ್ನೊಂದಾಗಿರುತ್ತೆ. ಒಂದು ಗಂಟೆಗೆ ನೀರು ಸಣ್ಣ ಎಳೆಯಾಗಿ ಬರಲು ಪ್ರಾರಂಭ. ಒಳಗಣ ಎಲ್ಲಾ ಚೊಂಬು ಪಾತ್ರೆಗಳಿಗೂ ತುಂಬಿದ ನಂತರ ತೊಟ್ಟಿಗೆ ನೀರು ತುಂಬುವ ಕಾಯಕ. ಬೆಳಗಿನ ಝಾವ ಐದು ಗಂಟೆಯವರೆಗೂ ನಡೆಯುತ್ತದೆ ಜಲದೇವಿಯ ಪೂಜೆ. ಅನಂತರ ದಿನಚರಿ ಆರಂಭ. ರಾತ್ರಿ ಹನ್ನೊಂದು ಗಂಟೆಗೆ ಹಾಸಿಗೆ ಸೇರಿದಾಗ, ಒಮ್ಮೊಮ್ಮೆ ನಿದ್ದೆ ಸರಿಯಾಗಿ ಬಂದು ಒಂದು ಗಂಟೆಗೆ ಎಚ್ಚರವಾಗುತ್ತೆ. ಕೆಲವೊಮ್ಮೆ ಒಂದು ಗಂಟೆಗೆ ಎಚ್ಚರವಾಗದೆ ಮರುದಿನಕ್ಕೆ ನೀರಿಲ್ಲದ ತೊಂದರೆಯ ಗೋಳು ಬರುತ್ತೆ. ಇಂಥ ಪ್ರಸಂಗಗಳಿಂದ-ಕಷ್ಟ ಸಂಕಟಗಳ ಪರಿಪಾಡಿನಿಂದ ನಿದ್ದೇ ಬರುವುದೇ ಇಲ್ಲ. ಹಾಸಿಗೆಯಲ್ಲಿ ಇರುವಷ್ಟು ಹೊತ್ತು ಅತ್ತಿತ್ತ ಹೊರಳಾಡುವುದೇ ಆಗುತ್ತೆ.

ಈ ಸಂಕಷ್ಟಗಳಿಂದ ಪಾರಾಗಲು ರಾತ್ರಿ ಒಂದು ಗಂಟೆಗೆ ಅಲಾರಾಂ ಇಟ್ಟುಕೊಂಡರೆ "ನಿದ್ದೆ ಕೆಡಿಸಿದೆ"ಎಂದು ಪತಿ ಮಹರಾಯನ ಆರ್ಭಟ. ಈ

ಘೋರಾತಿಘೋರ ಜೀವನ ಪ್ರಸಾದ ಎಲ್ಲರಿಗೂ ಇದೆ ಎಂದರೆ ನಂಬುವುದ್ದಕ್ಕೇ ಆಗುವುದಿಲ್ಲ. ಬಹುಶಃ ನಮ್ಮಂಥಹ ದೀನದರಿದ್ರರನ್ನು ಹುಡುಕಿಕೊಂಡು ವಿಧಿ ಬೆನ್ನು ಹತ್ತುತ್ತೋ ಏನೋ....

ಇರಲಿ, ಈಚೀಚೆಗೆ ನನ್ನ ದೇಹಸ್ಥಿತಿಯೇ ಸರಿಯಿಲ್ಲ. ದಿನಕ್ಕೆ ಹತ್ತು ಮಾತ್ರೆ ನುಂಗಿಯೇ ದಿನಚರಿಯ ಹಗರಣಕ್ಕೆ ಸಿದ್ಧತೆ. ಇಲ್ಲದಿದ್ದರೆ ಬಿದ್ದಲ್ಲೇ ಬಿದ್ದಿರುವ ಸೋಲು. ಏನು ಮಾಡಲಿ ಹೇಳಿ ? ನನ್ನ ನೋವು-ಸಂಕಟಗಳನ್ನು ಯಾರೊಂದಿಗೆ ಹೇಳಿಕೊಳ್ಳಲಿ....ಆಫೀಸಿಗೆ ಹೋಗುವ ದಾರಿಯಲ್ಲಿ ಡಾ|| ಬಸಂತಿ ಕ್ಲಿನಿಕ್. ವಾರಕ್ಕೋ, ತಿಂಗಳಿಗೋ ಒಮ್ಮೆ ಹೊಕ್ಕು ದೈಹಿಕ ಪರೀಕ್ಷೆ ಮಾಡಿಸಿಕೊಳ್ಳದೆ ಗತ್ಯಂತರ ವಿಲ್ಲ. ಅಷ್ಟು ಮಾತ್ರೆ ನುಂಗುವುದನ್ನು, ನೋಡಿಯೂ ಯಜಮಾನ ಹೇಳುತ್ತಾನೆ ''ನಿನಗೆ ಮಾತ್ರೆ ನುಂಗುವ ಚಟ....! ಎಷ್ಟು ನುಂಗುವಿಯೋ ನುಂಗು!''

ಆ ಮಾತಿಗೆ ಉತ್ತರಿಸುವುದಾದರೆ ವೃಥಾ ಲಟಾಪಟಿ - ಕಿರುಕುಳ - ಅಸಮಾಧಾನ.

ಇದೆಲ್ಲಾ ಏಕೆ ಬೇಕು? ಮಾನಸಿಕ ಸ್ವಾಸ್ಥ್ಯವಿಲ್ಲದೆ ಕೆಲಸ ಮಾಡುವುದೂ ಅಸಾಧ್ಯ. ಈಗೀಗ ಎಲ್ಲಾ ಸಂಕಷ್ಟಗಳನ್ನೂ ಭಗವಂತನ ಪಾದಕ್ಕೆ ಅರ್ಪಿಸಿ ಸುಮ್ಮನಾಗಿ ಬಿಡುವೆ. ಎಷ್ಟೋ ಸಲ ಅನಿಸುತ್ತೆ ಇಂಥ ಜೀವನವಾದರೂ ಏಕಿರಬೇಕು? ಸುಮ್ಮನೆ ಯಾವುದಾದರೂ ಆಶ್ರಮ ಸೇರಿ ಸಾಮಾಜಿಕ ಸೇವೆ ಮಾಡಲೇ? ಅಥವಾ ಈ ಜೀವವನ್ನೇ ಕೊನೆಗಾಣಿಸಲೇ? ಆದರೆ.... ಆದರೆ ಹೃದಯ ನಿಘಂಟಿನಲ್ಲಿ ಅದಕ್ಕೆ ಉತ್ತರವೇ ಇಲ್ಲ.

ಎಷ್ಟೋ ಸಲ ಒಬ್ಬಳೇ ಇರುವಾಗ ಯೋಚಿಸುತ್ತೇನೆ. ನಮ್ಮ ಸಂಸ್ಕೃತಿಯಲ್ಲಿ-ನಮ್ಮ ಸಾಹಿತ್ಯ ಭಂಡಾರದಲ್ಲಿ ಎಂಥೆಂಥ ಉತ್ಕೃಷ್ಟವಾದ ಶಬ್ದಗಳಿವೆ... ಸುಸಂಸ್ಕೃತಿ-ಸಹಕಾರ-ಸಹಜೀವನ-ಸರ್ವೋದಯ-ಸಂಜೀವನ-ಸ್ನೇಹ-ಪ್ರೇಮ-ಜ್ಞಾನ...ಹೀಗೆ ಹೇಳುತ್ತ ಹೋದರೆ ಅವುಗಳಿಗೆ ಕೊನೆಯುಂಟೆ? ಭಗವಂತ ಈ ಶಬ್ದಗಳಿಗೇಕೆ ಅರ್ಥ ಬರೆಯಲಿಲ್ಲ ನಮ್ಮ ಹೃದಯ ನಿಘಂಟಿನಲ್ಲಿ ? ಇವು ಇರುವುದು ಸದಾ ಪುಸ್ತಕದ ಹುಳುಗಳಾಗಿ ಉಳಿಯಲಿಕ್ಕೇನು ? ನಮ್ಮ ಸಂಸ್ಕೃತಿ ತೀರಾ ತಿರುಗ-ಮುರುಗ ಆಗಲು ಕಾರಣವೇನು ? ಬ್ರಿಟಿಷರ ಪಾದಧೂಳಿಯಿಂದಲೇ ? ಛೀ! ಛೀ! ಅಲ್ಲವೇ ಅಲ್ಲ. ಅವರ ಸಂಜೀವಿನಿ, ಅವರ ಸಹಕಾರ, ಅವರ ಜ್ಞಾನ-ವಿಜ್ಞಾನ, ಅವರ ಪ್ರೀತಿ-ವಿಶ್ವಾಸ ನಮ್ಮಲ್ಲುಂಟೇ ಈ ಪ್ರಶ್ನೆಗಳಿಗೆಲ್ಲಾ ನಿಜವಾಗಿಯೂ ನಮ್ಮ ಹೃದಯ ನಿಘಂಟಿನಲ್ಲಿ ಬರೆಯಲಿಲ್ಲ ಅರ್ಥ ವಿಧಿ.... ನಮ್ಮವರು ಶಂಡರಾಗಿ

ಉಳಿಯಲಿಕ್ಕಾಗಿಯೇ ಹುಟ್ಟಿದವರು. ನಿದ್ದೆಯ ಮಂಪರ ಕಣ್ಣುಗಳನ್ನು ಆವರಿಸುತ್ತಿದೆ. ಇಂದಿಗೆ ಮುಗಿಸುವೆ....

* * *

''ಯಾರ ಕಾಗದ ಅಮ್ಮಾ ?''

''ಶಕೀಲಾ ಬರೆದಿದ್ದಾಳೆ.''

''ಕೊಡಿ ಅಮ್ಮಾ! ನಾನೂ ನೋಡುವೆ.''

''ಅದರಲ್ಲಿರುವುದು ಅವಳ ತಾಪತ್ರಯ ಮತ್ತೇನಿಲ್ಲ.''

ಶಾಂತಲಾ ಕಾಗದವನ್ನು ಕೈಕೊಂಡು ಓದಿ ಅಕ್ಷರ ಅಕ್ಷರವನ್ನೂ ಮನನ ಮಾಡಿದಳು. ಈ ಜೀವನ ಏಕಿಷ್ಟು ಘೋರ ಎಂಬುದೇ ಅರ್ಥವಾಗುತ್ತಿಲ್ಲ. ಎಳೆ ಮನಸ್ಸು-ಎಳೆ ಹೃದಯ ಭರಿಸಲಾರದಷ್ಟು ವಿಚಾರಗಳ ಕೋಟೆ. ಎಲ್ಲರಿಗೂ ಅವರವರ ಕಷ್ಟವೇ ಹೆಚ್ಚಾಗಿರುವಾಗ ಇನ್ನು ಇತರರ ಸಂಕಟವನ್ನು ವಿಚಾರಿಸುವಷ್ಟು ಸಮಯ-ಸಹನೆ ಇರುವುದಾದರೂ ಹೇಗೆ ?

ಪ್ರಶ್ನೆ ಚಿತ್ತಕಲ್ಪವನ್ನು ಗುಂಗೆ ಹುಳುವಿನಂತೆ ಕೊರೆಯುತ್ತಲೇ ಇದೆ.

ಅಮ್ಮನೂ ಕಷ್ಟ ಅನ್ನುತ್ತಾಳೆ. ಅಕ್ಕಾನೂ ಕಷ್ಟ ಅನ್ನುತ್ತಾಳೆ. ನನಗೂ ಕಷ್ಟವೇ. ಭಗವಂತ ಎಲ್ಲರಿಗೂ ಕಷ್ಟಕೊಡುವ ಕೆಲಸ ಹೊಂಚಿಕೊಂಡಿದ್ದಾನೆಯೇ? ಆದರೆ... ಆದರೆ, ಪಾಂಚಾಲಿ ಮನೆಯಲ್ಲಿ ಎಲ್ಲರೂ ಸುಖವಾಗಿದ್ದಾರೆ. ಅವಳು ಕೇಳಿದ್ದೆಲ್ಲಾ ಕೊಡುತ್ತಾರೆ. ಎಷ್ಟೊಂದು ಒಳ್ಳೊಳ್ಳೆಯ ಬಟ್ಟೆಗಳಿವೆ ಅವಳಲ್ಲಿ? ಅವೆಲ್ಲಾ ಹೇಗೆ ಬಂದುವು? ನಮಗಾದರೆ ಏನೂ ಇಲ್ಲವಲ್ಲಾ....ಅಮ್ಮ ಉಡುವುದು ಯಾವತ್ತೂ ಹರಿದ ಸೀರೆಯನ್ನೇ. ಅವಳಿಗೊಂದು ಒಳ್ಳೆಯ ಬಟ್ಟೆಯಿಲ್ಲವಲ್ಲಾ, ಇದೇಕೆ ಹೀಗೆ? ಎಲ್ಲರೂ ಕಾರುಗಳಲ್ಲಿ ಓಡಾಡುತ್ತಾರೆ. ನಮಗೆ ನಮ್ಮ ಕಾಲೇ ಕಾರು. ನಮ್ಮ ಕಷ್ಟಗಳೇ ಒಳ್ಳೆಯ ಬಟ್ಟೆ; ಸೀರೆ ಎಲ್ಲಾ ಇದೇನು ಇಷ್ಟೊಂದು ಅಂತರ....? ಅಮ್ಮ ಹೇಳುತ್ತಾರೆ ದೇವರ ಇಚ್ಛೆಯನ್ನು ಪ್ರಶ್ನಿಸಬಾರದು ಎಂದು. ಅಂದರೆ....ಇದೆಲ್ಲಾ ಅರ್ಥ ವಾಗುವುದು ಹೇಗೆ?

ಗೌರೀಮಾ ತೈಲದ ಶೀಶೆಯೊಡನೆ ಬಳಿಗೆ ಬಂದರೂ ಗಮನ ಅತ್ತ ಹರಿಯಲಿಲ್ಲ.

''ಇತ್ತ ಕಾಲು ನೀಡು ಮಗೂ!''

ಶಾಂತಲಾ ತಲೆಯೆತ್ತಿ ನೋಡಿದಳು. ಅಮ್ಮ ಇನ್ನೂ ತಲೆಗೆ ಬಾಚಣಿಗೆಯನ್ನೇ ಮುಟ್ಟಿಸಿಲ್ಲ. ನೀರಿನ ಅಭಾವದಿಂದ ಒಂದಿನ ಸ್ನಾನ ಮಾಡದರೆ ಇನ್ನೊಂದಿನ ಇಲ್ಲ.

ಮೈಲಿಗೆ ಬಟ್ಟೆ, ಮ್ಲಾನ ಮುಖಬಿಂಬ ನೋಡಿದರೆ ಒಡಲೆಲ್ಲ ಸಂಕಟ. ಆದರೆ, ಅವಳೆಂದೂ ಅದನ್ನು ಹೇಳಿಕೊಳ್ಳುವುದಿಲ್ಲ. ಕೆಲಸ, ಕೆಲಸ, ಕೆಲಸವೇ ಹೊರತು ಮತ್ತೊಂದಿಲ್ಲ....

ಕಾಲು ನೀಡಿ ಕೇಳಿದಳು ಪುಟ್ಟ ಶಾಂತಲಾ ''ಭಗವಂತ ನಮ್ಮೆಲ್ಲರಿಗೂ ಕಷ್ಟವನ್ನೇ ಕೊಟ್ಟಿದ್ದಾನೆ ಏಕೆ ?''

''ನಾವು ಏನು ಪಡೆದುಕೊಂಡಿದ್ದೇವೋ ಅದು ನಮಗೆ.''

''ಅಂದರೆ....?''

''ನಾವು ಪೂರ್ವಜನ್ಮದಲ್ಲಿ ಪುಣ್ಯಕಾರ್ಯಮಾಡಿದಿದ್ದಲ್ಲಿ ಈ ಜನ್ಮ ಸುಖಕರವಾಗಿರುತ್ತಿತ್ತೇನೋ....ನಾವು ಮಾಡುವ ಸೇವೆ ಏನೇನೂ ಸಾಲದು. ಅದಕ್ಕೇ....''

''ಹಾಗಾದರೆ ಪಾಂಚಾಲಿ ಮನೆಯವರು ಪುಣ್ಯ ಕಾರ್ಯ ಮಾಡಿದ್ದರೇ ?''

''ಇರಬಹುದು....ಯಾರಿಗೆ ಗೊತ್ತು ?''

''ಹಾಗಾದರೆ, ಭಗವಂತ ಪ್ರತಿಯೊಬ್ಬರನ್ನೂ ಗಮನಿಸುತ್ತಾನೆಯೇ ? ''

''ಅವನು ಗಮನಿಸುವನೋ ಅಥವಾ ನಮ್ಮ ಧರ್ಮಕರ್ಮಗಳೇ ಬೆಂಬಿಡಿದು ಬರುತ್ತವೋ....ನಾವು ಊಹಿಸುವುದಕ್ಕಾಗುತ್ತದೆಯೇ ? ನಾವು ನೋಡುವುದು ಏನಿದ್ದರೂ ದೃಷ್ಟಿಕಕ್ಷೆಯಲ್ಲಿ ಏನಿರುತ್ತೋ ಅದನ್ನು ಮಾತ್ರ. ಕಲ್ಪನೆ ತಪ್ಪೋ ಒಪ್ಪೋ ಅದನ್ನು ನಾವು ಅರಿಯಲಾರೆವು. ಅಂದಮೇಲೆ ನಾವು ತರ್ಕಕ್ಕೆ ಹೋಗುವುದು ವ್ಯರ್ಥವೇ. ಅದಕ್ಕಿಂತ ಭಗವಂತನ ಚಿಂತನೆ ಲೇಸು....

ಆ ಪುಟ್ಟ ಬಾಲಕಿ ಏನೆಂದು ಅರ್ಥೈಸಿದಳೋ ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯಗೆರೆಯಂತೆ ತಕ್ಕನೆ ನೀರಾಡಿತು.

## ೧೧

''ಪಾಂಚಾಲೀ....!''

''.......''

''ಪಾಂಚಾಲೀ....!''

ಮುಂಬಾಗಿಲು ತೆರೆದಿತ್ತು. ಆದ್ದರಿಂದ ಕರೆಗಂಟೆಯ ಗುಂಡಿಯನ್ನು ಒತ್ತಲಿಲ್ಲ ಶ್ಯಾಮಲಾ. ಕರೆದರೂ ಉತ್ತರ ಬಾರದಿರುವಾಗ ಗುಂಡಿಯನ್ನು ಒತ್ತದೆ ವಿಧಿಯಿರಲಿಲ್ಲ. ಗುಂಡಿಯನ್ನು ಒತ್ತಿದಳು ಶ್ಯಾಮಲಾ. ಒಳಗಿದ್ದ ಪಾಂಚಾಲಿ ಓಡಿ ಬಂದಳು.

"ಓ! ಏನಕ್ಕಾ ?"

"ಆಗ ಎರಡು ಬಾರಿ ನಿನ್ನ ಕರೆದೆ ನೀನು ಓಗೊಡಲಿಲ್ಲ ?"

"ಒಳಗಿದ್ದೆ....ಕೇಳಿಸಲಿಲ್ಲ. ಹೇಗಿದ್ದಾಳೆ ಶಾಂತಿ ?"

"ಚೆನ್ನಾಗಿದ್ದಾಳೆ...."

"ಅಮ್ಮಾ, ಅಮ್ಮಾ! ಯಾರು ಬಂದಿದ್ದಾರೆ ನೋಡಿ!"

ಪಾಂಚಾಲಿಯ ಅಮ್ಮ ನಾಗಮಣಿ ಹೊರಬಂದಳು. ನೋಡಿದರೆ ಅಪರೂಪ ವಾಗಿ ಶ್ಯಾಮಲಾ ಬಂದಿದ್ದಾಳೆ ಮುಗುಳ್ನಗೆಯ ಸ್ವಾಗತ ನೀಡಿ ಕೇಳಿದಳು "ಏನಮ್ಮಾ, ಈವೊತ್ತು ರವಿ ಯಾವ ಕಡೆ ಮೂಡಿದ ? ನೀನು ಬಂದುದು ಬಹಳ ವಿಶೇಷವೇ."

"ಶಾಂತಲಾ ಕಾಲು ಕಳೆದುಕೊಂಡಮೇಲೆ ಬೆಳಿಗ್ಗೆ-ಸಾಯಂಕಾಲ ಅವಳ ಬಳಿ ಇರುವುದೇ ಆಗುತ್ತೆ. ಪಾಪ...ಒಳ್ಳೆಯ ಮಗುವನ್ನು ಮೂಲೆಗೆ ಕೂರಿಸಿದ ದೇವರು!"

"ನಿಜ ಶ್ಯಾಂ! ತುಂಬ ಅನ್ಯಾಯ! ಪಾಂಚಾಲಿ ಜೊತೆ ಆಟವಾಡುತ್ತಿದ್ದುದು ಮರೆಯುವಂತಿಲ್ಲ. ಈಗ ಹೇಗಿದ್ದಾಳೆ ? ತೈಲದಿಂದ ಏನಾದರೂ ಪ್ರಯೋಜನ ಕಾಣಿಸುತ್ತಿದೆಯೇ ?"

"ಸ್ವಲ್ಪ ಉತ್ತಮ. ಆದರೆ, dead slow."

"ನಿಧಾನವಾದರೂ ಪರವಾಯಿಲ್ಲ. ಗುಣವಾದರೆ ಸಾಕಲ್ಲ."

"ನಾವು ಹಾರೈಸುವುದೂ ಅದನ್ನೇ."

"ಕುಳಿತುಕೋ ಶ್ಯಾಮಲಾ."

"ಇಲ್ಲ ಆಂಟೀ, ನನಗೆ ಹೊತ್ತಾಯಿತು. ಆಫೀಸಿಗೆ ಹೋಗಬೇಕು. ನಿಮ್ಮ ಬಳಿ ಒಂದು, ಅಲ್ಲ ಪಾಂಚಾಲಿಯ ಬಳಿ ಒಂದು ಉಪಕಾರ ಕೇಳಿಕೊಳ್ಳೋಣವೆಂದು ಬಂದೆ."

"ಏನು ಹೇಳು ?"

"ಪಾಂಚಾಲಿ ಬೊಂಬೆ ತಂದು ತೋರಿಸಿದ್ದಾಳೆ. ನನಗೆ ಅದೇ ತರಹ ಬೊಂಬೆ ಬೇಕು ಎಂದು ಕೇಳುತ್ತಿದ್ದಾಳೆ ಶಾಂತಿ. ನನಗೆ ಅಷ್ಟು ದೂರ ಹೋಗಿ ಬರುವುದಕ್ಕೆ ಸಮಯವೇ ಇಲ್ಲ. ನೀವು ಯಾರಾದರೂ ಆ ಕಡೆ ಹೋದರೆ ತಂದುಕೊಡುತ್ತೀರಾ ಅಂತ ಕೇಳೋಣವೆಂದು ಬಂದೆ. ಮೂವತ್ತು ರೂಪಾಯಿ ಎಂದಳು. ಹಣ ತಂದಿರುವೆ. ಈ ಬೊಂಬೆ ಕೊಟ್ಟರೂ ಸರಿಯೆ; ಅಥವಾ ಇಂದೇ ಬೇರೆ ತಂದುಕೊಟ್ಟರೂ ಸರಿಯೆ; ಇದು ಅವಳದೇ ಹಣ ನೋಡಿ! ಕುಳಿತಲ್ಲೇ ಚೆನ್ನಾದ ಕರವಸ್ತ್ರಗಳನ್ನು ತಯಾರಿಸು ತ್ತಾಳೆ. ನಾನು ಅಂಗಡಿಗೆ ಕೊಟ್ಟು ಹಣ ತಂದುಕೊಡುವೆ. ತುಂಬ ಜಾಣೆ ಹುಡುಗಿ.

ಆ ಒಣಗಿದ ಕಾಷ್ಠದಂತಹ ಕೈಯಲ್ಲಿ ಹೊಲಿಯುತ್ತಿದ್ದರೆ ಒಮ್ಮೆಗೇ ದುಃಖ ಸಂಕಟ ಎರಡೂ ಮೂಡುತ್ತವೆ.''

ಮಾತು ಪೂರ್ತಿಯಾಗುವುದರೊಳಗಾಗಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು ಕಣ್ಣುಗಳಲ್ಲಿ.

''ಬಿಡು ಶ್ಯಾಂ. ಏಕೆ ದುಃಖಿಸುತ್ತಿ. ಎಂದಾದರೂ ದೈವ ಕರುಣೆ ತೋರಿಸೀತು.''

''ದುಃಖಿಸುವುದೇನು ? ನೆನೆದಾಗ ಒಂದು ಹನಿ ಕಣ್ಣೀರು ಅಷ್ಟೆ.''

''ಯಾಕೋ ಏನೋ ಒಂದು ಬಗೆಯಾಗಿದ್ದೀ, ಮಾನಸಿಕವಾಗಿ ಬಹಳ ನೋವಾದಂತಿದೆ. ಏನಾಗಿದೆ, ಯಾರಿಗಾದರೂ ಅನಾರೋಗ್ಯವೇ ?''

ಆತಾಯಿಯ ಪ್ರಶ್ನೆ ಎದೆಯಾಳದಿಂದ ಹೊರಬಿತ್ತು, ಕರುಣೆಯ ರಸಧಾರೆಯೇ ಹರಿದು ಬಂದಂತೆ. ಆಗ....ಏನೋ ಹೇಳಲು ಪ್ರಯತ್ನಿಸಿ ಸುಮ್ಮನಾದಳು ಶ್ಯಾಮಲಾ. ಮನಸ್ಸೆಲ್ಲಾ ಮುಜುಗರ. ಚಿತ್ತಭಿತ್ತಿಯಲ್ಲಿ ಚಿಂತೆಯ ಕೀಟದ ಕೊರೆತ. ತಾಳಲಾಗದ ಎಳೆಯ ಹೃದಯ ಛೀಳಿಡುತ್ತದೆ....ಈಗಲೀಗ ನಿಂತ ನೆಲ ಕುಸಿಯಬಾರದೇ ಎಂದು.

ಪಾಂಚಾಲಿ ಲಗು ಬಗೆಯಿಂದ ನುಡಿದಳು ''ನನ್ನ ಬೊಂಬೆಯನ್ನೇ ಕೊಡುವೆ. ಪಾಪ....ಅವಳಿಗೆ ಕುಳಿತಲ್ಲೇ ಕುಳಿತು ಬೇಸರವಾಗಿದೆ ಆಟ ಆಡಿಕೊಳ್ಳಲಿ.''

''ತುಂಬ ಥ್ಯಾಂಕ್ಸ್!''

ಅಲ್ಲಿಂದಲೇ ಆಫೀಸಿಗೆ ಹೊರಟಳು ಶ್ಯಾಮಲಾ, ಭಾರವಾದ ಹೆಜ್ಜೆಗಳನ್ನು ಎಳೆದುಕೊಳ್ಳುತ್ತ.

* * *

ಸ್ವಾಮಿನಿ ತಲೆಬಾಗಿಲಿಗೊಮ್ಮೆ ಹಿಂದಣ ಬಾಗಿಲಿಗೊಮ್ಮೆ ಓಡಾಡಿ ನೋಡಿ ನಿಟ್ಟುಸಿರು ಬಿಡುತ್ತಾಳೆ. ಮುಖದಲ್ಲಿ ಪ್ರೇತಕಳೆ. ಅಂದಿನಿಂದ ಬಾಚಿಲ್ಲ; ಸ್ನಾನವನ್ನೂ ಮಾಡಿಲ್ಲ. ನೀರು ಮಜ್ಜಿಗೆಯಲ್ಲೇ ಕಾಲಹರಣ.

ಅಂದು ಹೊರಹೋದ ಗಂಗಾರಾಂ ಪತ್ತೆಯೇ ಇಲ್ಲ. ಈಗ ಬರಬಹುದು. ಇಂದು ಬರಬಹುದು ಎಂಬ ಪ್ರತೀಕ್ಷೆಯಲ್ಲಿ ನಾಲ್ಕೈದು ದಿನಗಳು ಸದ್ದಿಲ್ಲದೆ ಉರುಳಿ ಹೋದುವು. ಶರತ್ ಅಲ್ಲಿ ಇಲ್ಲಿ ಸುತ್ತಾಡಿ ನೋಡಿದ. ಅವನ ಸ್ನೇಹಿತರುಗಳನ್ನೂ ವಿಚಾರಿಸಿ ನೋಡಿದ. ಕ್ಲಬ್ಬಿಗೂ ಹೋಗಿಬಂದ. ಎಲ್ಲಿಯೂ ಆತನ ಸುಳಿವಿಲ್ಲ. ಮನೆಯಲ್ಲಿ ಅಕ್ಕಿನುಚ್ಚಿಲ್ಲ, ಕಾಸುಕೊಸರೂ ಇಲ್ಲ. ದಿನಾ ತರುವ ಅಂಗಡಿಯಲ್ಲೇ

ಅಕ್ಕಿ ಕಡ ತಂದಿದ್ದಾಳೆ ಗೌರೀಮ್ಮಾ, ಶಾಂತಲೆಯ ದುಡಿಮೆಯಲ್ಲಿ ಇಪ್ಪತ್ತು ರೂಪಾಯಿಗಳು ಬೇಳೆಕಾಳುಗಳಿಗೆ ಆಯಿತು. ಹಗಲಿರುಳೂ ನಿದ್ದೆಯಿಲ್ಲದ ಕೊರಗು-ದುಃಖ.

ಇಂತಹ ಬದುಕಿನಲ್ಲಿ ಏಕಾದರೂ ಇರಬೇಕು ? ನಾನು ಇಲಿ ಪಾಷಾಣ ನುಂಗಬಾರದೇಕೆ ಎಂಬ ಯೋಚನೆಯೂ ಬರುತ್ತದೆ. ಆದರೆ....ಆದರೆ, ಕಾಲಿಲ್ಲದ ಮಗು ಶಾಂತಲಾ ಕಣ್ಣಿಗೆ ಕಟ್ಟುತ್ತಾಳೆ. ಒಂದು ವೇಳೆ ನಾವಿಬ್ಬರು ಹೋದರೆ ಶ್ಯಾಮಲಾ-ಶರತ್ ಹೇಗಾದರೂ ನಿಭಾಯಿಸಿಕೊಳ್ಳುತ್ತಾರೆ....ಮರುಗಳಿಗೆಯಲ್ಲಿ ಅದು ಸರಿಯಲ್ಲ ಎಂಬ ಯೋಚನೆ. ನಾನೇನೋ ಸಾಯಬಹುದು; ಮಗುವನ್ನು ಕೊಲ್ಲಲು ನನಗೆಲ್ಲಿಯ ಹಕ್ಕು ? ಅವಳು ನನ್ನ ಕಾಲು ಸರಿ ಮಾಡಿಕೊಂಡು ಸ್ಕೂಲಿಗೆ ಹೋಗುವೆ ಎನ್ನುತ್ತಾಳೆ. ಅವಳಿಗೆ ಬದುಕಿನಲ್ಲಿ ಆಸೆಯಿದೆ. ಕುಳಿತಲ್ಲೇ ಕೆಲಸ ಮಾಡುವ ಮಗುವನ್ನು ನಾನು ಕೊಲ್ಲಬಹುದೇ? ಅವಳು ಎಂತಹ ಒಳ್ಳೆಯ ಮಗು? ಅವಳಿಗೆ ದ್ರೋಹ ಬಗೆಯುವುದೇ? ಛೇ! ಛೇ! ನನ್ನಿಂದ ಸಾಧ್ಯವೇ ಇಲ್ಲ. ಹೇಗಾದರೂ ಅವಳನ್ನು ತೀರಕ್ಕೆ ಹಚ್ಚಿದ ನಂತರ ಸಾವಿನ ಯೋಚನೆ. ಈಗ ನಾನು ಸತ್ತರೆ ಅವಳ ಗತಿ ?

ಆ ಮಗಳ ಬದುಕು ತನ್ನ ಯೋಚನೆಯನ್ನು ಬುಡಮೇಲು ಮಾಡುತ್ತದೆ. ಗೌರೀಮಾ ನಿಟ್ಟುಸಿರು ಬಿಡುತ್ತಾಳೆ. ಕಣ್ಣುಗಳಲ್ಲಿ ಗಂಗೆ, ಯಮುನೆಯರ ಪ್ರವಾಹ ಧಾರೆ ಧಾರೆಯಾಗಿ ಹರಿಯುತ್ತದೆ.

ಶರತ್ ಮನೆಗೆ ಮರಳಿದಾಗ ಸಂಜೆ ಏಳು ಗಂಟೆ.

''ಏಕಪ್ಪಾ, ಇಷ್ಟು ಹೊತ್ತು ಮಾಡಿದೆ ?''

''ಕ್ಲಬ್ಬಿಗೆ ಹೋಗಿದ್ದೆ. ಅಪ್ಪ, ಘೋರ್ಪಡೆ ಇಬ್ಬರೂ ಕ್ಲಬ್ಬಿಗೆ ಬರುತ್ತಾ ಇಲ್ಲ. ಬಹುಶಃ ಘೋರ್ಪಡೆಯೊಂದಿಗೆ ಎಲ್ಲಾದರೂ ಹೋಗಿರಬಹುದು. ಆಫೀಸಿಗೆ ಒಂದು ವಾರ ರಜೆ ಹಾಕಿದ್ದಾರೆ. ಆ ಪ್ರಕಾರ ಅವರು ನಾಡಿದ್ದು ಕೆಲಸಕ್ಕೆ ಹಾಜರಾಗಬೇಕು. ಇನ್ನೆರಡು ದಿನ ಕಾದು ನೋಡಿದರೆ ಏನು ಎಂಬುದು ತಿಳಿಯುತ್ತೆ. ನೀವೇನೂ ಚಿಂತೆ ಮಾಡಬೇಡಿ ಅಮ್ಮಾ, ಎಂದಾದರೂ ಬಂದೇ ಬರುತ್ತಾರೆ. ಎಷ್ಟು ದಿನ ಘೋರ್ಪಡೆ ಯೊಂದಿಗೆ ಇರಲು ಸಾಧ್ಯ ?''

ಗೌರೀಮಾ ನಿಟ್ಟುಸಿರು ಬಿಟ್ಟಳು. ಹೇಳಬೇಕಿದ್ದ ಮಾತು ಬಿಗಿದ ತುಟಿಗಳ ಹಿಂದೆಯೇ ಉಳಿಯಿತು. ತಾಯಿ ಮತ್ತು ಅಣ್ಣನ ಸಂಭಾಷಣೆಯನ್ನು ಆಲೈಸುತ್ತಿದ್ದ ಶಾಂತಲಾ ನೊಂದು ನುಡಿದಳು.

''ನೀನು ದೊಡ್ಡವರಿಗೆ ಹಾಗೆ ಮಾಡಬಾರದಿತ್ತು ಶರತ್. ಅವರು ತೀರಾ ನೊಂದುಕೊಂಡಿದ್ದಾರೆ.''

''ಮಾಡಬಾರದಿತ್ತು ಎಂದರೆ ಕಾಲಯಾಪನೆ ಹೇಗೆ ಇಲ್ಲಿ ?''

ಅವಳು ಮಾತಾಡಲಿಲ್ಲ. ತನ್ನ ಬಗ್ಗೆಯೂ ನಿಷ್ಕರುಣೆಯಿಂದ ವರ್ತಿಸುವ ಬಗೆ ಚಿತ್ತಭಿತ್ತಿಯಲ್ಲಿ ಸುಳಿದಳಿದಳಿದಾಗ ಮುಖಬಿಂಬ ಪರಿಮ್ಲಾನವಾಯಿತು. ದುಃಖದುಗುಡಗಳ ಕೋಟೆಯಾಯಿತು ಪುಟ್ಟ ಶರೀರ. ಸ್ವಲ್ಪಹೊತ್ತು ಸುಮ್ಮನಿದ್ದು ಅವಳೆಂದಳು ''ಅವರ ಕೋಪತಾಪ ಹುಟ್ಟುಗುಣ. ಅದು ಈ ವಯಸ್ಸಿನಲ್ಲಿ ಎಂದಾದರೂ ಬದಲಾದೀತೇ? ಹೇಗಾದರೂ ಸಹಿಸಿಕೊಳ್ಳವುದೊಂದೇ ದಾರಿ. ಅವರು ನನ್ನಮೇಲೆ ನಿಷ್ಠೂರವಾಗಿ ವರ್ತಿಸಿದಾಗಲೆಲ್ಲಾ ನಾನು ಮಾಡಿದ್ದು ಮೊಗದಿರುವುದೊಂದೇ. ನೀನೂ ಹಾಗೆ ಸುಮ್ಮನಿದ್ದಿದ್ದರೆ ಈ ಪ್ರಸಂಗ ಬರುತ್ತಿರಲೇ ಇಲ್ಲ. ಯೋಚನೆ ಮಾಡಿ ನೋಡು....''

ಅವನು ತಲೆಯಾಡಿಸುತ್ತ ನುಡಿದ ''ಎಷ್ಟು ಕಾಲ ಅಂತ ಹೀಗೆ. ದೊಡ್ಡವರಾದವರು ದಯೆ-ಧರ್ಮ ಅರಿತುಕೊಳ್ಳಬೇಕು....''

ಶಾಂತಲಾ ಶಾಂತಭಾವದಿಂದ ಸುಮ್ಮನಾದಳು. ತಲೆಯಲ್ಲಿ ಯೋಚನೆಯ ಚಕ್ರ ಸುಳಿ ಸುತ್ತುತಿತ್ತು.

* * *

ಶ್ಯಾಮಲಾ ಟ್ರೇಯಲ್ಲಿದ್ದ ಪತ್ರಗಳ ರಾಶಿಯಲ್ಲಿ ಮನವಿಟ್ಟಿದ್ದಳು. ಅವುಗಳ ವಿಷಯವನ್ನು ಮನನ ಮಾಡಿ ಮುಖ್ಯ ವಿಷಯಗಳಿಗೆ ಗೆರೆ ಎಳೆದು, ಲಕೋಟೆ ಮತ್ತು ಪತ್ರಗಳಿಗೆ ಪಿನ್‌ಮಾಡಿದ ಮೇಲೆ ಬಾಸ್ ಕಡೆಗೆ ಒಯ್ದು ಉತ್ತರ ಬರೆಸುವ ಕಾಯಕ.

ಎಷ್ಟೇ ಧೈರ್ಯ ವಹಿಸಿದರೂ ಮನಸ್ಸು ಬಿಸಿಲಟ್ಟಿದ ಮಂಜಿನಂತೆ ಕರಗುತ್ತಲೇ ಇದೆ. ಬಾರಿಬಾರಿಗೂ ತುಂಬಿ ಬರುವ ಕಂಬನಿಗಳಿಂದ ಕಣ್ಣುಗಳು ಮಂಜು ಮಂಜು.

''ಇಂದೇಕೋ ಕಣ್ಣುರಿ....''ಎಂಬ ನೆವ ಹೇಳಿಕೊಂಡು ಕಣ್ಣುಗಳನ್ನು ಒರಿಸಿಕೊಳ್ಳುತ್ತಲೇ ಇದ್ದಾಳೆ.

''ಏನಮ್ಮಾ, ಏಕೆ ಕಣ್ಣುರಿ....? ಡಾಕ್ಟರಿಗಾದರೂ ತೋರಿಸಬೇಕಿತ್ತು. ನೀನು ಸುಮ್ಮನಿದ್ದರೆ ಹೇಗೆ ?'' ಕೇಳಿದಳು ಶಾರದಾ ಕರ್ವೆ.

''ಮನೆಗೆ ಹೋಗುವಾಗ ತೋರಿಸುಕೊಳ್ಳುವೆ'' ಮನದಳಲನ್ನು ತೋರಿಕೊಳ್ಳದೆ ನುಡಿದಳು ಶ್ಯಾಮಲಾ.

ಬಾಸ್ ಕೊಠಡಿಗೆ ಹೋಗುವುದು ಹೇಗೆ ಎಂಬ ಪ್ರಶ್ನೆ ಮನದಲ್ಲಿ. ತನ್ನನ್ನು ತಾನು ನಿಗ್ರಹಿಸಿಕೊಳ್ಳಲು ಪ್ರಯತ್ನಿಸಿದರೂ ಫಲಿಸದು. ಶೌಚಾಲಯಕ್ಕೆ ಹೋಗಿ ತಣ್ಣೀರಿನಲ್ಲಿ ಮುಖ ತೊಳೆದುಕೊಂಡು ಕಣ್ಣಿಗೆ ತಣ್ಣೀರೆರಚಿ ದುಃಖ ಶಮನವಾದ ನಂತರ ಹೊರಬಂದಳು ಶ್ಯಾಮಲಾ.

''ತಣ್ಣೀರು ಎರಚಿದನಂತರ ಸ್ವಲ್ಪ ಶಮನವಾಗಿದೆ. ನೋಡೋಣ, ಹೀಗೆಯೇ ಕಡಿಮೆಯಾಗಬಹುದೇನೋ....ನಾನು ಮನೆಯಿಂದ ಬರುವಾಗೊಮ್ಮೆ ತಣ್ಣೀರಿನಲ್ಲಿ ತೊಳೆದಿದ್ದರೆ ಒಳ್ಳೆಯದಿತ್ತು. ಆಗ ನೆನಪು ಬರಲಿಲ್ಲ.''

''ಈಗ ಕಣ್ಣಿಗೆ ಸ್ವಲ್ಪ ವಿಶ್ರಾಂತಿ ಕೊಡು, ಅನಂತರ ಕೆಲಸ ಮಾಡಬಹುದು.''

ಶ್ಯಾಮಲಾ ಒದ್ದೆ ಕರವಸ್ತ್ರವನ್ನು ಕಣ್ಣಿಗೆ ಒತ್ತಿ ಹಿಡಿದುಕೊಂಡು ಕುಳಿತಳು. ಚಿತ್ತಭಿತ್ತಿಯಲ್ಲಿ ತಂದೆ ಹೊರತು ಮತ್ತೊಂದಿಲ್ಲ. ಮನಸ್ಸಿಗೆ ಶಾಂತಿ ಬರುವುದಾದರೂ ಹೇಗೆ? ದಾರುಣ ಜೀವನದ ಪರಿತಾಪ ಸಾಮಾನ್ಯವೇನೂ ಅಲ್ಲ. ಅಪ್ಪ ಬದುಕಿದ್ದಾರೋ ಇಲ್ಲವೋ ದೇವರಿಗೇ ಗೊತ್ತು. ಏನಾದರೂ ಅನಾಹುತವಾದರೆ ಜೀವನದ ಗತಿಯೇನು? ಹೇಗೆ ಈ ಬದುಕಿನ ನಿರ್ವಹಣೆ ?

ಪ್ರಶ್ನೆ ಚಿತ್ತ ಭಿತ್ತಿಯಲ್ಲಿ ಮೂಡಿ ನಿಂತಿದೆ. ಉತ್ತರ ಡೋಲಾಯಮಾನ.

ಸ್ವಲ್ಪ ವಿಶ್ರಾಂತಿಯ ನಂತರ ಬಾಸ್ ಕೊಠಡಿಗೆ ಹೋದಳು ಕಾಗದಗಳ ಕಟ್ಟಿನ ಸಹಿತ.

''ನಿನ್ನೆ ಏಕೆ ಬರಲಿಲ್ಲ ?''

''ಜ್ವರ ಬಂದಿತ್ತು ಸರ್.''

''ಜ್ವರ ಮಾನಸಿಕವೋ, ದೈಹಿಕವೋ ?''

''ಹೇಗೆಂದರೂ ಸರಿಯೆ, ಎರಡೂ ಬಂದಿತ್ತು ಸರ್.''

''ಏಕೆ ಅಂತಹದ್ದೇನು ?''

''ಸಂಸಾರ ಅಂದರೆ ಏನಾದರೂ ಇರುತ್ತೆ. ಹೇಳುವುದೇನು....ಇವುಗಳಿಗೆ ಈಗಲೇ ಉತ್ತರ ಬರೆಸುವಿರಾ ?''

''ಹೌದು. ನೋಟ್‌ಬುಕ್ ಲೇಖನಿ ತೆಗೆದುಕೊ.''

ಅವನು ಕೆಲವು ಪತ್ರಗಳಿಗೆ ಉತ್ತರ ಬರೆಸಿದ ನಂತರ ಹೇಳಿದ ''ಮೊನ್ನೆ ನಿನ್ನ ತಂದೆಯನ್ನು ನೋಡಿದ್ದೆ. ಆಗಲೇ ನಿನಗೆ ಹೇಳುವುದನ್ನು ಮರೆತೆ. ನಮ್ಮ ಅಸಿಸ್ಟೆಂಟ್ ಮ್ಯಾನೇಜರಿಗೆ ಅವರು ಗೊತ್ತಂತೆ. ನನಗೆ ಪರಿಚಯಿಸಿದರು. ನಿಮ್ಮ ಮಗಳು ನಮ್ಮಲ್ಲಿ ಕೆಲಸ ಮಾಡುತ್ತಾಳೆ ಎಂದೆ. ಅವರು ಸಂತಸ ವ್ಯಕ್ತಪಡಿಸಿದರು....''

ಆ ಮಾತು ಕೇಳಿ ತಂದೆ ಜೀವಂತವಿರುವ ಸುದ್ದಿಯಿಂದ ಎಷ್ಟೋ ಸಮಾಧಾನ. ಆದರೂ, ಕೇಳಲಾರದೇ ಕೇಳಿದಳು ''ಎಲ್ಲಿ ಸಿಕ್ಕಿದ್ದರು ಸರ್ ? ''

''ಅವರೂ ಮತ್ತು ಫೋರ್ಪಡೆ ಕ್ಲಬ್ಬಿನಲ್ಲಿ ಸಿಕ್ಕಿದ್ದರು.''

ಶ್ಯಾಮಲಾ ಸಮಾಧಾನದಿಂದ ತನ್ನ ಕೆಲಸ ಮುಂದುವರಿಸಿದಳು.

* * *

ಪಾಂಚಾಲಿ ಬೊಂಬೆ ತಂದು ಕೊಟ್ಟಿದ್ದೂ ಅಲ್ಲದೆ, ಅದಕ್ಕೆ ಲಂಗ ಹೊಲಿಯ ಬಹುದಾದ (ದರ್ಜಿ ಅಂಗಡಿಯಿಂದ) ಬಟ್ಟೆಯ ಚೂರುಗಳನ್ನೂ ಆರಿಸಿ ತಂದಿದ್ದಾಳೆ. ಮೂರು ಫ್ರಾಕ್ ಹೊಲಿಯುವಷ್ಟು ಬಟ್ಟೆಗಳೂ ಲೇಸುಗಳೂ ಇದ್ದುದರಿಂದ ಕೈತುಂಬ ಕೆಲಸವೂ ಸಿಕ್ಕಿತು. ಇಬ್ಬರೂ ಬಹಳ ಹೊತ್ತು ಆಟದಲ್ಲಿ ಮನವಿಟ್ಟರು. ಮೈಮನಗಳು ಚಕಮಕಿಯಾದುವು. ಮುದ್ದು ಬೊಂಬೆಯನ್ನು ಮುದ್ದು ಮಾಡುತ್ತಲೇ ಹೇಳಿದಳು ಶಾಂತಿ.

''ಈವೊತ್ತು ಹನ್ನೆರಡು ಕರವಸ್ತ್ರಗಳನ್ನು ಶ್ಯಾಂ ಅಂಗಡಿಗೆ ತೆಗೆದುಕೊಂಡು ಹೋಗಿದ್ದಾಳೆ. ಅದರಿಂದ ಹನ್ನೆರಡು ರೂಪಾಯಿ ಬರುತ್ತೆ. ಅದರಲ್ಲಿ ಸಿಹಿಕಾರ ತಂದು ನನ್ನ ಗೆಳತಿಯರನ್ನು ಕರೆದು ಒಂದು ಪಾರ್ಟಿ ಮಾಡಿಸುವೆ. ಅಂದು ಈ ಬೊಂಬೆಗೊಂದು ಹೆಸರಿಡಬೇಕು. ಯಾವತ್ತು ಮಾಡಿಸಲಿ ಹೇಳು ? ನಿನಗೇನೆನಿಸುತ್ತೆ, ಮಾಡಿಸಲೇ, ಹೇಳು ಪಾಂಚಾಲೀ ?''

ಅವಳು ಕೇಳಿದ ಪ್ರಶ್ನೆಯಲ್ಲಿ ಆನಂದರಸವೇ ಹರಿದು ಬಂತು, ಕಣ್ಣುಗಳಲ್ಲಿ ಎಳೆಮಿಂಚು ಮಿಂಚುವಂತೆ.

''ಆಗಲಿ, ಶಾಂತಿ! ಪಾರ್ಟಿ ಸಾಯಂಕಾಲವಾದರೆ ಎಲ್ಲರಿಗೂ ಸಮಯವಿರುತ್ತೆ. ಆಂಟಿ ಮತ್ತು ಅಕ್ಕನನ್ನು ಕೇಳಿ ಹೇಳು. ನಿನ್ನ ಪರವಾಗಿ ಗೆಳತಿಯರನ್ನು ಕರೆಯುವುದು ನನ್ನ ಕೆಲಸ. ಮಧ್ಯಾಹ್ನ ನಾಲ್ಕೂವರೆ ಗಂಟೆಗೆ ಬರ ಹೇಳಿದರೆ ಅನುಕೂಲ.''

''ಹೌದು ಪಾಂಚಾಲಿ. ಸಾಯಂಕಾಲ ಎಲ್ಲರೂ ಆರಾಮವಾಗಿರುತ್ತಾರೆ. ನೀನು ಶಾಲೆಗೆ ಹೋಗುವಾಗ ಹೀಗಿಂದೇ ಬಂದು ಹೋಗು. ಅಕ್ಕನನ್ನು ಕೇಳಿ ನಿನಗೆ ತಿಳಿಸುವೆ.''

''ಆಗಲಿ, ಯಾರ್‍ಯಾರನ್ನು ಕರೆಯಬೇಕು ?''

''ಚಂದ್ರಿಕಾ, ವಾಸಂತಿ, ಪ್ರಮೀಳ, ದೇವಕಿ, ನೀನು, ರೋಸನಾ, ಯಮುನಾ.''

''ಇಷ್ಟು ಮಂದಿ ಕೂಡಿದರೆ ಸಾಕು. ಅವರನ್ನೆಲ್ಲಾ ನೋಡಿ ತುಂಬ ದಿನ ಗಳಾಗಿವೆ. ನೋಡೋಣ ಎನಿಸುತ್ತೆ. ಸ್ವಲ್ಪಹೊತ್ತು ಎಲ್ಲರೂ ಇಲ್ಲಿ ಕೂಡಿದರೆ ನನಗೂ ಹಿತ. ಎಲ್ಲರಿಗೂ ಹಿತ. ಅಕ್ಕ ಹೇಳಿದ್ದು ಈ ಸಲ ನಿನಗೆ ಫ್ರಾಕ್ ಕೊಳ್ಳೋಣ

ಅಂತ. ಅದಕ್ಕಿಂತ ನನಗೆ ನನ್ನ ಗೆಳತಿಯರನ್ನು ನೋಡುವುದು ಇಷ್ಟ. ಅಲ್ಲದೆ ಈ ಬೊಂಬೆಗೊಂದು ಹೆಸರಿಡುವುದೂ ಉಂಟು. ಎರಡೂ ಕೂಡಿದಂತಾಯ್ತು.''

''ನಿನ್ನ ಫ್ರಾಕಿಗೇನು ಮಾಡುತ್ತಿ?''

''ಹೀಗೆ ಮನೆಯಲ್ಲೇ ಇರುವವಳಿಗೆ ಒಳ್ಳೆಯ ಫ್ರಾಕ್ ಏಕೆ ಬೇಕು ? ಪಾರ್ಟಿ ದಿನ ಸ್ಕೂಲ್ ಬಟ್ಟೆಯಿದೆ ಹಾಕಿಕೊಳ್ಳುವೆ, ಸಾಕು. ನನಗೆ ಏನೇನೂ ಅಲಂಕಾರ ಬೇಡ. ಈ ಬೊಂಬೆಗೆ ಮಾತ್ರ ಒಳ್ಳೆಯ ಫ್ರಾಕು, ಟೋಪಿ, ಕಾಲುಚೀಲ, ಟೈ ಎಲ್ಲಾ ಬೇಕು.''

ಬೊಂಬೆಯನ್ನು ಮುದ್ದುಗೈಯುತ್ತ ''ಇದು ಜೀವಂತವಿದ್ದಿದ್ದರೆ ಎಷ್ಟು ಚೆನ್ನಾಗಿರುತಿತ್ತು, ಅಲ್ಲವೇ? ಬಲು ಮುದ್ದಾದ ಬೊಂಬೆ....ದೇವರು ಎಷ್ಟು ಬುದ್ಧಿವಂತನೋ ಮನುಷ್ಯನೂ ಅಷ್ಟೇ ಬುದ್ಧಿವಂತ. ದೈವಸೃಷ್ಟಿಗೆ ಸರಿಸಾಟಿಯಾದ ಸೃಷ್ಟಿ ಮನುಷ್ಯನದು.''

ಪಾಂಚಾಲಿಯ ಮಾತಿಗೆ ಯೋಚಿಸಿದಳು ಶಾಂತಲಾ...ಮನುಷ್ಯ ಬುದ್ಧಿಶಾಲಿ. ಶಕ್ತಿಶಾಲಿ ನಿಜ. ಆದರೆ....ಅದೇಕೋ ಮುಂದಕ್ಕೆ ಯೋಚನೆಯ ತೇಜಿ ಓಡಲೇ ಇಲ್ಲ.

ಗೌರೀಮಾ ಒಳಗಿನಿಂದ ಬರುತ್ತಲೂ ಶಾಂತಲಾ ತನ್ನ ಬೊಂಬೆಯನ್ನು ತೋರಿದಳು. ಆ ಸಣ್ಣ ಮಗಳ ದುಡಿಮೆಯಿಂದಲೇ ಬಂದ ಬೊಂಬೆ ಎಂದರೆ ಎಷ್ಟೊಂದು ಹೆಮ್ಮೆಯಿರಬೇಕು ? ಆದರೆ, ಅತೀವ ಮಾನಸಿಕ ತುಮುಲದಿಂದ ಆ ಸಂತಸವನ್ನು ಆಸ್ವಾದಿಸುವಂತೆಯೇ ಇಲ್ಲ. ಮಗಳ ಸಲುವಾಗಿ ಮತ್ತು ಪಾಂಚಾಲಿಯ ಸಲುವಾಗಿ ಕೃತಕ ನಗೆಯನ್ನು ಜಾಹೀರಾತಿಗೆ ಬೀರುವಂತೆ ಬೀರಿ ಬೊಂಬೆಯನ್ನು ಕೈಗೆ ತೆಗೆದುಕೊಂಡು ''ಬಲು ಮುದ್ದಾದ ಬೊಂಬೆ ನಿನಗೆ ಹೊತ್ತು ಕಳೆಯಲು ಅನುಕೂಲವಾಯಿತು'' ಎಂದಳು.

''ಪಾಂಚಾಲೀ! ನೀನೊಬ್ಬಳೇ ಹತ್ತಿರ ಇರುವೆ. ನಿನ್ನಿಂದ ಎಷ್ಟೋ ಸಂತೋಷಪಡುತ್ತಾಳೆ ಶಾಂತಲಾ. ಇನ್ನುಳಿದ ಗೆಳತಿಯರೆಲ್ಲಾ ದೂರ ದೂರ'

''ಹೌದು, ಆಂಟೀ, ಅನುಕೂಲವಾದಾಗೆಲ್ಲಾ ಬಂದು ಹೋಗುವೆ.''

## ೧೨

ಮಧ್ಯರಾತ್ರಿ....!

ಎಲ್ಲಿಂದ ಎಲ್ಲಿಯವರೆಗೂ ಸದ್ದಿಲ್ಲದ ಶಾಂತಿಯ ಅಪರಾವತಾರ.

ಮನೆ ಮನೆಯ ದೀಪಗಳೂ ನಿದ್ರಿಸುತ್ತಿವೆ. ಜನ ಸಂಚಾರವಾಗಲೀ, ವಾಹನ ಸಂಚಾರವಾಗಲೀ ಇಲ್ಲವೇ ಇಲ್ಲ ರಸ್ತೆಯಲ್ಲಿ. ಆಗಲೇ ಹಾಸಿಗೆ ಸೇರಿದ ಗೌರೀಮಾ ನಿದ್ದೆಯಿಲ್ಲದೆ ಚಿಂತಾಮಗ್ನಳಾಗಿದ್ದಾಳೆ. ಚಿಂತೆ. ಚಿಂತೆ. ಚಿಂತೆ. ಎಷ್ಟು ಯೋಚಿಸಿದರೂ ಮುಗಿಯದ ಚಿಂತೆ. ಬೇಡ ಬೇಡವೆಂದರೂ ಹನಿಯುವ ಕಣ್ಣೀರು. ಕಣ್ಣು ಮುಚ್ಚಿದರೂ ಬಾರದು ನಿದ್ರೆ....

ಗೌರೀಮಾ ಎದ್ದು ಕಿಟಕಿಯ ಬಳಿಗೆ ಹೋದಳು. ಕೃಷ್ಣಪಕ್ಷದ ರಾತ್ರಿ. ರೇಕಾ ಚಂದ್ರಮನ ಒಡ್ಡೋಲಗದಲ್ಲಿ ಕೋಟಿ ಕೋಟಿ ನಕ್ಷತ್ರಗಳ ಸಮುದಾಯ. ಕಗ್ಗತ್ತಲೆಯಲ್ಲಿ ಗಿಡಮರಗಳ ಆಕಾರಮಾತ್ರ ದೃಷ್ಟಿಗೋಚರ. ಆಗೊಮ್ಮೆ ಈಗೊಮ್ಮೆ ನಾಯಿಗಳ ಬೊಗಳುವಿಕೆ ಕೇಳಿ ಬಂದರೆ ಅದೇ ಹೆಚ್ಚು. ಎಲ್ಲಿಂದ ಎಲ್ಲಿಯವರೆಗೂ ನೀರವ-ನಿಶ್ಶಬ್ದ.

ಹೊತ್ತು ಉರುಳಿತು. ಬ್ರಾಹ್ಮೀ ಮಹೂರ್ತ ಅಡರುತ್ತಿದೆ. ತಂಗಾಳಿಯಲ್ಲಿ ಶೈತ್ಯಮೂಡಿ ತಣ್ಣಗೆ ತೀಡಿತು.

ಗೌರೀಮಾ ಹಾಸಿಗೆ ಸೇರಿ ಹೊದ್ದು ಮಲಗಿದಳು.

ಆ ದುಪ್ಪಟಿಯಲ್ಲಿ, ಹೊದ್ದಿಕೆಯಲ್ಲಿ ಅಲ್ಲಲ್ಲಿ ತೂತುಗಳು. ಜೀರ್ಣತ ಹಾಸಿಗೆ. ಜೀರ್ಣತ ದಿಂಬು. ಸುಮಾರಾಗಿ ಸುಖಜೀವನಕ್ಕೆ ಸಾಲುವಷ್ಟು ಗಳಿಕೆ ಪತಿಯದು. ಆದರೆ, ದುರ್ನೀತಿಯ ಫಲ ಬಡತನ. ಆತ ಮನೆ ಬಿಟ್ಟುಹೋಗಿ ಆಗಲೇ ಆರು ದಿನಗಳು ಉರುಳಿದುವು. ಕೈಯಲ್ಲಿ ಕಾಸಿಲ್ಲ. ಉಗ್ರಾಣದಲ್ಲಿ ಸಾಮಗ್ರಿ ಇಲ್ಲ. ನಾಳೆ ಮಕ್ಕಳಿಗೆ ಉಣಿಸಿಕ್ಕುವ ಬಗೆ ಹೇಗೆ? ಅದು ತನ್ನ ಮುಂದಿನ ಪ್ರಶ್ನೆ. ದಿಂಬು ತೊಯ್ಯುವಷ್ಟು ಕಂಬನಿ ಸುರಿದು ಹೋಯಿತು.

ಶಾಂತಲೆಯನ್ನು ತಬ್ಬಿದರೆ ಕೈಯಿಟ್ಟಲ್ಲೆಲ್ಲಾ ಎಲುಬುಗಳ ಸ್ಪರ್ಶವೇ. ಪಾರ್ಶ್ವವಾಯು ಬಡಿಯುವ ಮುನ್ನ ಶಾಂತಲಾ ಮುದ್ದು ಮುದ್ದಾದ ದುಂಡನೆಯ ಮಗು. ಅನಂತರ ದೇಹಸ್ಥಿತಿ ಸುಧಾರಿಸಲಿಲ್ಲ. ಬಡತನ ಕಾರಣವಾಗಿ ಪೌಷ್ಟಿಕ ಆಹಾರವೂ ಸಾಲದು....ಮಗು ನಲುಗಿತು ಬಡತನಕ್ಕೆ ಸರ್ವಸಾಕ್ಷಿಯಾಗಿ. ಭಗವಂತ ಕಷ್ಟಕೊಡುತ್ತಿದ್ದಾನೆ, ಎಂದಿಗೆ ಈ ಸಂಕಷ್ಟ ಪರಿಸ್ಥಿತಿ ಹರಿಯುವುದೋ ಆತನೇ ಬಲ್ಲ....ನಿಟ್ಟುಸಿರು ಬಿಡುತ್ತ ಕಣ್ಮುಚ್ಚಿದಳು ಗೌರೀಮಾ. ತಣ್ಣನೆಯ ತಂಗಾಳಿ ಮೈ ನಡುಗುವಂತೆ ತೀಡಿದ ನಂತರವೇ ಕಣ್ಣಿಗೆ ಮಂಪರ.

ಗಂಗಾರಾಂ ಕುರ್ಚಿಯ ಮೇಲೆ ಕುಳಿತು ಹೇಳುತ್ತಿದ್ದಾನೆ,

"ಗೌರೀ....! ಇಲ್ಲಿ ಕೇಳು, ನಾನು ಕಾಸುಕಾಸನ್ನೂ ಉಳಿಸುತ್ತಿರುವುದೆಲ್ಲ ನಿಮಗಾಗಿ. ಮುಂದಿನ ನಿಮ್ಮ ಸುಖ ಜೀವನಕ್ಕಾಗಿ. ನಾನೇನೂ ಹಣ ಹಾಳು

ಮಾಡುತ್ತಿಲ್ಲ. ಶ್ಯಾಮಲೆಯ ಮದುವೆಯನ್ನು ವೈಭವದಿಂದ ಮಾಡದಿದ್ದರೆ ಕೇಳು. ಶರತ್ ಈಗ ಉಡಾಫೆ ಮಾಡುತ್ತಿದ್ದಾನೆ. ನೋಡೋಣ, ಮುಂದೆ ಹೇಗಾಗುತ್ತಾನೆ ಅಂತ.... ಅವನು ನನ್ನ ಮಗ! ನನ್ನಂತೆಯೇ ಉದ್ಧಾಮ ವ್ಯಕ್ತಿ ಆಗಲೇಬೇಕು....! ನಾನು ಹಾಗೆಂದರೆ ಒಪ್ಪುತ್ತಿ ತಾನೆ ? ಏನು ಹೇಳುತ್ತಿ ನೀನು ? ಅವನು ಒಳ್ಳೆಯ ವ್ಯಕ್ತಿ ಆದಾನೇ ?.... ಖಂಡಿತ ಆಗುತ್ತಾನೆಂಬ ನಂಬಿಕೆ ನನಗಿದೆ. ಇನ್ನು ಶಾಂತಲಾ, ಅದೊಂದು ವ್ಯರ್ಥ ಬದುಕು. ಕಾಹಿಲೆ ಬಿದ್ದಾಗಲೇ ಸತ್ತಿದ್ದರೆ ಒಳ್ಳೆಯದಾಗಿತ್ತು. ಅದರಿಂದ ಅವಳಿಗೇ ಆಗಲೀ, ಇನ್ನಾರಿಗೇ ಆಗಲೀ ಸುಖವಿಲ್ಲ. ಭಗವಂತ ಆಯಸ್ಸು ನೀಡುವುದು ವ್ಯರ್ಥ ಜೀವಿಗಳಿಗೆ. ನೀನಿರುವ ತನಕ ಹಾಗೂ ಹೀಗೂ ಕಳೆಯುತ್ತೆ ಬದುಕು. ಅನಂತರ ಯಾರು ಕೇಳಬೇಕು ? ಅದೇ ನನಗೆ ಚಿಂತೆ-ವ್ಯಸನ.

"ಗೌರೀ....! ನನ್ನ ಗೌರೀ! ನಿನ್ನಿಂದ ನನ್ನ ಬದುಕು ಬಂಗಾರ.... ಮರುಭೂಮಿಗೆ ಜಲಧಾರೆಯಾಗಿ ಬಂದವಳು ನೀನು. ನನ್ನ ಹೃದಯ ಧರಿತ್ರಿಯನ್ನು ಉತ್ತಿ ಬಿತ್ತಿದವಳು ನೀನು. ನನ್ನ ಜೀವನ ಜ್ಯೋತಿಯನ್ನು ಬೆಳಗಿದವಳು ನೀನು....ನಿನ್ನಂತಹ ಹೆಣ್ಣು ವಿರಳ. ಅತಿ ವಿರಳ. ನಿನ್ನ ಬಿಟ್ಟು ಒಂದು ಕ್ಷಣವೂ ಇರಲಾರೆ ನಾನು. ಜನ್ಮ ಜನ್ಮಾಂತರಗಳ ಸಂಯೋಗದಿಂದ ನಿನ್ನ ಸಹವಾಸ ನನಗೆ ದೊರಕಿದೆ. ಅದು ಚಿರಾಯುವಾದರೆ ಸಾಕು. ನನಗೆ ನಿನ್ನ ಸಹವಾಸದಲ್ಲಿ ಖಂಡಿತ ಸುಖಶಾಂತಿ ಲಭಿಸುತ್ತದೆ. ನಿನ್ನ ಸಮಕ್ಷಮದಲ್ಲಿ ಶಾಂತಿಯಿಂದ ಸಾಯಲೂ ಬಹುದು.... ಜೀವಿಸಲೂ ಬಹುದು.

ಆದ್ದರಿಂದ ಗೌರೀ!

ಗೌರೀಮಾ ಆ ಕ್ಷಣವೇ ತಟ್ಟನೆ ಕಣ್ಣು ತೆರೆದಳು ನೋಡಿದರೆ ಎಲ್ಲಿಯ ಮೋಹ-ಪ್ರೇಮಗಳ ಮೋಡಿ? ಎಂತಹ ನಯವಂತಿಕೆ ? ಆತನಲ್ಲಿ ಎಂದೆಂದೂ ಕೇಳದಂತಹ-ಕಾಣದಂತಹ ವಿಚಾರಧಾರೆ. ಆದರೆ, ಆದರೆ ಪಾಪದ ಮಗು ಶಾಂತಲೆಯ ಮೇಲೆ ಏಕೆ ಅಷ್ಟೊಂದು ತಾತ್ಸಾರ? ಅವಳ ಮೇಲೆ ದಯೆತೋರಬೇಕೆ ಹೊರತು ತಾತ್ಸಾರವಲ್ಲ....ಥೇ! ತುಂಬ ಅನ್ಯಾಯ!

ದೂರದಲ್ಲೆಲ್ಲೋ ಕೋಳಿ ಕೂಗಿತು ಕೊಕ್ಕೋಕೋ!

ಶಾಂತಲಾ ಕನವರಿಸುತ್ತ ಅಮ್ಮಾ! ಅಪ್ಪ ಬಂದರು! ಎನ್ನುತ್ತಿದ್ದಾಳೆ. ಗೌರೀಮಾ ಅವಳನ್ನು ತಬ್ಬಿ ಹಿಡಿದು "ಮಲಗು ಮಗುವೇ!" ಎಂದಳು.

ಶಾಂತಲಾ ಪುನಃ ನಿದ್ರಾದೇವಿಯ ಮಡಿಲಲ್ಲಿ ಹಾಯಾಗಿ ನಿದ್ದೆ ಹೋದಳು.

* * *

"ಅಮ್ಮಾ....!"

"ಏನಮ್ಮಾ ?"

"ಅಪ್ಪ ಘೋರ್ಪಡೆಯೊಂದಿಗೆ ಸುತ್ತಿಕೊಂಡಿದ್ದಾರಂತೆ. ಇಂದು ನನ್ನ ಬಾಸ್ ಹೇಳಿದರು."

"ಹಾಗೇನೂ ? ಸಣ್ಣಸಣ್ಣ ವ್ಯವಹಾರಕ್ಕೆಲ್ಲಾ ಸಿಟ್ಟುಗೊಂಡರೆ ಹೇಗೆ ? ಆಗಲೇ ಅರ್ಧ ಆಯಸ್ಸು ಕಳೆಯಿತು. ಆದರೂ ಸಿಟ್ಟು ಹರಿಯದಿದ್ದರೆ ಹೇಗೆ ಮಗಳೇ ? ನಾಲ್ಕು ಮಂದಿಯಲ್ಲಿ ಮಾನಹೋಗುವ ಪ್ರಸಂಗಕ್ಕೆ ಅವಕಾಶ ಮಾಡಿಕೊಡುವುದು ಎಂತಹ ತಪ್ಪು!"

"ನಾಳೆ ಆಫೀಸಿಗೆ ಬರಬೇಕಲ್ಲವೇ ? ಒಂದು ವಾರ ರಜೆ ಕಳೆಯಿತು, ಅನಂತರ ಮನೆಗೆ ಬಂದಾರು ನೋಡೋಣ."

"ದೇವರೇ ಅವರಿಗೆ ಬುದ್ಧಿ ಕೊಡಬೇಕು."

"ಇಂದು ನನ್ನ ಪಗಾರ ಬಂದಿದೆ. ನೂರು ರೂಪಾಯಿ ತೆಗೆದುಕೊಳ್ಳಿ. ಏನೇನು ಸಾಮಾಗ್ರಿ ಬೇಕೋ ತಂದರೆ ಒಲೆ ಹಚ್ಚಬಹುದು."

ಅಂಗಡಿ ಪಕ್ಕದ್ದೆ. ಗೌರೀಮಾ ಹೋಗಿ ಬೇಕುಬೇಕಾದ ಸಾಮಗ್ರಿ ತಂದಳು. ಅಡಿಗೆಗೆ ಕೈಹಚ್ಚುವ ಮುನ್ನ ತಂಗಿಯನ್ನೊಮ್ಮೆ ಮುದ್ದಿಸಿ ಅವಳ ಬೊಂಬೆಯ ಬಗ್ಗೆ, ಕರವಸ್ತ್ರಗಳ ಬಗ್ಗೆ, ಪಾಠದ ಬಗ್ಗೆ ಮಾತಾಡಿ ವಿಚಾರ ವಿನಿಮಯ ಮಾಡಿಕೊಳ್ಳದೆ ಇರುವುದು ಸಾಧ್ಯವೇ ಇಲ್ಲ. ತಂಗಿ ಎಂದರೆ ತಂಗಿ-ತನ್ವಂಗಿ.

"ಶ್ಯಾಂ! ನಾನು ನನ್ನ ಗೆಳತಿಯರಿಗೊಂದು ಪಾರ್ಟಿಕೊಡುವ ಯೋಚನೆಯಲ್ಲಿರುವೆ. ನನ್ನ ಬೊಂಬೆಗೊಂದು ಹೆಸರಿಡುವುದೂ ಉಂಟು. ಅದರೊಂದಿಗೆ ಪಾರ್ಟಿಯೂ ಆಗಲಿ. ಪಾಂಚಾಲಿಯೊಂದಿಗೆ ನನ್ನ ಗೆಳತಿಯರನ್ನು ಕರೆಯಲು ಹೇಳಿರುವೆ. ಮುಂದಿನ ಸೋಮವಾರ ಆಗಬಹುದು ಎಂದಿದ್ದಾಳೆ ಪಾಂಚಾಲಿ. ನೀನು ಏನು ಹೇಳುತ್ತಿ ಅಕ್ಕಾ? ಒಂದು ಪಾರ್ಟಿಗೆ ಹನ್ನೆರಡು ರೂಪಾಯಿ ಸಾಕೇ ?"

"ಸಾಕು. ಎಷ್ಟು ಮಂದಿ ಮಕ್ಕಳನ್ನು ಕರೆಯಬೇಕು ?"

"ಆರೇಳು ಮಂದಿ....ಪಾಂಚಾಲಿಗೆ ಹೆಸರು ಕೊಟ್ಟಿರುವೆ. ಅವರೆಲ್ಲಾ ನಾನು ಕಾಹಿಲೆ ಬಿದ್ದಾಗ ಬಂದು ಹೋಗಿದ್ದರು. ಈಚೆಗೆ ಯಾರೂ ಬರಲಿಲ್ಲ. ದೂರ ದೂರದಲ್ಲಿದ್ದಾರೆ. ಬರುವುದು ಕಷ್ಟವೇ."

"ಆಗಲಿ, ಶಾಂತೀ ಕರೆಯೋಣ, ಅದಕ್ಕೇನು ?"

"ಅಪ್ಪ ಬಂದರೆ ಏನಂತಾರೋ...."

"ನಿನ್ನದೇ ದುಡ್ಡು ತಾನೇ ? ಹೇಳೋಣ...."

"ಭಾನುವಾರದೊಳಗೆ ಇನ್ನೂ ಎರಡು ಮೂರು ಕರವಸ್ತ್ರ ಹೊಲಿಯಬಹುದು."

"ಪಾರ್ಟಿಗೆ ಹನ್ನೆರಡು ರೂಪಾಯಿ ಸಾಕು. ನಾನೆಲ್ಲಾ ಏರ್ಪಾಡು ಮಾಡುವೆ."

"ಏನೆಂದು ಹೆಸರಿಸೋಣ ಅಕ್ಕಾ?" ಮ್ಲಾನ ಮುಖಬಿಂಬದಲ್ಲಿ ಸಂತಸದ ಕಳೆ ಬೆಳಗಿತು.

"ನಿನಗೇನಿಷ್ಟ ಹೇಳು ?"

"ನಾನು ಆವೊತ್ತಿನಿಂದ ಯೋಚಿಸಿದ್ದು 'ಶರ್ಮಿಳಾ' ಎಂದು. ಚೆನ್ನಾಗಿದೆಯೇ ನಿನಗೇನೆನಿಸುತ್ತೆ ಹೇಳು ? ಇದು ಸರಿಹೋಗುತ್ತದೆಯೇ ಇಲ್ಲವೇ ?"

"ಓ! ಚೆನ್ನಾಗೇ ಇದೆ. ಶಾಂತಲಾ-ಶರ್ಮಿಳಾ ತುಂಬಾ ಹೊಂದುತ್ತೆ."

"ಹಾಗಾದರೆ ಇದೇ ಇರಲೇ ?"

"ಓ! ಖಂಡಿತ!" ಎರಡೂ ಕೈಗಳಿಂದ ಅಪ್ಪಿ ಮುದ್ದಿಟ್ಟುಕೊಂಡಳು ಶ್ಯಾಮಲಾ.

* * *

ಶರತ್ ಓಡೋಡಿ ಬಂದ. ಪಾದರಕ್ಷೆಗಳ ಸದ್ದು ಪಟ. ಪಟ. ಪಟ. ಪಟ.

ಬಾಗಿಲ ಕಡೆ ದೃಷ್ಟಿ ನೆಟ್ಟಳು ಶಾಂತಲಾ. ಪಟ. ಪಟ ಸದ್ದು ಕರ್ಣಪಟಲದ ಮೇಲೆ ಮೊರೆಯುತ್ತಲೇ ಇದೆ. ಹೆಜ್ಜೆಗಳು ಹತ್ತಿರವಾದಷ್ಟೂ ಸದ್ದಿನ ಮೊಳಗು ಹೆಚ್ಚು; ನಿಶ್ಶಬ್ದತೆಯ ಮೇಲೆ ಸುತ್ತಿಗೆಯಿಂದ ಹೊಡೆಯುವಂತೆ ಕೆಲವೇ ಗಳಿಗೆಯಲ್ಲಿ ಶರತ್ ದೃಷ್ಟಿಗೆ ಬಿದ್ದ.

"ಏಕಪ್ಪಾ, ಓಡಿ ಬರುತಿದ್ದೀ?"

"ಅಮ್ಮಾ ಎಲ್ಲಿ?"

ಮಗನ ಸೊಲ್ಲು ಕೇಳಿಸುತ್ತಲೂ ಒಳಕೋಣೆಯಿಂದ ಹೊರಬಂದಳು ತಾಯಿ.

"ಏನಪ್ಪಾ ಶರತ್?"

"ಅಪ್ಪ ಸಿಕ್ಕಿದ್ದರು! ಏಕೆ ಮನೆಗೆ ಬರಲಿಲ್ಲ ಎಂದೆ. ಫೋರ್ಪಡೆ ಜೊತೆಯಲ್ಲಿ ಮದರಾಸಿಗೆ ಹೋಗಿದ್ದೆ. ಸಂಜೆ ಮನೆಗೆ ಬರುವೆ! ಎಂದರು" ಹಿಹ್ಹಿಹ್ಹೀ ಎಂದು ನಗುತ್ತ ಹೇಳಿದ.

"ಶ್ಯ್! ಹೀಗೆಲ್ಲಾ ಹೀಯಾಳಿಕೆಯ ನಗು ನಗಬೇಡ. ಇನ್ನು ಮುಂದೆ ಗಂಭೀರವಾಗಿರು. ಅವರು ಏನು ಬೇಕಾದರೂ ಅಂದುಕೊಳ್ಳಲಿ. ನೀನು ಮಾತ್ರ ತುಟಿ ಬಿರಿಯಬಾರದು, ಕಂಡೆಯಾ! ಅಂತೂ, ಬರುತ್ತಾರಲ್ಲ ಅದೇ ಸಾಕು." ಎರಡೂ ಕೈಗಳಿಂದ ಎದೆಯನ್ನು ಒತ್ತಿ ಹಿಡಿದುಕೊಂಡಳು ಸ್ವಾಮಿನಿ. ಕಣ್ಣುಗಳಲ್ಲಿ ತುಂಬಿದ್ದ ಶೋಕಛಾಯೆ ಅಳಿದು ಸಂತಸದ ಕಳೆ ಬೆಳಗಿತು.

ಶಾಂತಲೆ ಹುಬ್ಬೆತ್ತಿ ನೋಡುತ್ತಲೇ ಇದ್ದಾಳೆ. ಎಲ್ಲೋ ಅಲಕ್ಷಿತ ಸಾನಂದದ ಕಳೆ ತೆಕ್ಕನೆ ಬಂದು ಮುಖ ಬಿಂಬವನ್ನು ಆವರಿಸಿತು. ಶೀರ್ಣಿತ ಮುಖಬಿಂಬದಲ್ಲಿ ಮುಗುಳ್ನಗೆಯನ್ನು ಬೀರಿ, "ಇನ್ನು ಅವರ ಕೈ ಹಿಡಿದುಕೊಳ್ಳಬೇಡವೋ ಶರತ್! ಅಪ್ಪನಿಗೆ ಸಿಟ್ಟು ಬಂದರೆ ತಡೆಯೋರ್‍ಯಾರು ? ಅವರು ಹೇಗಾದರೂ ಅಂದುಕೊಳ್ಳಲಿ. ನೀನು ಅವರ ತಂಟೆಗೆ ಹೋಗಬೇಡ ಆಯಿತೆ ?" ಎಂದಳು ಅಂದಿನ ಪ್ರಕರಣವನ್ನು ಜ್ಞಾಪಿಸಿಕೊಳ್ಳುತ್ತ.

"ಹೋಗ್ಹೋಗು! ನೀವೆಲ್ಲಾ ಹೆದರುಪುಕ್ಕಲು ಅಂದರೆ ನಾನು ಹೆದರುವೆನೆ ? ಅವರನ್ನು ಸರಿದಾರಿಗೆ ತರದಿದ್ದರೆ ಕೇಳು!"

"ಬೇಡಪ್ಪಾ...." ಎಂದ ಗೌರೀಮಾ ಪುನಃ "ಈ ಗಲಾಟೆಗಳು ಪುನರಾವರ್ತಿ ಆಗಬಾರದು ಮಗೂ!" ಎಂದಳು ಬೇಡಿಕೆಯ ದನಿಯಲ್ಲಿ.

"ಅಮ್ಮ ಹೇಳಿದ್ದು ಸರಿ! ನೀನು ದುಡುಕಬಾರದು. ಹಿಂದೆಲ್ಲಾ ನಮಗೆ ಎಷ್ಟು ಬಾರಿ ಹೊಡೆಯಲಿಲ್ಲ ? ನೀನೂ ಎಷ್ಟು ಬಾರಿ ಏಟು ತಿನ್ನಲಿಲ್ಲ ? ಅಮ್ಮನಿಗೂ ಎಷ್ಟು ಬಾರಿ ಹೊಡೆದಿದ್ದಾರೆ....! ಇದೆಲ್ಲಾ ಹೊಸದೇ ? ನೀನು ಮಾತ್ರ ಅಪ್ಪನ ಎತ್ತರಕ್ಕೆ ಬೆಳೆದೆಯೆಂದು ಎದುರು ನಿಲ್ಲುವುದು ಸರಿಯೆ ? ದೊಡ್ಡವರ ರೀತಿ ದೊಡ್ಡವರಿಗೆ. ಚಿಕ್ಕವರ ರೀತಿ ಚಿಕ್ಕವರಿಗೆ. ನೀನು ಕೋಪಿಸಿಕೊಳ್ಳುವುದರಿಂದ ಆಗುವುದು ಅನಾಹುತವೇ!"

ಆ ಪುಟ್ಟ ಬಾಲಿಕೆಯ ಬಾಯಿಯಲ್ಲಿ ವಾಕ್ಯಸರಣಿ ಹರಿಯುವಾಗ ಎಲ್ಲೋ ಪರಿತ್ಯಕ್ತ ಶೋಡಷಕಳೆ ಮುಖ ಬಿಂಬವನ್ನು ಆವರಿಸಿದಂತೆ ಒಂದೇ ಒಂದು ಗಳಿಗೆ ಬೆಳಗಿ ಮಾಯವಾಯಿತು.

* * *

ಗೌರೀ.... ಗೌರೀ!"

ತಲೆ ಬಾಗಿಲಲ್ಲಿ ಪತಿಯ ಕರೆ! ಆ ದನಿಯನ್ನು ಕೇಳಿ ಹೃದಯವೇ ಬಾಯಿಗೆ ಬಂದಷ್ಟು ಸಂತಸ ಮಡದಿಗೆ. ಬೇಗ ಹೋಗಿ ಕದ ತೆರೆದಳು. ಘೋರ್ಪಡೆಯೊಂದಿಗೆ

ಬಂದಿದ್ದಾನೆ ಗಂಗಾರಾಂ! ಏಳು ದಿನಗಳ ನಂತರ ಪತಿ ಸಂದರ್ಶನ ಏನು ಹೇಳ ಬೇಕೋ, ಹೇಗೆ ಮಾತಾಡಿಸಬೇಕೋ ತಿಳಿಯಲಿಲ್ಲ.

"ಘೋರ್ಪಡೆ ಬಂದಿದ್ದಾರೆ. ಶ್ಯಾಮಲೆಯ ಕೈಯಲ್ಲಿ ಕಾಫಿ ಕಳುಹಿಸು."

ಶ್ಯಾಮಲೆಯಿನ್ನೂ ಆಫೀಸಿನಿಂದ ಬಂದೇ ಇರಲಿಲ್ಲ. ಅಂದಿನ ರಾದ್ಧಾಂತವೇ ಸಾಕಾಗಿತ್ತು. ಇನ್ನು ಹೇಳುವುದು ಹೇಗೋ.... ಪ್ರಶ್ನೆ ಮನದಲೆಗಳಲ್ಲಿ ಸುಳಿ ಸುತ್ತುತ್ತಲೇ ಇದೆ. ಏನೊಂದೂ ಹೇಳದೆ ಹಿಂದಿರುಗಿದಳು ಗೌರೀಮಾ. ವರಾಂಡ ದಲ್ಲಿದ್ದ ಕುರ್ಚಿಗಳ ಮೇಲೆ ಕುಳಿತು ಅವರಿಬ್ಬರೂ ಮಾತು ಕತೆ ಬೆಳೆಸಿದ್ದರು. ಪತಿಗಾಗಿಯೇ ಕಾಫಿಪುಡಿ ಸಕ್ಕರೆ ಮೀಸಲಿಟ್ಟಿರುತ್ತಾಳೆ ಗೌರೀಮಾ. ಶರತ್ ಒಳಕೋಣೆಯಲ್ಲಿದ್ದ ತಂದೆಯ ಸೊಲ್ಲು ಕೇಳುತ್ತಲೂ ಹಿತ್ತಲ ಬಾಗಿಲಿನಿಂದ ಮೆಲ್ಲಗೆ ಜಾರಿಕೊಂಡ. ತುಟಿಗಳಲ್ಲಿ ತುಂಟನಗು ಮಿಂಚಿ ಮಾಯವಾಯಿತು.

ಕಾಫಿ ತಯಾರಾಗುವುದರೊಳಗಾಗಿ ಶ್ಯಾಮಲಾ ಬಂದರೆ ಸಾಕು.... ಎಂದು ಮೊರೆಯಿಟ್ಟಿತು ಮಾತೃಹೃದಯ. ಕಾಫಿ ತಯಾರಾಯಿತು. ಬಸಿ ಬಟ್ಟಲನ್ನು ಜೋಡಿಸಿ ಕಾಫಿ ಬೊಗ್ಗಿಸಿದರೂ ಮಗಳ ಸುಳಿವಿಲ್ಲ. ಶಾಂತಲಾ ಬೂಟುಕಾಲನ್ನು ಮೆಲ್ಲಮೆಲ್ಲಗೆ ಮುಂದಿಡುತ್ತ ಅಡಿಗೆ ಮನೆಗೆ ಬಂದು ಹಣಿಕಿ ಪಿಸುದನಿಯಲ್ಲಿ ನುಡಿದಳು "ಅಪ್ಪಾ ಇತ್ತಲೇ ನೋಡುತ್ತಿದ್ದಾರೆ. ಅಕ್ಕ ಬರಲಿಲ್ಲ. ನೀವೇ ಕೊಟ್ಟುಬಿಡಿ." ಎಂದಳು. ಹೆದರಿ ಹೈರಾಣದಂತೆ ಮುಖಬಿಂಬ ನಿವರ್ಣವಾಗಿತ್ತು.

"ಆಗಲಿ, ಕೊಟ್ಟು ಬರುವೆ...."

ತಾನೇ ಕಾಫಿಯನ್ನು ಕೊಂಡೊಯ್ದಳು ಗೌರೀಮಾ.

"ಬರಲಿಲ್ಲವೇ ಶ್ಯಾಂ ?"

"ಇಲ್ಲ...."

ಘೋರ್ಪಡೆ ಕಾಫಿಯನ್ನು ಕೈಗೆ ತೆಗೆದುಕೊಂಡು "ಇಷ್ಟು ಬೇಗನೆ ಬರಲಾಗುವುದೇ ? ಇನ್ನೂ ಐದೂವರೆ ಗಂಟೆ. ಆಫೀಸು ಮುಗಿಯುವುದೇ ಈಗ. ಅಲ್ಲಿಂದ ಹೊರಟು ಬರಬೇಕಲ್ಲ. ಬಸ್ಸಿಗಾಗಿ ಕಾಯಬೇಕು. ತಕ್ಷಣ ಬರುವುದು ಹೇಗೆ? ಸ್ವಲ್ಪ ತಾಳಿಕೊ" ಎಂದ.

ಕಾಫಿ ರುಚಿಯಾಗಿತ್ತೇನೋ ಸ್ವಲ್ಪ ಸ್ವಲ್ಪವಾಗಿ ಹೀರಿದ ಘೋರ್ಪಡೆ.

ಸ್ವಲ್ಪಹೊತ್ತು ಉರುಳಿತು. ಕ್ಲಬ್ಬಿನ ಹವ್ಯಾಸದತ್ತ ಮನಸ್ಸು ವಾಲಿದುದರಿಂದ ಇಬ್ಬರೂ ಹೊರಟು ಹೋದರು. ಗೌರೀಮಾ ಹಿಡಿದಿಟ್ಟಿದ್ದ ಉಸಿರನ್ನೆಲ್ಲಾ ಒಮ್ಮೆಗೇ ಹೊರಹಾಕಿ ಅಡಿಗೆ ಮನೆಯಿಂದ ಹೊರಬಂದಳು.

"ಅಮ್ಮಾ! ಘೋರ್ಪಡೆ ಬಂದಾಗಲೆಲ್ಲಾ ಅಕ್ಕನನ್ನು ಕೇಳುವುದೇಕೆ ಅಪ್ಪ ?"

"ಏನೋ.... ನನಗೊತ್ತಿಲ್ಲ. ಅವರವರೊಳಗೆ ಏನೇನು ವಿಚಾರ ನಡೆದಿದೆಯೋ... ಹೇಗೆ ಹೇಳಲಿ ಮಗೂ....!"

"ಅಂದಿಂದಿಗೂ ಹಾಗೆಯೇ....ಅವರು ಬಂದಾಗಲೆಲ್ಲಾ ಅಕ್ಕನನ್ನು ಕೇಳದೇ ಇಲ್ಲ."

"ಸಧ್ಯ, ಮನೆಗೆ ಬಂದರಲ್ಲ, ಸಾಕು ಬಿಡು."

"ಬರದಿದ್ದರೆ ಎಷ್ಟು ದಿನ ಇನ್ನೊಬ್ಬರ ಮನೆಯಲ್ಲಿರಲು ಸಾಧ್ಯ ?"

"ಅದು ಸರಿಯೆ." ನಿಟ್ಟುಸಿರು ಬಿಟ್ಟಳು ಗೌರೀಮಾ.

* * *

ಶಕೀಲೆಯ ಪತ್ರ.

....ಕಳೆದವಾರ ನಮ್ಮ ಮನೆಯಲ್ಲಿ ಒಂದು ಪಾರ್ಟಿ. ಇಲ್ಲಿ ಕೂಡಿದ ಹನ್ನೆರಡು ಮಂದಿಯೂ ಲೋಕೇಶ್ ಆತ್ಮೀಯ ಬಳಗ. ಅಂದರೆ ತಿಳಿಯಿತಲ್ಲ, drinking partners! ತಾನು ತಂದದ್ದು ರಂಗುರಂಗಿನ ವಿದೇಶೀ ಮಧ್ಯದ ಶೀಸೆಗಳು ಮತ್ತು ಕಾರ-ಚೌಚೌ ಮಾತ್ರ. ಉಳಿದುದೆಲ್ಲಾ ನನ್ನದೇ. ಅಂದು ವಾರದ ರಜೆ. ನನಗೆ ನನ್ನ ಗೆಳತಿಯರನ್ನು ಕರೆದಿದ್ದರೆ ಒಳ್ಳೆಯದಿತ್ತು ಎಂಬ ಯೋಚನೆ. ಆದರೆ, ಕುಡಿದು ಅಸಂಬದ್ಧವಾಗಿ ವರ್ತಿಸುವವರ ಕೂಟಕ್ಕೆ ನನ್ನ ಗೆಳತಿಯರ ಸೇರ್ಪಡೆ ಏನೇನೂ ಸರಿಯಲ್ಲ. ಗೆಳತಿಯರಿಗಾಗಿಯೆ ಬೇರೆ ಪಾರ್ಟಿ ಎಂದರೆ ನನ್ನ ಆದಾಯವನ್ನೂ ಗಮನಿಸಬೇಕಲ್ಲ.

ಇನ್ನು ಇದನ್ನೂ ಹಚ್ಚಿಕೊಂಡರೆ ನನ್ನ ಕೈಯೇ ಮೊಟಕು.

ಎಂದಾದರೊಮ್ಮೆ ಬರ್ತ್ ಡೇ ಪಾರ್ಟಿ ಒಬ್ಬರಿಗೊಬ್ಬರು ಕೊಟ್ಟು ಕೊಳ್ಳುವುದುಂಟು. ಅದಷ್ಟೇ ನಾವು ಗೆಳತಿಯರಿಗಾಗಿ ನೀಡುವ ಪಾರ್ಟಿ. ಅದಕ್ಕಿಂತ ಹೆಚ್ಚಿನ ಖರ್ಚುವೆಚ್ಚ ನಾನು ಭರಿಸಲಾರೆ. ಅದರಿಂದಾಗಿ ನನ್ನ ಗೆಳತಿಯರು ನನ್ನನ್ನು ಅವರ ಮನೆಯ ಪಾರ್ಟಿಗೆ ಕರೆದಾಗ ನಾನು ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ನಾನವರಿಗೆ ಪ್ರತಿಯಾಗಿ ಪಾರ್ಟಿ ಕೊಡಲಾರೆ. ಆರ್ಥಿಕ ಸ್ಥಗಿತ ಮತ್ತು ಸಹಾಯ ಹಸ್ತಗಳು ಇಲ್ಲದ ಕಾರಣ ಪಾರ್ಟಿ ಕೊಡುವುದು ಸಾಧ್ಯವೂ ಇಲ್ಲ. ಮನೆಗೆಲಸಕ್ಕೆ ಆಳು ಕರೆಯುವ ಶಕ್ತಿಯೂ ನನಗಿಲ್ಲ. ಲೋಕೇಶ್ ಹಣ ಪೋಲು ಮಾಡುವುದನ್ನು ನೋಡಲಾರದೆ ಒಂದು ಮನೆಯನ್ನು ಕೊಂಡುಕೊಳ್ಳಿ. ಕೊನೆಗಾಲಕ್ಕೊಂದು ಕುಟೆ ಇರಲಿ ಎಂದು ಸಾರಿ ಸಾರಿ ಹೇಳುತ್ತಿರುವೆ. ಆದರೆ ಅದೆಲ್ಲಾ ಗೋರ್ಕಲ್ಲ ಮೇಲೆ

ಮಳೆ ಕರೆದಂತೆ ಸರ್ವಜ್ಞ ಆಗುತ್ತಿದೆ. Character is like a tree and reputation like its shadow, ಎಂಬುದನ್ನು ಕಲಿತವರು ಅರಿತುಕೊಳ್ಳ ಬಾರದೇ? ಎಂದಿಗೆ ನನ್ನ ಸಂಕಟ ಪರಿಹಾರವಾಗುವುದೋ ತಿಳಿಯುತ್ತಿಲ್ಲ. ಒಂದು ಕಾಲದಲ್ಲಿ ಹೇಳಿದುದನ್ನು ಕೇಳಿಕೊಂಡು ಚೆನ್ನಾಗಿ ಓದುತಿದ್ದ ಮಕ್ಕಳು ಈಚೀಚೆಗೆ ಹಿಡಿಯುತ್ತಿರುವುದು ದುರ್ಮಾರ್ಗ. ಸದಾ ಆಟ, ಊಟ, ಬೀದಿ ಅಲೆಯೋಣ, ಸಿಟ್ಟು, ಒರಟುತನ ಇವುಗಳಲ್ಲಿ ನಿಸ್ಸೀಮರಾಗುತ್ತಿದ್ದಾರೆ. ಮೊದಲಾದರೆ ಚಿಕ್ಕವರು, ಎರಡು ಏಟು ಕೊಟ್ಟರೂ ನಡೆಯುತ್ತಿತ್ತು. ಈಗ ಬೆಳೆದು ನಿಂತ ಮಕ್ಕಳಿಗೆ ಮಾಡುವುದೇನು ? ತಂದೆಯ ನಿರ್ಲಕ್ಷ್ಯ ಮಕ್ಕಳಿಗೆ ಪ್ರಚೋದನೆ. ತೇ ಧನ್ಯಾಃ ಪುಣ್ಯ ಭಾಜಸ್ತೇ ತೈಸ್ತೀರ್ಣಃ ಕ್ಲೇಶಸಾಗರಃ ಎನ್ನುತ್ತದೆ ಸುಭಾಷಿತ. ಬಹುಶಃ ಆ ಧನ್ಯತೆ ಎಂಬುದು ನನ್ನ ಹಣೆಯಲ್ಲಿ ಬರೆಯಲಿಲ್ಲವೇನೋ?....ಎನಿಸಿದಾಗ ಮನಸ್ಸಿಗೆ ತುಂಬ ದುಃಖವಾಗುತ್ತದೆ; ಒಮ್ಮೊಮ್ಮೆ ಕೆಲಸ ಮಾಡಲೂ ಮನಸ್ಸು ಬರುವುದಿಲ್ಲ. ಆದರೆ.... ಆದರೆ ನಾನು ಯಾವ ಕ್ರಮವನ್ನೂ ಕೈ ಕೊಳ್ಳಲಾರದ ಅಸಹಾಯಕ ಸ್ಥಿತಿಯಲ್ಲಿರುವೆ. ಕೆಲಸ. ಕೆಲಸ. ಕೆಲಸ. ಮಾಡಿ ಮುಗಿಸಲಾಗದ ಕೆಲಸ. ಮೂವರಿಗೂ ನಿಮ್ಮ ಬಟ್ಟೆಗಳನ್ನಾದರೂ ಒಗೆದುಕೊಳ್ಳಿರಿ. ಎಂದರೆ ಕಿವಿಗೊಡುವರುಂಟೇ ? ಒಂದು ಬಟ್ಟೆ ಮಿಷರ್ ತಂದುಕೊಡಿ ಎಂದು ಬಾಂಬೆಗೆ ಬಂದಾಗಿನಿಂದ ಕೇಳಿ ಕೇಳಿ ಸಾಕಾಗಿ ಈಗ ನಿಲ್ಲಿಸಿರುವೆ. ಇದು ನನ್ನ ಪಾಡು. ಭಾನುವಾರ ಬಂತು ಎಂದರೆ ಬೆನ್ನು ಮುರಿಯುವ ಕೆಲಸ. ಹೆಚ್ಚಿನ ಸೌಕರ್ಯ ಒದಗಿಸಿಕೊಳ್ಳಲಾಗದ ಅಸಹಾಯಕ ಸ್ಥಿತಿ. ಬಹುಶಃ ನಮ್ಮ ಜನ್ಮ ನಕ್ಷತ್ರ ತುಂಬಾ ಕೆಟ್ಟದ್ದಿರಬೇಕು. ಅದಕ್ಕೇ ಎಲ್ಲರಿಗೂ ಒಂದಲ್ಲ ಒಂದು ತೊಂದರೆ. ಇನ್ನೂ ಏನೇನೋ ಹೇಳುವುದಿತ್ತು....ಅಷ್ಟು ಸಮಯವೇ ಇಲ್ಲ. ಆಫೀಸಿಗೆ ಹೊತ್ತಾಯ್ತು ಹೊರಡುವೆ. ಚೀರಿಯೋ....

* * *

ಪಂಡರೀ ಜೋಲು ಮುಖ ಹಾಕಿಕೊಂಡು ಆಫೀಸಿಗೆ ಬಂದಾಗ ಎಲ್ಲರ ನೋಟವೂ ಅವಳ ಕಡೆಗೆ. ಒಂದು ವಾರ ರಜೆ ಹಾಕಿದ್ದ ಅವಳು ಕೆಲಸಕ್ಕೆ ಬಂದುದು ಇಂದೇ. ತನ್ನ ಬಗ್ಗೆ ಎಲ್ಲರಿಗೂ ಕುತೂಹಲವಿದೆ ಎಂದು ಮುಗುಳ್ನಗೆ ನಗಲು ಪ್ರಯತ್ನಿಸಿದರೆ ಹೊಮ್ಮಿದುದು ಜಾಹೀರಾತಿಗೆ ಬೀರುವಂತಹ ಕೃತಕ ನಗೆ. ಅಷ್ಟರಿಂದಲೇ ಎಲ್ಲರಿಗೂ ಅರ್ಥವಾಯಿತು ಅವಳ ಸೋಲು. ಕೇಳಲೋ ಬೇಡವೋ ಎಂಬ ಜಿಹಾಸೆ ಮನದಲ್ಲಿದ್ದರೂ ಪ್ರಸಂಗೋಚಿತವಾಗಿ ಕೇಳಿದಳು ಶಾರದಾ ''ಏನಾಯ್ತಮ್ಮಾ ನಿನ್ನ ಇಂಟರ್‌ವ್ಯೂ?''

ಆ ಮಾತಿಗೆ ಏನುತ್ತರ ಬರುವುದೋ ಎಂಬ ಕುತೂಹಲ ಪುರುಷ ವರ್ಗಕ್ಕೂ.

"ಏನೂ ಅಗಲಿಲ್ಲ." ನಿರಾಶೆಯ ಗೋಣ ಆಡಿಸಿದಳು ಅವಳು.

ಆಸೆಯ ಕುಂಡ ಕುಸಿದು ಬಿದ್ದು, ನಿರಾಸೆಯ ಝುರಿ ನರನಾಡಿಗಳು ಸೀಳುಂತೆ ದೇಹದಾದ್ಯಂತ ಹರಿದಾಡುತಿತ್ತು. ತನ್ನನ್ನು ತಾನು ನಿಗ್ರಹಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರೂ ಸಲ ಸಲಕ್ಕೂ ಅವಳು ಅನುಭವಿಸುತ್ತಿದ್ದುದು ಸೋಲನ್ನೆ.

"ಅತಿ ಆಸೆ ಗತಿ ಗೇಡು; ಎಂಬುದು ತಿಳಿಯದೇ? ನೀನು ಮೊಟ್ಟ ಮೊದಲಾಗಿ ಅಷ್ಟೊಂದು ಆಸೆ ಇಟ್ಟುಕೊಳ್ಳಬಾರದಿತ್ತು."

"ಸೋಲೋಂದೇ ಅಲ್ಲ, ನನ್ನನ್ನು ಮೋಸಗೊಳಿಸುವ ಹಂಚಿಕೆ. ನಾನು ಪ್ರಯತ್ನಪೂರ್ವಕವಾಗಿ ಮೂರು ಸಾವಿರ ರೂಪಾಯಿ ಕಳೆದುಕೊಂಡೆ. ಅವರಿಗೆ-ಇವರಿಗೆ ಅಂತ ಹಣ ಕಸಿದರು. ತುಂಬಾ ಕಷ್ಟದಿಂದ ಕೂಡಿ ಹಾಕಿದ್ದೆ. ಆಸೆಯೊಂದಿಗೆ ಹಣವೂ ಕೈ ಬಿಟ್ಟಿತು."

"ಪಾಠ ಕಲಿತಂತಾಯಿತು, ಬಿಡು. ಅದನ್ನೇ ಮನಸ್ಸಿಗೆ ಹಚ್ಚಿಕೊಳ್ಳಬೇಡ."

"ಅಲ್ಲಾ ಮೇಡಂ! ನೀವು ಕೆಲಸ ಆಗುವುದಕ್ಕೆ ಮುಂಚೆ ಹಣ ಕೊಟ್ಟದ್ದೇಕೆ? ಮೊದಲು ಕೆಲಸ ಆಗಲಿ, ಅನಂತರ ಕೊಡುವೆ ಎನ್ನಬೇಕಿತ್ತು" ಎಂದು ಹರಿರಾವ್.

"ಕೊಡದಿದ್ದರೆ ಬಿಟ್ಟಾರೆಯೇ? ನಕ್ಷತ್ರಕ ಬೆನ್ನು ಹತ್ತಿದಂತೆ ನನ್ನ ಪೀಡಿಸಿದರು."

"ನೀವು ಹಣ ಕೊಂಡೊಯ್ಯಬಾರದಿತ್ತು."

ಮೊದಲನೆಯ ದಿನ ಬರಿಗೈಯಲ್ಲೇ ಹೋಗಿದ್ದೆ. ಆ ದಿನ ಇಂಟರ್‌ವ್ಯೂ ಇಲ್ಲವೇ ಇಲ್ಲ! ಇದಕ್ಕೇನು ಮಾಡೋಣ? ಸುತ್ತಮುತ್ತ ಇರುವುದು ಮೋಸಗಾರ ಜಾಲ!"

"ಹಾಗಾದರೆ ನಿಮಗೆ 'ಡೈರೆಕ್ಟರ್' ಎಂದು ಯಾರನ್ನೋ ತೋರಿಸಿ ನಾಟಕ ಆಡಿದರೋ ಏನೋ....! ಹೇಗೂ ನಿಮಗೆ ಡೈರೆಕ್ಟರ್ ಯಾರು ಎಂಬುದು ತಿಳಿದಿರಲಿಕ್ಕಿಲ್ಲ."

"ನಾಟಕ ಇದ್ದರೂ ಇರಬಹುದು. ಖಚಿತವಾಗಿ ಹೇಳಲಾರೆ."

"ನೀವು ನಿಮ್ಮೊಂದಿಗೆ ಯಾರಾದರೂ ತಿಳಿದ ವ್ಯಕ್ತಿಯನ್ನು ಕರೆದೊಯ್ದಿದ್ದರೆ ಒಳ್ಳೆಯದಿತ್ತು."

"ಯಾರಿದ್ದಾರೆ ಅಂತಹವರು. ನಾನು ಸಿನಿಮಾ ಪ್ರಪಂಚಕ್ಕೆ ಹೊಸಬಳು."

"ನಿಜ; ಆದದ್ದಾಯಿತು. ಇನ್ನು ಎಲ್ಲವನ್ನೂ ಮರೆತು ಬಿಡಿ."

ಪಂಡರೀ ಮುಖವನ್ನು ಒರಿಸಿಕೊಳ್ಳುವ ನೆವದಲ್ಲಿ ತೊಯ್ದ ಕಣ್ಣುಗಳನ್ನೂ ಒರಿಸಿಕೊಂಡು,

“ನನ್ನಿಂದ ಇನ್ನೂ ಎರಡು ಸಾವಿರ ಕಿತ್ತುಕೊಳ್ಳಲು ಹಂಚಿಕೆ ಹೂಡಿದ್ದರು. ನಾನು ಮನೆಯಿಂದ ತಂದುಕೊಡುವೆ ಎಂದು ತಪ್ಪಿಸಿಕೊಂಡೆ.”

“ಒಳ್ಳೆಯದು ಮಾಡಿದಿರಿ.”

“ನೀವೇನೋ ಹಾಗೆನ್ನುತ್ತೀರಿ. ನನ್ನದು ತುಂಬಾಲಗದ ನಷ್ಟ. ನಾನು ಎಷ್ಟೆಷ್ಟು ಎಚ್ಚರಿಕೆ ವಹಿಸಿದರೂ ಆಗಲಿಲ್ಲ. ಪೋಲೀಸಿಗೆ ದೂರು ಕೊಡೋಣವೆಂದರೆ ಆ ಪೋಲೀಸರಿಗೆ ತಿನ್ನಿಸುವುದಕ್ಕೂ ನನ್ನ ಬಳಿ ಹಣವಿರಬೇಕಲ್ಲ. ಅನಂತರ ಅಲೆದಾಟ ಬೇರೆ. ಇದೆಲ್ಲಾ ಸಾಧ್ಯವಿಲ್ಲದ ಕೆಲಸ ಎಂದು ಸುಮ್ಮನಾಗಿ ಬಿಟ್ಟೆ.”

ಒಂದೆರಡುಗಳಿಗೆ ರುದ್ರಮೌನ ಆವರಿಸಿತು.

* * *

ಶಾಂತಲ ತನ್ನ ಗೆಳತಿಯರಿಗೆಲ್ಲಾ ತಾನೇ ಕಾಗದ ಬರೆದಿದ್ದಾಳೆ. ಪ್ರತಿಯೊಂದು ಕಾಗದಕ್ಕೂ ಪೆನ್ಸಿಲಿನಿಂದಲೇ ವಿವಿಧ ರೀತಿಯ ಚಿತ್ರಗಳನ್ನು ಚಿತ್ರಿಸಿದ ಶೃಂಗಾರಮಯ ಶೈಲಿ. ಅವನ್ನು ತಾಯಿಗೆ ತೋರಿದಾಗ “ಎಷ್ಟು ಚೆನ್ನಾಗಿ ಬರೆದಿದ್ದೀ ಮಗಳೇ!” ಎಂದಳು ಅವಳು.

“ಶ್ಯಾಮಲಾ ಬಂದಮೇಲೆ ತೋರಿದನಂತರ ಪಾಂಚಾಲಿಗೆ ಕೊಡುವೆ.”

“ಪಾಂಚಾಲಿ ಇಂದು ಬರುತ್ತಾಳೆಯೇ?”

“ನಾಳೆ ಬೆಳಿಗ್ಗೆ ಶಾಲೆಗೆ ಹೋಗುವಾಗ ಬರುತ್ತಾಳೆ.”

ಗೌರೀಮಾ ಒಂದೊಂದನ್ನೂ ನೋಡಿ ಲಕೋಟೆಗೆ ಸೇರಿಸುತ್ತ “ ಅಭ್ಯಾಸವಿಲ್ಲದಿದ್ದರೂ ಬಹಳ ಚೆನ್ನಾಗಿ ಬರೆದಿದ್ದೀ...ನಿನ್ನ ಗೆಳತಿಯರು ನಿಜಕ್ಕೂ ಸಂತುಷ್ಟರಾಗುತ್ತಾರೆ.”

ಶಾಂತಲಾ ತಾಯಿಯ ಮುಖವನ್ನು ಶ್ರದ್ಧೆಯಿಂದ ನೋಡಿದಳು ಎವೆಯಿಕ್ಕದೆ. ಆ ಮುಖದಲ್ಲಿ ಸಂತೋಷ-ಆನಂದಗಳ ರಸಪೂರ್ಣಕಳೆ, ತುಟಿಗಳಲ್ಲಿ ಮುಗುಳ್ನಗೆ, ಕಣ್ಣುಗಳಲ್ಲಿ ಆಶಾಭಾವ ಎಲ್ಲಾ ಒಂದೇ ಬಾರಿಗೆ ಕಂಡುಬಂದುವು. ಬಹುಶಃ ಅವಳು ಕರವಸ್ತ್ರಗಳನ್ನು ಹೊಲಿದು ಕೊಟ್ಟಾಗಲೂ ಇಂತಹ ವಸಂತದೊಡ್ಡೋಲಗವನ್ನು ಹೊಂದಿರಲಿಲ್ಲವೇನೋ ಅಥವಾ ಅದನ್ನು ಅವಳೇ ಗಮನಿಸಿರಲಿಲ್ಲವೋ... ಅಂತೂ, ಅಂದು ಇಬ್ಬರಿಗೂ ಪರಮಾನಂದ ಪೂರ್ಣವಾದ ರಸಗಳಿಗೆ ಒದಗಿ ಬಂತು.

# ೧೩

ಶ್ಯಾಮಲಾ ಬಾಸ್ ಕೊಠಡಿಯಲ್ಲಿ ಪೆನ್ನು ನೋಟ್‌ಬುಕ್ ಸಹಿತ ಕುಳಿತಿದ್ದಾಳೆ.

ಅವನು ಇನ್ನೂ ಪತ್ರಗಳ ಪರಿಶೀಲನೆಯಲ್ಲಿದ್ದುದರಿಂದ ಬರೆದು ಕೊಳ್ಳಲು ಏನೂ ಹೇಳಿರಲಿಲ್ಲ, ಕಿಟಕಿಗೆದುರಾದ ಮರದಲ್ಲಿ ಪಕ್ಷಿಗಳ ಪ್ರಪಂಚ.

ಸಿಂಗಾಪುರ್ ಚೆರ್ರಿ....!

ಮರ ಜಗ್ಗುವಷ್ಟು ಹಣ್ಣುಗಳ ಸರಮಾಲೆ. ಆ ಹಣ್ಣುಗಳಿಗಾಗಿ ಎಲ್ಲೆಲ್ಲಿಂದಲೊ ಹಾರಿ ಬರುತ್ತವೆ ವಿವಿಧ ಜಾತಿಯ ಪಕ್ಷಿಗಳ ದಂಡು. ಅವು ಚಿಲಿಪಿಲಿಗುಟ್ಟುತ್ತ ಹಣ್ಣುಗಳನ್ನು ನುಂಗುವ ಮೋಜು ಕಣ್ಣಿಗೆ ಹಬ್ಬ, ಶ್ಯಾಮಲಾ ಅಲ್ಲಿಂದ ನೋಟವನ್ನು ಕೀಳಲಿಲ್ಲ. ರಂಗುರಂಗಿನ ಮನಮೋಹಕ ರೂಪು. ಹೀಗೆ ಒಂದೆಡೆಯಲ್ಲಿ ಕಂಡು ಬರುವುದು ಅಪರೂಪವೇ; ಗುಬ್ಬಿ, ಪಿಕಳಾರ, ಮಿಂಚುಳ್ಳಿ, ಬುಲ್‌ಬುಲ್, ಚಿಟ್ಟಕ್ಕಿ, ಬೆಳ್ಳಕ್ಕಿ, ಕೋಗಿಲೆ, ಕಾಜಾಣ, ಪಾರಿವಾಳ, ಗಿಳಿಗಳು ನಾಮುಂದು ತಾಮುಂದು ಎಂದು ನುಗ್ಗುತ್ತಿದ್ದರೆ ಅದೇಕೋ ಮೈನಾ, ಚೋರೆಗಳು ಮರದ ಕೊಂಬೆಯಲ್ಲಿಯೇ ಕುಳಿತು ಸುಮ್ಮನೆ ನೋಡುತ್ತಿವೆ. ಬಹುಶಃ ಹೊಟ್ಟೆ ತುಂಬಿದ್ದರೂ ಇರಬಹುದು.

ಡಾ॥ ಫರೀದ್ ತಲೆಯೆತ್ತಿ ಹೇಳಿದ "ಹಕ್ಕಿಗಳ ಗದ್ದಲ ತಲೆಚಿಟ್ಟು ಹಿಡಿಸುತ್ತದೆ. ಇಡೀ ದಿನವೆಲ್ಲಾ ತಿನ್ನುತ್ತವೆ. ಆ ಸಣ್ಣ ಹೊಟ್ಟೆಗೆ ಅದೆಷ್ಟು ಹಣ್ಣು ಹಿಡಿಸುತ್ತೋ ಅವು ಹೇಗೆ ಜೀರ್ಣಿಸಿಕೊಳ್ಳುತ್ತವೋ..."

ಅವಳು ಉತ್ತರಿಸದೆ ಕಿಟಕಿಯ ಕಡೆ ನೋಡಿದಳು. ಚಿಲಿಪಿಲಿ ಸದ್ದಿನೊಂದಿಗೆ ರೆಕ್ಕೆಗಳ ಪಟಾತ್ಕಾರ. ಪಟ. ಪಟ. ಪಟ. ಪಟ.

ಒಂದೇ, ಎರಡೇ ನೂರಾರು ಹಕ್ಕಿಗಳು! ಹಣ್ಣಿನ ಕಾಲ ಮುಗಿಯುವವರೆಗೂ ಹಕ್ಕಿಗಳ ಪರಿಷೆ ಇದ್ದದ್ದೆ.

"ನಿನ್ನ ಸಮಯ ವ್ಯರ್ಥ ಕಳೆಯಿತೇ? ಪತ್ರಗಳನ್ನು ಮೊದಲೇ ಪರಿಶೀಲಿಸದೆ ನಿನ್ನನ್ನು ಕರೆಸಿದ್ದು ನನ್ನದೇ ತಪ್ಪು. ಹಾಂ! ಈಗ ಬರೆದುಕೋ."

ಅವನು ಹೇಳತೊಡಗಿದಂತೆ ಅವಳು ಬರೆದುಕೊಳ್ಳತೊಡಗಿದಳು. ನಾಲ್ಕಾರು ಪತ್ರಗಳಿಗೆ ಉತ್ತರ ಬರೆಯುವಷ್ಟರಲ್ಲಿ ಮದನ್ ಮೋಹನ್ ಕಂಪನಿಯ ಪಾಲುದಾರ ಪ್ರವೀಣ್ ಸೇನ್ ಆಗಮಿಸಿದ. ಅವನನ್ನು ಆತ್ಮೀಯತೆಯಿಂದ ಸ್ವಾಗತಿಸಿ "ಕುಳಿತುಕೊಳ್ಳಿ" ಎಂದು ಫರೀದ್.

ಅವನು ಒಮ್ಮೆ ಇತ್ತ ನೋಡಿ "ನಿಮ್ಮ ಕೆಸಲಕ್ಕೆ ತೊಂದರೆಯಾಯಿತೇ?" ಎಂದ.

"ಇಲ್ಲ...ಏನು ಹೇಳಿ."

"ನಾನು ಮುಂದಿನ ಟ್ರೈನಿಂಗ್ ಪ್ರಯುಕ್ತ ಅಮೆರಿಕಾಕ್ಕೆ ಒಂದು ವರ್ಷಕಾಲ ಹೋಗಿ ಬರಲು ನಿಯೋಜಿಸಲ್ಪಟ್ಟಿರುವೆ. ನಿಮಗೆ ಹೇಳಿ ಹೋಗೋಣವೆಂದು ಬಂದೆ."

"Oh! Hearty Congratulations!" ಎಂದು ಪ್ರಸನ್ನ ಮುಖದಿಂದ ಹಸ್ತಲಾಘವ ನೀಡಿದ. ಇಬ್ಬರ ಮುಖಬಿಂಬವೂ ಅರಳಿದ ಮಂದಾರವಾದುವು. ಉಭಯಕುಶಲೋಪರಿಯಾದ ನಂತರ ಪ್ರವೀಣ್ ಹೇಳಿದ,

"ಸಧ್ಯದಲ್ಲೇ ಘೋರ್ಪಡೆಯ ಮಗನಿಗೆ ಮದುವೆ!"

"ಅವನಿಗೆ ಮಲರೋಗ ಅಲ್ಲವೇ?"

"ಹೌದು...ಏನೋ ತಾರಾತಿಗಡಿ ಮಾಡುತ್ತಿದ್ದಾರೆ. ಓ! ಮರೆತಿದ್ದೆ! ಆ ಹುಡುಗಿ ನಿಮ್ಮಲ್ಲೇ ಕೆಲಸ ಮಾಡುತ್ತಿದ್ದಾಳಂತೆ! ಯಾರದು?"

ಆ ಕೂಡಲೇ ಶ್ಯಾಮಲಳ ಕಿವಿಗಳು ನಿಮಿರಿದುವು. ಬಾಗಿದ ತಲೆ ಎತ್ತದೆ ಕಿವಿಕೊಟ್ಟಳು, ಅವರ ಮಾತುಕತೆಯೆಡೆಗೆ. ದೇಹದಾದ್ಯಂತ ಚಳಿಯ ಝುರಿ ಹಾರಿದಾಡತೊಡಗಿತು.

ಡಾ|| ಫರೀದ್ ಒಂದೆರಡು ಕ್ಷಣ ಯೋಚಿಸಿ ನುಡಿದ " ಹಾಗಾದರೆ ಇವಳೇ ಇರಬಹುದೇನೋ..." ನಂತರ ಅವನು ಶ್ಯಾಮಲೆಯನ್ನು ಕೇಳಿದ "ಏನಮ್ಮಾ, ನಿನಗೆ ಮದವೆ ನಿಶ್ಚಿತವಾಗಿದೆಯೇ?"

"ಇಲ್ಲ!" ತಲೆಯಾಡಿಸಿದಳು ಅವಳು.

"ಶ್ಯಾಮಲಾ ಎಂದರೆ ಯಾರು?"

"ಇವಳೇ?"

"ನಿಶ್ಚಯವಾಗಿದೆ. ಹುಡುಗಿಗೆ ತಿಳಿಸಿಲ್ಲವೇನೋ..."

ಅವಳು ಭಯ-ಭೀತಿಯಿಂದ ತಲೆಯಾಡಿಸುತ್ತ ನಿರಾಕರಿಸಿದಳು. ಮುಖ ಬಿಂಬ ವಿವರ್ಣವಾಯಿತು. ಅಂತರಂಗ ತರತರ ನಡುಗುತ್ತಿದೆ, ಅರಳಿ ಎಲೆಯಂತೆ.

"ಬಹುಶಃ ನಿಮಗಿನ್ನೂ ಹೇಳಿಲ್ಲವೇನೋ. ನಿಮ್ಮ ತಂದೆಗೆ ಘೋರ್ಪಡೆಗೆ ಕಂಠಸ್ಯಗಳಸ್ಯ. ಗಾಂಗಾರಾಂ ಒಪ್ಪಿಕೊಂಡು ಅವರಿಂದ ಹಣ ತೆಗೆದುಕೊಂಡಿದ್ದಾರೆ. ಆದ್ದರಿಂದ ಅವರವರಲ್ಲಿ ಒಪ್ಪಂದವಾಗಿದೆ."

ಆ ಕೂಡಲೇ ಶ್ಯಾಮಲಾ ಎರಡೂ ಕೈಗಳಿಂದ ಮುಖಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು.

ಫರೀದ್ ಸಂತೈಸುವ ರೀತಿಯಲ್ಲಿ ಅಂದ "ನೀನು ಅತ್ತು ಮಾಡುವುದೇನು? ಮದುವೆಯಾಗಲು ಇಷ್ಟವಿಲ್ಲದಿದ್ರೆ 'ಆಗುವುದಿಲ್ಲ' ಎಂದು ದೃಢವಾಗಿ ಹೇಳಿಬಿಡು. ಅವನು ಮಲರೋಗಿ ಅಷ್ಟೇ ಅಲ್ಲ; ತುಂಬಾಕುಡುಕ ಕೂಡ. ನಿನ್ನ ತಂದೆಗೆ ದಬಾಯಿಸು...ಹೇಗೆ ಹೇಳದೆ ಕೇಳದೆ ಇಂತಹ ಸಂಬಂಧಕ್ಕೆ ಒಪ್ಪಿದೆ ಎಂದು. ಇದರಲ್ಲಿ ಅಳುವುದೇನಿದೆ? ಧೈರ್ಯ ಮುಖ್ಯ! ಅವನಿಗೆ ನಲವತ್ತರ ಪ್ರಾಯ...ಈವರೆಗೆ ಯಾರೂ ಹೆಣ್ಣು ಕೊಟ್ಟಿರಲಿಲ್ಲ."

ಸ್ವಲ್ಪಹೊತ್ತು ಮೌನ ಮುದ್ರೆ ಆವರಿಸಿತು.

* * *

ಸೋಮವಾರದ ಸಂಧ್ಯಾ ಸಮಯ.

ಶಾಂತಲೆಯ ಗೆಳತಿಯರನೇಕರು ಒಬ್ಬೊಬ್ಬರಾಗಿ ಆಗಮಿಸಿದರು. ಒಬ್ಬೊಬ್ಬರ ಕೈಯ್ಯಲ್ಲೂ ಪುಟ್ಟಪುಟ್ಟ ಆಟಿಕೆಗಳ ಬಹುಮಾನ ಪೊಟ್ಟಣ. ಎಲ್ಲಕ್ಕೂ ರಿಬ್ಬನ್ ಸುತ್ತಿ 'ಬೊ' ಕಟ್ಟಿ ತಂದಿದ್ದಾರೆ. ಬಹುಮಾನ ಬರಬಹುದೆಂದು ಊಹಿಸಿದ್ದ ಶ್ಯಾಮಲಾ ಎಲ್ಲರಿಗೂ ಸಣ್ಣಪುಟ್ಟ ಆಟಿಕೆಗಳ ಬಹುಮಾನವನ್ನು ಅಂತೆಯೇ ತಯಾರಿಸಿ ಇಟ್ಟಿದ್ದಾಳೆ. ಸಿಹಿ-ಕಾರ ಮತ್ತು ಹಣ್ಣುಗಳ ರಸಾಯನ ಅಣಿಯಾಗಿದೆ. ಬಣ್ಣ ಬಣ್ಣದ ಬೆಲೂನ್‌ಗಳನ್ನು ಊದಿ ನೇತು ಬಿಡಲಾಗಿದೆ.

ಮಕ್ಕಳೆಲ್ಲಾ ಕಲೆತು ಕುಲುಕುಲು ನಗೆಯ ಬುಗ್ಗೆ ಹರಿಸಿದರು.

"ನಿನ್ನ ಮಗುವಿಗೆ ಏನು ಹೆಸರಿಡುತ್ತೀ ಶಾಂತೀ?"

"ಶರ್ಮಿಳಾ ಎಂದು!"

"ಓ! ಚೆನ್ನಾದ ಹೆಸರು!"

"ಈಗ ನೀವೆಲ್ಲಾ ಶರ್ಮಿಳಾ ಎಂದು ಹೆಸರು ಕೂಗಿ."

ಎಲ್ಲರೂ 'ಶರ್ಮಿಳಾ' ಎಂದು ಹೆಸರು ಕೂಗುತ್ತಲೂ ಚಪ್ಪಾಳೆಯ ಮಧುರವ ಮೊಳಗಿತು! ಕಿಲಕಿಲ ನಗು, ನಗೆಚಾಟಿಕೆಯ ಮಾತು, ಸಂತಸದ ಸರಸ ಸಲ್ಲಾಪ ಪುಟ್ಟ ಮನೆಯನ್ನು ತುಂಬಿತು. ಗೌರೀಮಾ ಶಾಂತಲೆಯ ಸಂತಸದಲ್ಲಿ ಪಾಲ್ಗೊಂಡಳು, ಶ್ಯಾಮಲೆಯು ಎಲ್ಲಾ ಮಕ್ಕಳಿಗೂ ಆದರದಿಂದ ಸಿಹಿ-ಕಾರ ವಿನಿಯೋಗಿಸಿದಳು. ಪಾರ್ಟಿ ಮುಗಿದನಂತರ ಬೆಲೂನ್‌ಗಳಿಂದ ಹೊಡೆದಾಡಿ ಆಟವಾಡುತ್ತ ಕತ್ತಲಾಗುವವರೆಗೂ ತಂಗಿದ್ದು ಎಲ್ಲರೂ ಶಾಂತಲಾ ಮತ್ತು ಶರ್ಮಿಳಾಗೆ ಶುಭಾಶಯ

ಕೋರಿ ಹೊರಟರು. ಹಗಲೆಲ್ಲಾ ಕಿಲಕಿಲಮಯವಾಗಿದ್ದ ತಾಣ ಒಮ್ಮೆಲೇ ಶಾಂತ ವಾಯಿತು. ಪ್ರಾಣ ಗೆಳತಿಯರು ಒಂದೇ ಬಾರಿಗೆ ನಿರ್ಗಮಿಸುತ್ತಲೂ ಮ್ಲಾನಮುಖಿ ಯಾದಳು ಶಾಂತಿ. ಎಲ್ಲರೂ ಶಾಲೆಯಿಂದಲೇ ಬಂದಿದ್ದುದರಿಂದ ಶಾಲೆಯ ಸಮವಸ್ತ್ರ ಮತ್ತು ಪುಸ್ತಕಗಳ ಚೀಲಗಳೊಂದಿಗೇ ಪಾಲ್ಗೊಂಡಿದ್ದರು. ಪಾಂಚಾಲಿ ಮಾತ್ರ ಮನೆಯಲ್ಲಿ ಮುಖ ಮಜ್ಜನ ಮಾಡಿ ರೇಶಿಮೆಯ ಲಂಗ ತೊಟ್ಟು ಬಂದಿದ್ದಳು. ಅವರೆಲ್ಲರ ಸುಖಲೋಲುಪ್ತಿಯನ್ನು ಕಂಡರೆ ಹೊಟ್ಟೆಯ ಸಂಕಟವೆಲ್ಲಾ ನರನಾಡಿಗಳಲ್ಲಿ ಸರ್‍ರನೆ ಹರಿದಾಡುತ್ತದೆ. ದೈನ್ಯ ನೋಟ ಬಾಗಿಲ ಕಡೆಗೇ ನಿಟ್ಟಿಸಿತು. ಆದರೆ, ಆ ನೋಟಕ್ಕೆ ಕಂಡವರಾರು?

ತಂದೆ ಮತ್ತು ಘೋರ್ಪಡೆ!

* * *

"ಶ್ಯಾಂ! ಎರಡು ಬಿಸಿ ಕಾಫಿ ತೆಗೆದುಕೊಂಡು ಬಾ ಮಗಳೇ!"

ಮಕ್ಕಳು ಕೂಡಿ ಅಲ್ಲಲ್ಲಿ ಚೆಲ್ಲಾಡಿದ ಕಾಗದ-ಬಸಿ-ಬಟ್ಟಲು ಇತ್ಯಾದಿಗಳನ್ನು ಎತ್ತಿ ತೆಗೆದಿಟ್ಟು ಒಳ ಹೋದಳು ಸ್ಯಾಮಲಾ. ಮುಖಬಿಂಬ ಬಿಗಿದು ಉರಿಗಣ್ಣುಗಳು ರಂಗು ತಳೆದುವು. ಮಾ ಕಾಫಿ ತಯಾರಿಸಿ ತೆಗೆದುಕೊಂಡು ಹೋದರೆ ಗಂಗಾರಾಂ ಕೆಕ್ಕರಿಸಿ ನೋಡುತ್ತ "ಶ್ಯಾಮಲಾ ಎಲ್ಲಿ?" ಎಂದ.

"ಒಳಗಿದ್ದಾಳೆ."

ಕಾಫಿ ಬಸಿಗಳನ್ನು ಮುಂದಿಟ್ಟು ಹಿಂದಿರುಗಿದಳು ಗೌರೀಮಾ.

ಗಂಗಾರಾಂ ಕುಡಿದನಂತರ ಬಸಿಯನ್ನು ಒಳಗೊಯ್ಯಲು ಕರೆದುದು ಶ್ಯಾಮಲೆ ಯನ್ನೇ. ಅದಕ್ಕೆ ಪ್ರತಿಯಾಗಿ ಬಂದವಳು ಗೌರೀಮಾ.

ಮಡದಿಯನ್ನು ನೋಡುತ್ತಲೂ ಅವನಿಗೆ ಸಿಟ್ಟಿನಿಂದ ಮೈಯೆಲ್ಲಾ ಉರಿಯಿತು. ಘೋರ್ಪಡೆಯ ಮುಂದೆ ತನಗಾದ ಅವಮಾನ ಮನಸ್ಸಿಗೆ ಮುಳ್ಳುಮುರಿಯಿತು. ಕ್ಲಬ್ಬಿಗೆ ಹೋಗಲು ಸಮಯವಾದುದರಿಂದ ಮತ್ತೊಂದು ಮಾತಾಡದೆ ಘೋರ್ಪಡೆ ಯೊಂದಿಗೆ ಹೊರಟ.

ಶಾಂತಲಾ ತಾಯಿಯ ಕಡೆ ನೋಡುತ್ತ "ಅಮ್ಮಾ ಪಾರ್ಟಿಯ ಸಂತಸ ಅಪ್ಪನನ್ನ ನೋಡಿದ ಕೂಡಲೇ ಹಾರಿ ಹೋಯಿತು. ಇಲ್ಲೇ ಎದುರಿಗೆ ಕುಳಿತಿರುವೆನಲ್ಲಾ, ಒಂದಿನ ಹೇಗಿದ್ದಿ ಮಗಳೇ! ಎನ್ನಲಿಲ್ಲ. ಘೋರ್ಪಡೆ ಬಂದಾಗಲೆಲ್ಲಾ ಶ್ಯಾಮಲಾ ಬೇಕೇ ಬೇಕು! ಅವರಿಗೆ ಶರತ್ ಹೊರತು ಇನ್ನಾರೂ ಬುದ್ಧಿ ಕಲಿಸುವವರಿಲ್ಲ. ನಾವು ಸುಮ್ಮನಿರುವುದರಿಂದಲ್ಲವೇ ನಮಗೆ ನೂರೆಂಟು ಗೋಳು? ಇದೆಲ್ಲಾ ಏನು ಯೋಚಿಸಿ ನೋಡಿ ಅಮ್ಮಾ?"

ಆ ಪುಟ್ಟ ಮಗಳಿಗೆ ಎಷ್ಟೊಂದು ಅರ್ಥವಾಗಿದೆ...?

''ಅಯ್ಯೋ, ಬಿಡು ಮಗಳೇ! ನಾವು ಯೋಚಿಸುವುದರಿಂದ ಅಥವಾ ನಮ್ಮ ಹಕ್ಕುಬಾಧ್ಯತೆಗಳಿಗಾಗಿ ಹೊಡೆದಾಡುವುದರಿಂದ ಏನಾದರೂ ಆದೀತೆ? ಬಡವನ ಸಿಟ್ಟು ದವಡೆಗೆ ಮೂಲ ಎನ್ನುವ ಗಾದೆಯುಂಟು. ನಾವು ಹೇಳಹೋಗಿ ಏಟು ತಿನ್ನುವುದಷ್ಟೆ...''

ಆ ವೇಳೆಗೆ ಶ್ಯಾಮಲಾ ಹೊರ ಬಂದಳು. ದುಃಖ-ಸಂಕಟ-ಕೋಪ-ತಾಪಗಳ ಒಕ್ಕೂಟವಾಗಿತ್ತು ದೈಹಿಕ ಸಂಪತ್ತಿ. ಮುಖಬಿಂಬ ಸಿಡಿದೊಡೆಯಲಿರುವ ದಡಾಕಿಯಂತೆ ಹೊಗೆಯಾಡುತ್ತಿದೆ ವಿವರ್ಣವಾಗಿ. ಮಿನುಗುವ ರಂಗುರಂಗಿನ ಕಣ್ಣುಗಳಲ್ಲಿ ಫಳಫಳ ನೀರು.

''ಅಕ್ಕಾ! ನೀನು ಸುಮ್ಮನಿರುವುದು ತಪ್ಪು! ನಾನು ಅಂದೇ ಅಮ್ಮನನ್ನು ಕೇಳಿದೆ ಅಪ್ಪ ಘೋರ್ಪಡೆಯನ್ನು ಕರೆತಂದಾಗಲೆಲ್ಲಾ ಅಕ್ಕನನ್ನು ಕರೆಯುವುದರ ಅರ್ಥ ವೇನು? ಅಂತ. ನನ್ನಂಥ ಚಿಕ್ಕವಳಿಗೆ ಸುಳಿವು ಸಿಕ್ಕಿದೆ. ನಿನಗೇಕೆ ಸಿಕ್ಕಲಿಲ್ಲ? ಅಂದು ನೀನೇ ಕಾಫಿ ಒಯ್ದುಕೊಟ್ಟೆ. ನೀನು ಆತನ ಮುಖಕ್ಕೆ ಕಾಫಿ ಎರಚಿ ಬರಬೇಕಿತ್ತು!''

''ಶಾಂತೀ! ನೀನು ಇಷ್ಟೊಂದು ಧೈರ್ಯವಂತೆಯಾದುದು ಯಾವಾಗ? ನನಗೆ ಅದೇ ಅತ್ಯಂತ ಆಶ್ಚರ್ಯ! ಅಂತೂ ನೀವೆಲ್ಲಾ ನನ್ನ ಬೆಂಬಲಕಿದ್ದೀರಲ್ಲಾ ಅಷ್ಟೇ ಸಾಕು! ಈ ದಿನ ಅಪ್ಪ ಮನೆಗೆ ಬರಲಿ, ನಾನು ಹೇಳಿ ಬಿಡುವೆ!''

''ಅಷ್ಟು ಧೈರ್ಯ ಮಾಡು ಶ್ಯಾಂ!''

''ಶರತ್ ಮನೆಯಲ್ಲಿದ್ದಾಗ ಹೇಳು. ಅವನಿಲ್ಲದಿದ್ದರೆ ರಾಣಾರಂಪವಾದೀತು!''

''ನಿಜ ಶಾಂತಿ''

ತಂಗಿಯನ್ನು ಮುದ್ದಿಡುತ್ತ ಕೊರಳು ಕಟ್ಟಿಕೊಂಡು ಮುಸುಮುಸು ಅತ್ತಳು ಶ್ಯಾಮಲಾ. ಗೌರೀಮಾ ಕಣ್ಣುಗಳಲ್ಲಿ ಗಂಗೆ-ಯಮುನೆಯರ ಪ್ರವಾಹ ಧಾರೆ ಧಾರೆಯಾಗಿಳಿಯಿತು.

* * *

ಇಂದು, ಗಂಗಾರಾಂ ದಡದಡನೆ ಒಳಬಂದ. ನೆಲವನ್ನು ನಡುಗಿಸುವಂತೆ ಮುದ್ದಿಡುತ್ತಿದ್ದ ಹೆಜ್ಜೆಗಳಿಂದಲೇ ಗೊತ್ತು ಆತನ ಕೋಪದ ಮಟ್ಟ!

ಶ್ಯಾಮಲಾ ಅಡುಗೆ ಮನೆ ಸೇರಿಕೊಂಡಳು. ಶರತ್ ಮನೆಯಲ್ಲಿಲ್ಲ. ಶಾಂತಲಾ ಕುಳಿತಲ್ಲೇ ತಲೆಬಾಗಿ ಕಂಡೂ ಕಾಣದಂತೆ ಪುಸ್ತಕದ ಮೇಲೆ ಕಣ್ಣಿಟ್ಟಳು. ಹನಿಗಣ್ಣಾಗಿ.

''ಶ್ಯಾಮಲಾ...''

"........"

"ಶ್ಯಾಮಲಾ...! ಎಲ್ಲಿ ಅವಳು?...ಹೊರ ಹೋಗಿದ್ದಾಳೆಯೇ? ಮನೆಗೆ ಬಂದ ಅತಿಥಿಗಳನ್ನು ಆದರಿಸುವಷ್ಟು ಸೌಜನ್ಯವಿಲ್ಲ! ಇಂಥ ಹೆಣ್ಣು ಇದ್ದರೇನು? ಇಲ್ಲದಿದ್ದರೇನು?"

"ಒಳಗಿದ್ದಾಳೆ..." ಕೇಳಿಸಿತೋ ಕೇಳಲಿಲ್ಲವೋ ಎಂಬಂತೆ ನುಡಿದಳು ಶಾಂತಲಾ. ಗಂಗಾರಾಂ ದಡಬಡನೆ ಒಳ ಹೋದ. ಕೋಪದಿಂದ ಕಂಪಿಸುತಿತ್ತು ಮೈ.

ಗೌರೀಮಾ ಕಣ್ಣುಗಳಲ್ಲಿ ಕಂಬನಿಗಳು ತುಳುಕಿದವು.

"ಏನಪ್ಪಾ ಕರೆದದ್ದು?"

"ನೀನು ನಾಳೆಯಿಂದ ಕೆಲಸಕ್ಕೆ ಹೋಗುವಷ್ಟಿಲ್ಲ. ನಿನಗೆ ಗಂಡು ನೋಡಿರುವೆ! ನೀನು ಮದುವೆಯಾಗಿ ಸಂಸಾರ ಮಾಡು!"

"ನಾನು ಮದುವೆ ಆಗೋಲ್ಲ!"

"ಏನಂದೇ?"

"ಖಂಡಿತ ಆಗೋಲ್ಲ...ನಗೆ ಮದುವೆಯೇ ಬೇಡ...ಒಂದು ವೇಳೆ ಆದರೂ ನೀವು ನೋಡಿದ ಗಂಡನ್ನಂತೂ ಆಗುವುದಿಲ್ಲ...!"

ಮೈಯಲ್ಲಿ ಚಳಿ ಮೂಡಿದ್ದರೂ ಧೈರ್ಯದಿಂದಲೇ ನುಡಿದಳು ಶ್ಯಾಮಲಾ...

"ಏನಂದೇ ನಿನ್ನ ನಾಲಿಗೆ ಸೀಳಿ ಬಿಟ್ಟೇನು! ನಾನು ಮಾತುಕೊಟ್ಟ ಮೇಲೆ ನೀನು ಒಪ್ಪುವುದಿಲ್ಲ ಎಂದರೇನು?"

"ನೀವು ಸಾಲಸೋಲ ಮಾಡಿ ನನ್ನ ಮಾರುವುದಕ್ಕೆ ನೋಡುತ್ತಿದ್ದೀರಿ! ಮಲರೋಗಿ-ಕುಡುಕನನ್ನು ನಾನು ಮದುವೆ ಆಗುವುದೇ?"

"ಯಾರು ಹೇಳಿದ್ದು?"

ಅವನು ಎರಡು ಹೆಜ್ಜೆ ಮುಂದುವರಿಯುತ್ತಿದ್ದಂತೆಯೇ ಶ್ಯಾಮಲಾ ಗಟ್ಟಿಯಾಗಿ ಕೂಗಿಕೊಂಡಳು "ಶರತ್! ಶರತ್!!"

ನಿಜಕ್ಕೂ ಅವನು ಮನೆಯಲ್ಲಿರಲಿಲ್ಲ. ಮಗಳ ಕರೆ ನೋಡಿ ಗಂಗಾರಾಂ ಬಂದಂತೆಯೇ ಹಿಂದಿರುಗಿ ಹೋದ! ಕೋಪ ಮೈರೋಮರೋಮವನ್ನೂ ಸುಡುತಿತ್ತು. ಹೇಗೆ ಇದರ ಪರಿಹಾರ ಎಂಬುದು ಅರ್ಥವಾಗದು. ಘೋರ್ಪಡೆಯ ಮಗನಿಗೆ ಹೆಣ್ಣು ಕೊಡುವುದಾಗಿ ಹೇಳಿ ಮೇಲಿಂದ ಮೇಲೆ ಹಣ ತೆಗೆದುಕೊಂಡು ಹೆಣ್ಣು-ಹೊನ್ನು-ಮಧ್ಯಗಳನ್ನು ಸೂರೆ ಮಾಡಿಯಾಗಿದೆ. ಮುಂದೇನು? ಎಂಬುದು ತನ್ನ ಮುಂದಿನ ಪ್ರಶ್ನೆ. ಘೋರ್ಪಡೆ ಶ್ಯಾಮಲೆಯ ಹಿಂಜರಿತವನ್ನು ಕಂಡುಕೊಂಡಿದ್ದಾನೆ.

ಇದು ಕೈತಪ್ಪಿಹೋದರೆ ಹಣ ವಸೂಲಿಯ ಪ್ರಶ್ನೆಯೂ ಕಾಡುತ್ತದೆ. ಎಲ್ಲವನ್ನೂ ಯೋಚಿಸುತ್ತ ಮನದುಂಬಿಕೊಂಡು ಮೆಟ್ಟಲು ಇಳಿಯುತ್ತಿದ್ದಂತೆಯೇ ಶರತ್ ಎದುರಾದ. ಅವನನ್ನೊಮ್ಮೆ ಕೆಕ್ಕರಿಸಿನೋಡಿತು ವಕ್ರದೃಷ್ಟಿ.

ಅವನು ಸೀಟಿ ಹಾಕುತ್ತ ಯೋಧಗತಿಯಲ್ಲಿ ಒಳಗೈತಂದ. ಕಣ್ಣುಗಳಲ್ಲೂ ತುಂಟತನ. ಮೈಮನಗಳಲ್ಲೂ ತುಂಟತನ. ಹೆಜ್ಜೆ ಹೆಜ್ಜೆಗಳಲ್ಲೂ ತುಂಟತನ...

ಒಳಗಿಂದೊಳಗೇ ಹಲ್ಲು ಕಡಿದ ಗಂಗಾರಾಂ.

## ೧೪

ಶರತ್ ಕ್ರಿಕೆಟ್ ಬ್ಯಾಟನ್ನು ಗಿರ್ರನೆ ತಿರುಗಿಸುತ್ತ ನುಡಿದ "ಕ್ರಿಕೆಟ್ ಟೆಸ್ಟ್ ಮ್ಯಾಚಿಗೆ ಹೋಗುತ್ತಿರುವೆ. ಗೆದ್ದರೆ ಸ್ಟೇಟ್ ಟೀಮಿಗೆ ಸೇರಿಕೊಳ್ಳುವ ಛಾನ್ಸ್ ಇದೆ!"

ಶ್ಯಾಮಲಾ ಅವನನ್ನು ಅಪ್ಪಿಕೊಂಡ ಹೇಳಿದಳು "ನೀನು ಈಗ ಹೋದರೆ ನನ್ನಗತಿ ಗಂಗಮ್ಮನ ಪಾಲು! ದಯವಿಟ್ಟು ಎಲ್ಲಿಗೂ ಹೋಗಬೇಡಪ್ಪಾ. ನಿನಗೆ ಕೈ ಮುಗಿದು ಕೇಳಿಕೊಳ್ಳುವೆ!"

"ನಾನು ಎಷ್ಟು ದಿನ ಕಾಯಲಾಗುತ್ತೆ ಹೇಳು?" ಎಂದು ಸ್ವಲ್ಪ ಹೊತ್ತು ತನ್ನಲ್ಲೇ ಯೋಚಿಸಿ ನುಡಿದ "ನೀನು ಹೆದರಬೇಡ. ಅಪ್ಪನಿಗೆ ಇದು ಸಾಧ್ಯವೇ ಇಲ್ಲವೆಂದು ನಾನೂ ಹೇಳಿಬಿಡುವೆ! ನಮ್ಮನ್ನೆಲ್ಲಾ ಕೇಳದೆ ಹೇಗೆ ಮಾತು ಕೊಟ್ಟರು ಕುಡುಕನಿಗೆ? ಮಕ್ಕಳು ಎಂದರೆ ಅಷ್ಟೊಂದು ಅಗ್ಗ?"

"ಗಲಾಟೆಗೆ ಹೋಗಬೇಡ. ಒಳ್ಳೆ ಮಾತಿನಲ್ಲೇ ಹೇಳು. ನಾನಿದ್ದಾಗಲೇ ಹೇಳಿದರೆ ನಾನು ಆಗುವುದಿಲ್ಲ ಎಂದು ಹೇಳಿಬಿಡುವೆ. ಆಗಲೇ ಒಮ್ಮೆ ಹೇಳಿಯಾಗಿದೆ, ಇನ್ನೊಮ್ಮೆ ದೃಢೀಕರಿಸಿದರಾಯಿತು." ದೀನಾತಿದೀನಳಾಗಿ ಬೇಡಿಕೊಂಡಳು ಶ್ಯಾಮಲಾ.

"ಹೌದು, ಶರತ್! ನೀನಿಲ್ಲದಿದ್ದರೆ ಏನಾಗಬೇಕು ಹೇಳು? ಇಂಥ ಹೊಲಸು ವ್ಯವಹಾರಕ್ಕೆ ಬ್ರೇಕ್ ಇಲ್ಲದಿದ್ದರೆ ಏನಾಗಬೇಡ?" ಶಾಂತಲಾ ಅಕ್ಕನನ್ನು ಬೆಂಬಲಿಸಿದಾಗ ಅವನೆಂದ "ನೀನೂ ಹೇಳಬೇಕಿತ್ತು. ಏಕೆ ಸುಮ್ಮನಿದ್ದೆ...? ಹನಿಗೂಡಿದರೆ ಹಳ್ಳ. ಎಲ್ಲರೂ ಕೂಡಿ ಬೆಂಬಲಿಸಿದರೆ ಬಲಬರುತ್ತದೆ."

ಅದೇ ಆಗ ಹೊರಹೋಗಿದ್ದ ಗೌರೀಮಾ ತರಕಾರಿಯನ್ನು ಕೈಯಲ್ಲಿ ಹಿಡಿದುಕೊಂಡೇ ನುಡಿದಳು " ನೀನು ಬರೀ ಕ್ರಿಕೆಟ್ ಆಡಿಕೊಂಡಿದ್ದರೆ ಹೇಗಪ್ಪಾ?

ಪರೀಕ್ಷೆ ಹತ್ತಿರ ಬರುತ್ತಿದೆ. ನೀನು ಒಂದು ವೇಳೆ ಪೇಲಾದರೆ ಅದೊಂದೇ ನೆವ ಸಾಕು ನಿನ್ನಪ್ಪನಿಗೆ. ಓದಿಗೆ ಹಣ ಕೊಡದೆ ಹೋದರೆ ಏನು ಮಾಡುವೆ...? ಸುಮ್ಮನೆ ನಿನ್ನ ಕಾಲಿನಮೇಲೆ ನೀನೇ ಕಲ್ಲು ಹಾಕಿಕೊಳ್ಳಬೇಡ. ಮೊದಲೇ ಅಪ್ಪ ಸರಿಯಿಲ್ಲ; ನೀನೂ ತೊಂದರೆ ತಂದುಕೊಳ್ಳಬೇಡ ಮಗನೇ! ನನಗಂತೂ ಈ ಜೀವನವೇ ಸಾಕಾಗಿದೆ. ಈ ಮಕ್ಕಳಿಲ್ಲದಿದ್ದರೆ ನನಗೆ ಜೀವನವೇ ಬೇಕಿರಲಿಲ್ಲ. ನಿಮ್ಮನ್ನು ತೀರ ಹಚ್ಚದೆ ಸತ್ತನೆಂದರೆ ನಿಮ್ಮನ್ನು ಕೇಳುವವರಾರು? ಇದನ್ನೆಲ್ಲಾ ಯೋಚಿಸಬೇಕು. ಕಾಲೋಚಿತವಾಗಿ, ಜೀವನೋಚಿತವಾಗಿ ಬಾಳುವುದನ್ನು ಕಲಿಯಬೇಕು. ವಿದ್ಯಾ ಸಮಂ ನಾಸ್ತಿ ಶರೀರ ಭೂಷಣಂ ಎನ್ನುತ್ತದೆ ಸುಭಾಷಿತ. ನೀನು ಕ್ರಿಕೆಟ್ ಲೋಕದ ನಕ್ಷತ್ರ ಆಗು-ಬಿಡು. ವಿದ್ಯೆಯಂತೂ ನಿನ್ನನ್ನು ಬೆಂಬಲಿಸಲೇಬೇಕು. ವಿದ್ಯೆಯಿಲ್ಲದೆ ಜೀವನ ಹೇಗೆ? ಯೋಚಿಸಿ ನೋಡು.''

''ಹೌದಮ್ಮಾ ಗೊತ್ತು ನನಗೆ. ಅದಕ್ಕೂ ಪ್ರಯತ್ನಿಸುವೆ.''

''ತಿಳಿದಿರು ಶರತ್! ಫೇಲಾದರೆ ಅಪ್ಪನಿಂದ ನಿನಗೊಂದು ಚಿಕ್ಕಾಸೂ ಬರುವುದಿಲ್ಲ.''

''ಥೂ! ಅವರಿಂದ ಬಂದರೂ ಮುಟ್ಟುವುದಿಲ್ಲ!''

''ಭೇಷ್! ಆ ಹಠ ಇರಬೇಕು! ನನ್ನಂತೆ ನೀನೂ ಏನಾದರೂ ದುಡಿಮೆಯ ಹಾದಿ ಕಂಡುಕೊಳ್ಳುವುದು ಒಳ್ಳೆಯದು. ಅಂದರೆ, ಕೆಲಸ ಮಾಡಲು ಬಿಡುವಿಲ್ಲ. ಸ್ಕಾಲರ್ ಷಿಪ್ ಬರುವಂತೆ ಮಾಡಿಕೊ. ಅಷ್ಟಾದರೆ ಅಪ್ಪ ಇನ್ನೂ ಹೆದರುತ್ತಾರೆ ನಿನಗೆ!'' ಶಾಂತಲೆ ಎಳೆದನಿಯಲ್ಲಿ ಹೇಳಿದ ದೊಡ್ಡಮಾತಿಗೆ ಹುಬ್ಬೇರಿಸಿ ನುಡಿದ ಶರತ್ ''ತುಂಬ ಥ್ಯಾಂಕ್ಸ್ ಶಾಂತಿ!''

ಎಲ್ಲರೂ ಮುಗುಳು ನಗೆ ಸೂಸಿ ಪ್ರಸ್ತಾಪಕ್ಕೆ ಮುಕ್ತಾಯ ಹಾಡಿದರು.

* * *

ಮಂಜು ಮುಸುಕಿದ ವಾತಾವರಣ. ಮೈ ಚಿಲ್ಲನೆ ನಡುಗಿಸುವ ಚಳಿಗಾಳಿ....

ಪೂರ್ವ ಸೀಮಾಕ್ಷೇತ್ರದಲ್ಲಿ ಮೆಲ್ಲಮೆಲ್ಲನೆ ತುಳುಕುತ್ತಿರುವ ಮುಂಬೆಳಕು ತಿರೆಯನ್ನು ಬೆಳಗತೊಡಗಿದೆ. ದಟ್ಟವಾದ ವನಶ್ರೀಯನ್ನು ಭೇದಿಸಿ ಒಳತೂರಿದ ಟಾರು ಬಳಿದ ಕರಿಯ ಹಾದಿಯಲ್ಲಿ ಡಾ॥ ಫರೀದ್‌ನೊಂದಿಗೆ ಶ್ಯಾಮಲಾ ಹೆಜ್ಜೆ ಹಾಕುತ್ತಿದ್ದಾಳೆ. ಮಾತಿನ ಮೋಡಿಯಲ್ಲಿ ಹಾದಿಯ ಪರಿವೆ ಇಲ್ಲ. ಆ ತಣ್ಣನೆಯ ಸದ್ದಿಲ್ಲದ ಶಾಂತಿಯನ್ನು ಸೀಳುವಂತೆ ತಾಗಿತು ಕರೆ ''ಶ್ಯಾಂ!....ಶ್ಯಾಂ!''

ಯಾರಿರಬಹುದು?

ಶ್ಯಾಮಲಾ ಮೈಯೆಲ್ಲಾ ಕಿವಿಯಾಗಿ ತಟ್ಟನೆ ನಿಂತಳು.

"ಶ್ಯಾಂ....!"

"ಅಯ್ಯೋ, ಎಲ್ಲಿದ್ದಿ ಶಾಂತಿ! ಎಲ್ಲಿದ್ದೀ, ಏನಾಯ್ತು, ಏಕೆ ಕೂಗುತಿದ್ದೀ?"

ಪಕ್ಕದ ತಪ್ಪಲಿನಿಂದ ರಸ್ತೆಗೆ ಜಿಗಿದ ಹುಲಿಯ ಬಾಯಿಯಲ್ಲಿ ಶಾಂತಿ!

"ಶ್ಯಾಂ..."

ಹಾ! ಹುಲಿಯಲ್ಲ, ಘನಕಿಷನ್ ಘೋರ್ಪಡೆ! ನೆತ್ತರು ಹೀರಿದ ಅವನು ಹಿರಿಯ ಮೀಸೆಯನ್ನು ಹುರಿಮಾಡುತ್ತಿದ್ದಾನೆ! ಬಾಯಿಯಲ್ಲಿ ರಕ್ತ! ಅಬ್ಬಾ! ಭಯಾನಕ!

"ಶಾಂತೀ! ನನ್ನ ಶಾಂತೀ!"

"ಶ್ಯಾಂ! ಏಕೆ ಚೀರುತ್ತಿದ್ದೀ? ನಿನಗೇನಾಯಿತು?"

ಪಕ್ಕದಲ್ಲಿ ಮಲಗಿದ್ದ ಗೌರೀಮಾ ಮತ್ತು ಶಾಂತಿ ಇಬ್ಬರೂ ಮೈ ಅಲುಗಿಸಿ ಕೇಳುತ್ತಿದ್ದಾರೆ "ಏನಾಯ್ತು ಶ್ಯಾಂ? ಏಕೆ ಕೂಗಿದೆ?"

ಶ್ಯಾಮಲಾ ಬಿಗಿಯಾಗಿ ಮುಚ್ಚಿಕೊಂಡಿದ್ದ ಕಣ್ಣುಗಳನ್ನು ಬಿರಿ ಬಿರಿ ಬಿಟ್ಟುನೋಡಿ "ಛೀ! ಎಂತಹ ಕನಸು ಕಂಡೆ!! ಎಂತಹ ಭಯಾನಕ!!"

"ಜ್ವರ ಬಂದಾಗ ಕೆಲವರಿಗೆ ಹಾಗಾಗುವುದುಂಟು" ಸಮಾಧಾನ ಹೇಳಿದಳು ಗೌರೀಮಾ.

ಶ್ಯಾಮಲಾ ಶಾಂತಿಯನ್ನು ತೋಳ ತೆಕ್ಕೆಯೊಳಗೆ ಎದೆಗಪ್ಪಿಕೊಂಡು"ನೀನು ನನ್ನ ಸ್ವೀಟ್ ಪೆಪ್ಪರ್‌ಮೆಂಟ್! ನಿನ್ನ ಹುಲಿ ಹಿಡಿದಂತೆ, ಘನಕಿರ್ಷ ಘೋರ್ಪಡೆ ರಕ್ತ ಹೀರುತ್ತಿದ್ದಂತೆ ಕನಸು ಕಂಡೆ! ಎಂಥ ಭಯಂಕರ!"

"ಒಂದು ಕನಸಿಗಾಗಿ ಹೆದರಿದೆಯಾ ? ಸುಮ್ಮನೆ ಮಲಗೋಣ."

ಮೂವರೂ ಅಕ್ಕಪಕ್ಕದಲ್ಲಿ ಪುನಃ ಮಲಗಿದರು. ಕನಸಿನ ಭಯದಿಂದಲೋ, ಜ್ವರದ ತಾಪದಿಂದಲೋ, ಭವಿಷ್ಯದ ಭಯದಿಂದಲೋ ಶ್ಯಾಮಲಾ ರಾತ್ರಿಯನ್ನು ನಿದ್ದೆಯಿಲ್ಲದೆ ಕಳೆದಳು.

ಬೆಳಗಾಗುತ್ತಲೂ ಮುಖಮಜ್ಜನ ಮಾಡಿ ಒಂದು ಲೋಟ ನೀರು ಕುಡಿದು ಮತ್ತೆ ಹಾಸಿಗೆ ಸೇರಿದಳು. ಆಫೀಸಿಗೆ ರಜೆಗಾಗಿ ಬರೆದುಕೊಳ್ಳಬೇಕಿತ್ತು. ಮಾನಸಿಕ ತುಮುಲದಿಂದ ಬರೆದುಕೊಳ್ಳಲೂ ಸಾಧ್ಯವಾಗದು. ಆದರೂ, ಬರೆದುಕೊಳ್ಳಲೇ ಬೇಕು....ಕಾಗದ ಪೆನ್ನು ತೆಗೆದುಕೊಂಡು ಎರಡು ಪಂಕ್ತಿ ಬರೆದು ತಾನೇ ಹೋಗಿ ಪೋಸ್ಟಿಗೆ ಹಾಕಿ ಬಂದಳು.

"ಜ್ವರ ಬಂದವಳು ಏಕೆ ಹೋಗಿದ್ದೆ ಮಗಳೇ! ನಾನೇ ಹಾಕಿ ಬರುತಿದ್ದೆ" ಎಂದಳು ತಾಯಿ.

ಶಾಲೆ ಬಿಟ್ಟೊಡನೆಯೇ ಮನೆಗೆ ಓಡೋಡಿ ಬಂದ ಶರತ್ ಒಂದೇ ಬಾರಿಗೆ ವಿಷಯವನ್ನು ಮುಂದಿಟ್ಟ "ಶ್ಯಾಂ, ನಿನ್ನ ಗಂಡ ಮಹಾಶಯನನ್ನು ನೋಡಿದೆ ಕಣೆ ? ಒಳ್ಳೆ ಘಟೋತ್ಕಜ ಎಂದರೂ ಎನ್ನಬಹುದು. ಎಲ್ಲಾ ತಂದೆಯಂತೆಯೇ ಇದ್ದಾನೆ! ಅದೇ ಮೈ, ಅದೇ ಬಣ್ಣ, ಅವನ ಮಗ್ಗುಲು ಮನೆಯ ಹುಡುಗ ನನ್ನ ಕ್ಲಾಸ್ ಮೇಟ್. ಅವನೇ ನನಗೆ ತೋರಿಸಿದ. ಹರಿಕಿಷನ್ ಅರ್ಧ ಆಯಸ್ಸು ಕಳೆದ ಮುದುಕ. ಅವನಿಗೆ ಹುಟ್ಟಿನಿಂದಲೂ ಮಲರೋಗ ಇದೆಯಂತೆ! ಅದೇನೋ ಒಂದು ಮಾತ್ರೆ ತಿಂದು ಹೊರಟರೆ ಒಂದು ದಿನ ಅಥವಾ ಅರ್ಧ ದಿನ ಮೂರ್ಛೆ ಬರುವುದಿಲ್ಲವಂತೆ. ಅವನು ಹೊರಹೋಗುವಾಗ ಮಾತ್ರೆ ತಿಂದು ಹೊರಡುತ್ತಾನಂತೆ! ಅದು ಹೆಚ್ಚು ತಿಂದರೆ ಒಳ್ಳೆಯದಲ್ಲವೆಂದು ಅವನನ್ನು ಹೆಚ್ಚು ಹೊರಗಡೆ ಕಳುಹಿಸುತ್ತಿಲ್ಲವಂತೆ! ನೋಡು, ಹೀಗಿದೆ ಸಮಾಚಾರ! ಅಪ್ಪನ ಹಾಳು ಹವ್ಯಾಸ ಇಷ್ಟಕ್ಕೆ ದಾರಿ ಮಾಡಿದೆ!" ದನಿಯಲ್ಲಿ ಧೀರ ಗಂಭೀರತೆ ಉಕ್ಕಿ ಹರಿಯಿತು. ಕಣ್ಣುಗಳು ಭಾವೋದ್ವೇಗದಿಂದ ಜ್ವಲಿಸಿದುವು.

"ಇದನ್ನು ಅಂದೇ ಬಾಸ್ ಹೇಳಿದ್ದರು. ಈ ದುಷ್ಟತನಕ್ಕೆ ಮದ್ದೇನು? ಶರತ್, ನೀನು ಹೇಳು, ನಾನೇನು ಮಾಡಲಿ ಈಗ ?"

"ಅಪ್ಪನಿಗೆ ನೀನೇ ಮದುವೆಯಾಗು ಎಂದು ಧೈರ್ಯವಾಗಿ ಹೇಳು!"

"ಅಪ್ಪನ ಮುಂದೆ ಬ್ರಹ್ಮನೂ ಹಿಂಜರಿದಾನು!"

"ಅಪ್ಪನಿಗೆ ಬುದ್ಧಿ ಕಲಿಸುವುದರಲ್ಲಿ ನಾನೇ ಬ್ರಹ್ಮ!"

"ಸಧ್ಯ, ಗಲಾಟೆ-ಗೊಂದಲಕ್ಕೆ ಅವಕಾಶ ಕೊಡಬೇಡ, ಮಹರಾಯ!"

ಶಾಂತಲಾಗೆ ತಲೆ ಬಾಚಿ ಜಡೆ ಹೆಣೆಯುತಿದ್ದ ಗೌರೀಮಾ ಕಣ್ಣುಗಳಲ್ಲಿ ಕಂಬನಿದುಂಬಿ ನುಡಿದಳು "ಮನೆಯಲ್ಲಿ ಹೇಳದೆ ಕೇಳದೆ ಮಾತು ಕೊಡುತ್ತಾರೆಯೇ? ಎಂತಹ ಧೂರ್ತತನ! ಸೂಕ್ತ ವರನಾದರೆ ಒಂದು ರೀತಿ. ಸಾಲಕ್ಕಾಗಿ ಮಕ್ಕಳನ್ನು ಮಾರುವುದುಂಟೇ ? ಈ ಕರ್ಮಕಾಂಡವನ್ನು ನೋಡಲೆಂದೇ ಭಗವಂತ ನನಗೆ ಆಯಸ್ಸು ಕೊಟ್ಟಿದ್ದಾನೆ."

ಶ್ಯಾಮಲಾ ತನ್ನಲ್ಲೇ ಯೋಚಿಸಿದಳು. ಹೇಗೆ ಇದರ ಪರಿಹಾರ ? ಮನೆಯಲ್ಲಿ ಇರೋಣವೇ ಅಪ್ಪನ ಕಾಟ ತಪ್ಪುವಂತಿಲ್ಲ; ಹೊರ ಹೋಗೋಣವೇ ರಕ್ಷಣೆ ಸಿಗುವುದಿಲ್ಲ. ಇಂಥ ಬದುಕಿನಲ್ಲಿ ಬಾಳುವುದಾದರೂ ಏಕೆ ? ಪ್ರಶ್ನೆಯ ಮೇಲೆ ಪ್ರಶ್ನೆ ಏಳುತ್ತಲೇ ಇದೆ. ಶಾಂತಲಾ ಬೇರೆ ಹೀಗಿದ್ದಾಳೆ. ನಾನಿಲ್ಲವಾದರೆ ಅಮ್ಮನಿಗೂ ಕಷ್ಟವೇ.

ಆ ಸರ್ವಶಕ್ತನೇ ಈ ಭಂಗ ಬವಣೆಯನ್ನು ಬಗೆಹರಿಸಬೇಕು.... ಯೋಚನೆಯಾಳಕ್ಕೆ ಇಳಿಯುತ್ತಲೂ ಕಣ್ಣುಗಳು ಮತ್ತೆಮತ್ತೆ ಪುನಃಪುನಃ ತೊಯ್ದುವು. ಶಾಂತಲಾ ಸ್ವಲ್ಪ ಹೊತ್ತು ಗಂಭೀರವಾಗಿದ್ದಳೇನೋ ಅನಂತರ ನುಡಿದಳು.

"ಅಕ್ಕಾ! ಸುಮ್ಮನೆ ಅಳುತ್ತಲೇ ಇದ್ದರೆ ಯೋಚನೆ ಬಗೆ ಹರಿಯುವುದಿಲ್ಲ. ದೃಢ ಮನಸ್ಸಿನಿಂದ ಯೋಚಿಸಿದರೇನೇ ವಿಷಯ ನಿಚ್ಚಳವಾಗಿ ಹೊಳೆಯಬೇಕಾದರೆ. ಅಂದಿಂದಿಗೂ ಕಣ್ಣೀರಿಡುವುದೇ ಆದರೆ ನಿನ್ನ ಸ್ಥಿತಿ ಗತಿ ಏನಾಗಬೇಡ....? ಅಳುವುದಕ್ಕಿಂತ ಪಾರಾಗುವ ಯೋಚನೆ ಮಾಡು."

ಆ ಸಣ್ಣಮಗಳು ಸಮಯೋಚಿತವಾಗಿ ಕೊಡುವ ಸಲಹೆ ವಿಚಾರಶೀಲವಾದುದು. ಅಂಥ ಸಲಹೆ ಹೊರಬಿದ್ದಾಗ ತಮ್ಮ ದೌರ್ಬಲ್ಯ ಧುತ್ತೆಂದು ಎದುರು ನಿಲ್ಲುತ್ತದೆ, ಸುಪ್ತ ವಿಚಾರ ಶಕ್ತಿಯನ್ನು ಹೊಡೆದೆಬ್ಬಿಸುವಂತೆ. ಆಗ ತಮಗೆ ತಾವೇ ನಾಚಿಕೊಳ್ಳುವುದು ಅನಿವಾರ್ಯ.

ಮೂರು ದಿನಗಳಿಂದ ಆಫೀಸಿಗೆ ಹೋಗಿರಲಿಲ್ಲ, ಶ್ಯಾಮಲಾ. ಇಂದು ಜ್ವರ ಬಿಟ್ಟುದುದರಿಂದ ಹೊರಟಳು. ಮೈಮನಗಳು ದಣಿದಿದ್ದುದರಿಂದ ಕೆಲಸ ಮಾಡುವ ಹುರುಪೇ ಇಲ್ಲ.

ಶಾರದಾ ಕರ್ವೆ ತಲೆಯೆತ್ತಿ ನೋಡಿ "ಏನಮ್ಮಾ ಹೇಗಿದ್ದೀ? ನೀನು ಕೆಲವು ದಿನ ಸುಧಾರಿಸಿಕೊಂಡೇ ಬರಬಹುದಾಗಿತ್ತು, ತುಂಬಾ ನಿಶ್ಶಕ್ತಿಯಾಗಿ ತೋರುತಿದ್ದಿ."

"ಪರವಾಯಿಲ್ಲ ಮಾಡಬಲ್ಲೆ. ಪಂಡರೀ ಬರಲಿಲ್ಲವೇ ?"

"ಬಂದಿದ್ದಾಳೆ....ಒಳ ಹೋಗಿದ್ದಾಳೆ."

ಶ್ಯಾಮಲಾ ನೇರವಾಗಿ ಬಾಸ್ ಕೊಠಡಿಗೆ ಹೋದಳು. ಅವನು ಸಿಗರೇಟ್ ಹಚ್ಚಿ ದಿನಪತ್ರಿಕೆಯಲ್ಲಿ ಕಣ್ಣಾಡಿಸುತ್ತಿದ್ದ.

ಬಾಗಿಲಲ್ಲಿ ಕಟ ಕಟ ಸದ್ದು ಮಾಡಿದಳು ಶ್ಯಾಮಲಾ.

"........"

ಕಟ. ಕಟ. ಕಟ. ಕಟ.

"Yes please!"

"ಶ್ಯಾಮಲಾ ಒಳ ಹೆಜ್ಜೆ ಇಟ್ಟಳು. ಡಾ||ಫರೀದ್ ಅವಳ ಮುಖವನ್ನು ನಿಟ್ಟಿಸಿ ನೋಡಿ "ಈಗ ಹೇಗಿದ್ದೀ ? ಜ್ವರ ಬಿಟ್ಟಿದೆಯೇ ?" ಎಂದ.

"ಇಂದು ಬಿಟ್ಟಿದೆ."

"ಎರಡು ದಿನ ಸುಧಾರಿಸಿಕೊಂಡೇ ಬರಬಹುದಾಗಿತ್ತು."

''ಇಲ್ಲಿ ತೊಂದರೆಯಾಗಬಹುದೆಂದು ಬಂದೆ.''

''ಆರೋಗ್ಯ ಮುಖ್ಯ....''ಸ್ವಲ್ಪ ಹೊತ್ತು ಸುಮ್ಮನಿದ್ದ ಅವನು ಪುನಃ ''ನಿನ್ನ ಮದುವೆಯ ವಿಚಾರ ಏನಾಯ್ತು ?''

''ನಾನು ಒಪ್ಪಿಕೊಂಡಿಲ್ಲ....ಅಪ್ಪ ಬಲಾತ್ಕರಿಸುತ್ತಿದ್ದಾರೆ.''

''ನಿನಗಿಷ್ಟವಿಲ್ಲವಾದರೆ ಒಪ್ಪಿಕೊಳ್ಳಬೇಡ.''

''ಅದೇ ಕಷ್ಟಕ್ಕೆ ಬಂದಿದೆ....''

ತನ್ನನ್ನು ತಾನು ಪ್ರಯತ್ನ ಪೂರ್ವಕವಾಗಿ ನಿಗ್ರಹಿಸಿಕೊಂಡಳಾದರೂ ಮುಖಬಿಂಬ ನಸುಗೆಂಪು ತಳೆದು ವಂಚಿಸಿತು. ನೋಟ್‌ಬುಕ್ ತೆಗೆದುಕೊಳ್ಳುವ ನೆವದಲ್ಲಿ ಕಪಾಟಿನ ಕಡೆಗೆ ಹೋದಳು.

''ತಂದೆಯಾದವರು ವಿವೇಚನೆ ಇಲ್ಲದೆ ವರ್ತಿಸಿದರೆ ಆಗುವುದೇ ಹೀಗೆ.''

''........''

''ಈಗ ಮುಂದೇನು ಮಾಡುತ್ತಿ ?''

''ದೇವರಿಗೇ ಗೊತ್ತು.''

''ಗಂಗಾರಾಂ ಮಾತುಕೊಟ್ಟಿದ್ದಾರಂತೆ;ನಿನ್ನನ್ನು ಕೇಳಲಿಲ್ಲವೇ ?''

''ಇಲ್ಲವೇ ಇಲ್ಲ....'' ಸಣ್ಣಗೆ ಗೋಣು ಆಡಿಸಿದಳು ಅವಳು.

''ನಿನಗೆ ಇದರಿಂದ ತೊಂದರೆ ಆಗುವುದಾದರೆ ನನಗೆ ತಿಳಿಸು. ಖಂಡಿತ ನಿನಗೆ ನಾನು ಸಹಾಯ ಮಾಡಬಲ್ಲೆ.''

''ತುಂಬ ಥ್ಯಾಂಕ್ಸ್!''

* * *

ಗಂಗಾರಾಂ ಮನೆಗೆ ಬಂದಾಗ ಶ್ಯಾಮಲಾ ಶರತ್ ಇನ್ನೂ ಮನೆಗೆ ಬಂದಿರಲಿಲ್ಲ.

''ಗೌರೀ....!''ಅಲ್ಲಿಂದಲೇ ಕೂಗಿದ ಗಂಗಾರಾಂ.

ಗೌರೀಮಾ ಹೊರಬಂದು ಕೇಳಿದಳು ''ಕರೆದಿರಾ ?''

''ಒಂದು ಬಿಸಿ ಕಾಫಿ ತಾ.''

ಅವಳು ಕಾಫಿಯನ್ನು ತಂದು ನೀಡುತ್ತಲೂ ಕೇಳಿದ ''ಏನು ಹೇಳುತ್ತಾಳೆ ಶ್ಯಾಂ? ನಾನು ಮಾತು ಕೊಟ್ಟಾಗಿದೆ. ಇನ್ನು ತಪ್ಪಿಸುವಂತಿಲ್ಲ. ಕೋಟ್ಯಾಧೀಶ ಘೋರ್ಪಡೆ. ಮೊಮ್ಮಕ್ಕಳ ಕಾಲಕ್ಕೂ ಮುಗಿಯದಂತಹ ಸಂಪತ್ತು. ಶ್ಯಾಂ ರಾಣಿಯಂತಿರಬಹುದು ಅಲ್ಲಿ. ಅವಳು ಪುಡಿಗಾಸಿಗೆ ದುಡಿಯಬೇಕಾಗಿಲ್ಲ!''

''ಅವಳ ಇಚ್ಛೆಯೇನೆಂಬುದನ್ನು ತಿಳಿದುಕೊಂಡಿದ್ದರೆ ಒಳ್ಳೆಯದಿತ್ತು.''

ಆ ಮಾತನ್ನು ಹೊರಹಾಕಬೇಕಾದರೆ ಎದುರು ನಿಲ್ಲಲು ಧೈರ್ಯವಾಗದೆ ಅಡಿಗೆಯ ಮನೆಯ ಬಾಗಿಲ ಹಿಂದೆ ನಿಂತು ನುಡಿಯುವ ಸಾಹಸ ಮಾಡಿದಳು ಅವಳು.

''ಅವಳನ್ನೇನು ಕೇಳುವುದು ? ಯಾರಾದರೂ ಕೋಳಿ ಕೇಳಿ ಕಾರ ಅರೆಯುತ್ತಾರೆಯೇ ?'' ಹಿರಿಯ ದನಿಯಲ್ಲಿ ಗುಡುಗಿದ ಗಂಗಾರಾಂ.

''.......''

''ಅವನಿಂದ ಸಾಲ ಬೇರೆ ತೆಗೆದಿರುವೆ. ಹೆಣ್ಣುಕೊಟ್ಟರೆ ಸಾಲವೂ ಸಂದಾಯವಾಗುತ್ತೆ.''

ಗೌರೀಮಾ ಅಲ್ಲಿಂದಲೇ ಉತ್ತರಿಸಿದಳು''ಸಾಲ ತೆಗೆಯಬೇಕಾದ ಪ್ರಮೇಯವಿರಲಿಲ್ಲ.... ನಮ್ಮಲ್ಲಿ ಯಾವ ಹಿರಿಯ ಖರ್ಚೂ ಬಂದಿಲ್ಲ. ಮತ್ತೇಕೆ ಸಾಲ ? ವಿನಾಕಾರಣ ಸಾಲ ಮಾಡಿ ಮಗಳನ್ನೇಕೆ ಬಲಿ ಕೊಡುತ್ತೀರಿ ? ಸ್ವಲ್ಪ ಸ್ವಲ್ಪವಾಗಿ ಸಾಲ ತೀರಿಸಿ ಬಿಡಿ.''

''ನಿನಗ್ಯಾರೇ ಅಧಿಕಾರ ಕೊಟ್ಟವರು ಇಷ್ಟು ಮಾತಾಡಲಿಕ್ಕೆ ? ನೀನು ಯಾವ ಮಹಾ ಬುದ್ಧಿವಂತೆ ಎಂದು ನನಗೆ ಹೇಳುತ್ತಿ ?''ಸಿಟ್ಟಿನಿಂದ ಒದರಿದ.

''ನೀವು ಇಷ್ಟೊಂದು ಸಿಟ್ಟಾದರೆ ಹೇಗೆ ? ಸ್ವಲ್ಪ ಸಮಾ.... ''

ಅವಳ ಮಾತು ಮುಂದುವರಿಯಗೊಡದಂತೆ ಗುಡುಗಿದ ''ನಿಮ್ಮನ್ನೆಲ್ಲಾ ಇಲ್ಲಿ ಕೂರಿಸಿ ಬಿಟ್ಟ ಕೂಳು ಬಡಿಯಲಿಕ್ಕೆ ನಿನ್ನಪ್ಪ ಹಣ ಕಳುಹಿಸುತ್ತಾನೇನು ?''

''ಸರಿ, ಸರಿ ಆ ಪಾಪದ ಮಗುವನ್ನೇಕೆ ಮಾರುತ್ತೀರಿ ? ನನ್ನನ್ನೇ ಮಾರಿಬಿಡಿ.'' ಒಳಗಿಂದಲೇ ನುಡಿ ಹೊರಬಿತ್ತು. ದುಃಖ ಸಂತಾಪಗಳು ಎದೆಯನ್ನು ಕಲ್ಲಾಗಿಸಿದ್ದುವು.

ಗಂಗಾರಾಂ ಭಯಂಕರನಾದ. ಗಂಟಲು ಹರಿಯುವಂತೆ ದನಿ ಹೊರಬಿತ್ತು.

''ನಿನ್ನ ಕೊಳ್ಳುವಂತ ಮೂಳ ಯಾರಿದ್ದಾನು ಈ ಪ್ರಪಂಚದಲ್ಲಿ ಚಂಡಾಳಿ ?''

ಹಿಂದಿನ ದಿನಗಳಲ್ಲಾಗಿದ್ದಿದ್ದರೆ ಗಂಗಾರಾಂ ನಾಲ್ಕು ಗುದ್ದು ಹೇರುತ್ತಿದ್ದನೇನೋ. ಶರತ್ ಎದುರು ನಿಂತಾಗಿನಿಂದ ಬಡ ಜೀವಗಳ ಮೇಲೆ ಕೈಯೆತ್ತುವ ಸಾಹಸ ಮಾಡಲಾಗಲಿಲ್ಲ. ಸಿಟ್ಟು-ಕೋಪಗಳಿಂದ ಫೂತ್ಕರಿಸಿ ಪಚ ಪಚ ಮಾತಾಡಿ ದಡ ದಡ ಮೆಟ್ಟಿಲಿಳಿದು ಹೋಗಿಯೇ ಬಿಟ್ಟ.

ಅದುವರೆಗೂ ಪುಸ್ತಕದ ಮೇಲೆ ಕಣ್ಣಿಟ್ಟಿದ್ದ ಶಾಂತಲಾ ತಂದೆ ನಡೆದು ಹೋದ ರೀತಿಯನ್ನೇ ನಿಟ್ಟಿಸಿ ನೋಡಿದಳು. ಮೈಮನಸಗಳು ಮುದುಡಿಕೊಂಡುವು. ಅರ್ಥ

ವಯೋಮಾನ ಸಂದವ. ವಿದ್ಯಾವಂತ-ಅಧಿಕಾರಸ್ಥಾನ ಹೊಂದಿದವ. ನಾಗರಿಕತೆ ಯನ್ನು ಅರಿತವ. ಅಂದಮೇಲೆ ಏಕೆ ಹೀಗೆ? ಅದೇ ಅರ್ಥವಾಗುವುದಿಲ್ಲ. ಒಪ್ಪು-ತಪ್ಪು ಗಳ ಮೌಲ್ಯವನ್ನು ಅರಿತು ಅಡ್ಡಹಾದಿ ಹಿಡಿಯುವುದು ಸರಿಯೇ ?

ಎಳೆಯ ಮನದಲ್ಲಿ ನಡೆಯುತ್ತಿದ್ದ ವಿಚಾರವಿಪ್ಲವ ಸಾಮಾನ್ಯವಲ್ಲ.

ಗೌರೀಮಾ ಮುಂದಣ ಬಾಗಿಲನ್ನು ಮುಚ್ಚಿ ಶಾಂತಲೆಯ ಬಳಿ ಕುಳಿತು "ಶಾಂತೀ! ನಿನ್ನ ಅಪ್ಪ ಹೀಗೆಲ್ಲಾ ಮಾತಾಡಿದರೆಂದು ಶ್ಯಾಮಲೆಯೊಂದಿಗೆ ಹೇಳ ಬೇಡ ಆಯಿತೇ ? ಅವಳು ತುಂಬ ನೊಂದುಕೊಳ್ಳುತ್ತಾಳೆ. ದೇವರು ನಮಗೆ ಕೊಡಬಾರದ ಕಷ್ಟ ಕೊಡುತ್ತಿದ್ದಾನೆ. ಇದೆಲ್ಲಾ ಎಂದಿಗೆ ಬಗೆ ಹರಿಯುವುದೋ ಕಾಣೆ." ಎಂದಳು ಮುಖಭಾವ ಅತ್ಯಂತ ಖಿನ್ನವಾಗಿತ್ತು.

"ಸಮಸ್ಯೆ ಬಗೆ ಹರಿಯುವುದು ಹೇಗೆ ಅಮ್ಮಾ ?"

"ಶ್ಯಾಮಲಾ ಆಗುವುದಿಲ್ಲ ಎನ್ನುವುದೊಂದೇ ದಾರಿ. ಆದರೆ ಇವರ ಸಿಟ್ಟು-ಕೋಪಗಳು ಇನ್ನಾವ ರಾದ್ಧಾಂತಕ್ಕೆ ದಾರಿ ಮಾಡುವುದೋ ದೇವರಿಗೇ ಗೊತ್ತು. ನನಗೆ ದುಃಖಕ್ಕಿಂತ ಭಯವೇ ಹೆಚ್ಚಾಗಿದೆ. ಶಾಂತ ಸ್ವಭಾವವಾದರೆ ಹೇಳಿ-ಕೇಳಿ ವಿಚಾರವಿನಿಮಯ ಮಾಡಿಕೊಳ್ಳಬಹುದು. ಇವರದು ಹಾಗಲ್ಲ, ನಮಗೆಹೇಳಿಕೊಳ್ಳಲು ಅವಕಾಶವೇ ಇಲ್ಲ."

"ಇವರೇಕೆ ಹೀಗೆ ? ನನಗೇನೂ ಅರ್ಥವಾಗುವುದಿಲ್ಲ."

"ಕುಡಿತದ ಕೆಟ್ಟ ಚಾಳಿ...."

"ಕುಡಿತ ಕಲಿತವರೆಲ್ಲಾ ಹೀಗೆಯೆ ?"

"ನಮಗೆ ಎಲ್ಲರ ವಿಚಾರ ಹೇಗೆ ಗೊತ್ತಾದೀತು ? ಇವರದು ಮಾತ್ರ ಅಂದಿಂದಿಗೂ ಹೀಗೆಯೇ....ಒಂದಿನದಾದರೂ ನಾನು ಈ ಸಂಸಾರದಲ್ಲಿ ಸುಖ ವನ್ನು ಕಾಣಲಿಲ್ಲ. ದಿನವೂ ಕಣ್ಣೀರು ಕಾವೇರಿಯಾಗಿ ಹರಿದುಹೋಗಿದೆ. ಈಗೀಗ ಕಣ್ಣೀರಿನ ಕಟ್ಟೆ ಬತ್ತಿದೆಯೇನೋ ಅಳುತ್ತೇನೆಂದರೂ ಕಂಬನಿ ಹರಿಯದು ಎನಿಸುತ್ತೆ. ಮುಂದೆ ದೇವರೇ ಕಾಪಾಡಬೇಕು. ಈ ಸಮಸ್ಯೆ ನಮಗೆಂದೂ ಬಗೆ ಹರಿಯುವಂತೆ ತೋರುವುದಿಲ್ಲ. ಮಗೂ!"

"ನಾವೆಲ್ಲರೂ ಒಗ್ಗಟ್ಟಾದರೆ ಅಪ್ಪನ ಆಟ ನಡೆಯುವುದಿಲ್ಲ."

"ಅವರು ಮಾತು ಕೊಟ್ಟಿರುವೆ ಎನ್ನುತ್ತಿದ್ದಾರೆ ಏನು ಮಾಡೋಣ ?"

"ತಪ್ಪು ಅವರದೇ."

"ಅವರು ಒಪ್ಪಿಕೊಳ್ಳಬೇಕಲ್ಲ ? ತೀರಾ ಸ್ವೇಚ್ಛಾಪ್ರವೃತ್ತಿ."

"ಅದೇ ಬಹಳ ಕಷ್ಟ." ಖಿನ್ನ ಮುಖದಿಂದ ನುಡಿದಳು ಶಾಂತಲಾ.

ಗೌರೀಮಾ ಮೌನಭಾರದಿಂದ ಉಸಿರಾಡಿದಳು.

## ೧೫

"ಅಮ್ಮಾ! ಅಮ್ಮಾ!"

"ಏನಪ್ಪಾ ?"

"ನಾನು ಕ್ರಿಕೆಟ್ ಟೆಸ್ಟ್ ಮ್ಯಾಚಿಗೆ ಆರಿಸಲ್ಪಟ್ಟೆ!"

"ನಿಜವಾಗಿ ?"

"ಹೌದು.... ಅಲ್ಲಿ ಗೆದ್ದು ಬಂದರೆ ನಾನು ಕ್ರಿಕೆಟ್ ಮ್ಯಾಚಿಗೆ ಆರಿಸಲ್ಪಡುವುದು ದಿಟ."

"ಈಗಾಗಲೇ ಅಷ್ಟು ತಯಾರಿ ಕೈಗೂಡಿದೆಯೆ ನಿನಗೆ ?"

"ಓಹೋ! ಎಂತಹ ಧೀರನಿರಲಿ, ನನ್ನ ಮುಂದೆ ತಲೆ ತಗ್ಗಿಸಲೇ ಬೇಕು!" ತೋಳು ಚಪ್ಪರಿಸಿದ ಶರತ್.

"ಒಂದೇ ಸಲ ಗಗನಕ್ಕೆ ಹಾರಹೋದರೆ ರೆಕ್ಕೆ ಸುಡುತ್ತವೆ! ಹಂತ ಹಂತವಾಗಿ ಮೇಲೇರಬೇಕು. ನೀನಿನ್ನೂ ಚಿಕ್ಕವನು, ಬೇಕಾದಷ್ಟು ಸಮಯವಿದೆ. ಅವಸರ ಮಾಡಬೇಡ ಮಗೂ!"

ಶಾಂತಲಾ ಅವನ ಎಣೆಯಿಲ್ಲದ ಉತ್ಸಾಹವನ್ನು ಮನದುಂಬಿಕೊಂಡು ತನ್ನ ದುರದೃಷ್ಟಕ್ಕಾಗಿ ತನ್ನನ್ನು ಮನದಲ್ಲೇ ಹಳಿದುಕೊಂಡಳು. ಭಗವಂತ ತಲೆತುಂಬಾ ಬುದ್ಧಿಕೊಟ್ಟು ಕಾಲು ಮುರಿದು ಕೂರಿಸಿದ ಮೂಲೆ ಗುಮ್ಮ ಮಾಡಿ.... ಎಲ್ಲರಂತೆ ನಾನೂ ಶಾಲೆಗೆ ಹೋಗುವಂತಿದ್ದರೆ ಎಷ್ಟು ಕಲಿಯುತಿದ್ದೆ. ಎಷ್ಟು ಬಹುಮಾನ ಪಡೆಯುತ್ತಿದ್ದೆ.... ಅಕ್ಕ ಎಷ್ಟೆಷ್ಟು ಟಾನಿಕ್ ತಂದಿಡುತ್ತಾಳೆ. ನನಗದನ್ನು ಕುಡಿಯಲು ಮನಸ್ಸೇ ಬರುವುದಿಲ್ಲ. ಮೂಲೆಯಲ್ಲಿರುವುದಕ್ಕೆ ಟಾನಿಕ್ ಏಕೆ ಬೇಕು ? ಹಾಗೆಂದರೆ ಶ್ಯಾಂ ಕೇಳುವುದೇ ಇಲ್ಲ....

ಒಂದೆರಡು ಗಳಿಗೆ ಸುಮ್ಮನಿದ್ದರೂ ಏನೆಲ್ಲಾ ಯೋಚನೆ ಬರುತ್ತದೆ.... ನನಗೆ ನಿಜವಾಗಿಯೂ ಹೇಳುವುದಾದರೆ ಈ ಬಗೆಯ ಬದುಕಾದರೂ ಏಕೆ ಬೇಕು ? ಹೀಗಿರುವುದಕ್ಕಿಂತ ಸಾಯುವುದು ಲೇಸಲ್ಲವೇ ? ಹಾಗೆಂದರೆ ಅಮ್ಮ ಕೇಳುವುದೇ ಇಲ್ಲ. ಕೆಟ್ಟ ಯೋಚನೆ ಮಾಡಬೇಡ ಎಂದು ಬಿಡುತ್ತಾರೆ. ಒಂದಲ್ಲ ಒಂದು ದಿನ

ಕಾಲು ಸರಿಹೋಗುವ ನಂಬಿಕೆ ಅವರಿಗೆ....ಅಯ್ಯೋ, ಇದೆಂದಾದರೂ ಸರಿ ಹೋಗುವುದುಂಟೇ? ಎಷ್ಟೆಷ್ಟೋ ದೀನ ದಲಿತರಿಗೆ ಭಗವಂತ ಪ್ರತ್ಯಕ್ಷವಾಗಿ ಸಹಾಯ ಮಾಡಿದ್ದಾನಂತೆ ನನಗೇಕಿಲ್ಲ? ನನ್ನ ಪುಸ್ತಕಗಳಲ್ಲಿ ಗುರುತಿಡುವೆಡೆಗಳಲ್ಲಿ ಎಷ್ಟೊಂದು ದೇವರ ಚಿತ್ರಗಳಿವೆ ನಾನು ಎಷ್ಟು ಧ್ಯಾನಿಸಿದರೂ ಆ ದೇವರು ಮಾತ್ರ ದೂರವೇ....

''ಏನಮ್ಮಾ, ಮಂಕಾಗಿ ಕುಳಿತು ಬಿಟ್ಟೆ?'' ಕೇಳಿದಳು ಗೌರೀಮಾ.

''ಶರತ್ ಅದೃಷ್ಟವನ್ನು ಹೇಳಿಕೊಳ್ಳುವಾಗ ನನ್ನ ದುರದೃಷ್ಟಕ್ಕೇನು ಮಾಡಲಿ ಎಂಬ ಯೋಚನೆ ಬಂತು. ಏನು ಮಾಡಿದರೆ ಸರಿ ಹೋಗುತ್ತದೆ ಹೇಳಿ. ಎಷ್ಟ ದಿನ ಹೀಗೆ ಮೂಲೆಯಲ್ಲಿರಲಿ....?'' ದನಿ ಎದೆಯಾಳದಿಂದ ಹರಿದು ಬಂತು. ಕಣ್ಣುಗಳಲ್ಲಿ ಫಳಕ್ಕನೆ ನೀರಾಡಿತು.

''ಅದಕ್ಕೂ ಒಂದು ಕಾಲ ಬರಬೇಕು....ಒಳ್ಳೆಯ ಗಳಿಗೆ ಬಂದಾಗ ಸರಿಹೋಗ ಬಹುದು. ಸಹನೆ ಎಂಬುದು ತುಂಬಾ ದೊಡ್ಡಗುಣ ಅಮ್ಮಣ್ಣೆ! ಆದ್ದರಿಂದ ಚಿಂತೆ ಹಚ್ಚಿಕೊಳ್ಳಬೇಡ. ದೇವರು ದೊಡ್ಡವನು. ಎಂದಾದರೂ ದಯೆತೋರಿಯಾನು. ಕಾದು ನೋಡುವುದು ಒಳ್ಳೆಯದು.''

''ಒಂದು ವೇಳೆ ಸರಿಹೋಗದೆ ಇದ್ದರೆ....?''

''ಆ ನಿರಾಸೆ ಏಕೆ ? ಭವಿಷ್ಯದಲ್ಲಿ ನಂಬಿಕೆಯಿಡಬೇಕು. ನಂಬಿಕೆ ಕೆಟ್ಟರೆ ಉಳಿಯುವುದಾದರೂ ಏನು ?''

ಮೈದಡವಿ ಮುದ್ದುಗೈದು ಬೊಗಸೆಯಲ್ಲಿ ಮುಖವನ್ನು ಹಿಡಿದು ನೋಡುತ್ತ ಪುನಃ ನುಡಿದಳು ಗೌರೀಮಾ ''ನೀನು ನೊಂದುಕೊಂಡರೆ ನನಗೆ ಒಡಲೆಲ್ಲಾ ಸಂಕಟದಿಂದ ತುಂಬಿ ಹೋಗುತ್ತೆ. ನನ್ನ ಜೀವನ ಈವರೆವಿಗೆ ಕಳೆದುದೇ ಸಂಕಟ ದಿಂದ, ಇನ್ನೂ ಇನ್ನೂ ಸಂಕಟ ಅನುಭವಿಸಲಾರೆ. ನನ್ನ ಬಾಲ್ಯವೊಂದು ಸುಖವಾಗಿ ಕಳೆದಿತ್ತೇನೋ... ಅನಂತರ ಇದೇ ಗೋಳು. ಒಂದಲ್ಲ, ಒಂದು ರೀತಿಯ ಹಿಂಸೆ, ಪರಿತಾಪ, ಸಾಕಪ್ಪಾ, ಸಾಕು ಅನಿಸಿದೆ.''

ತಾಯಿಯ ಮಾತಿಗೆ ಶರತ್ ಅಂದ ''ಸಂಕಟ, ಸಂಕಟ ಅಂದುಕೊಂಡಿದ್ದರೆ ಯಾವತ್ತೂ ಸಂಕಟವೇ. ಅದಕ್ಕೆ ಸರಿಯಾದ ಪರಿಹಾರ ಕಂಡುಕೊಳ್ಳಬೇಕು. ಶ್ಯಾಂ ಷೂ ಮಾಡಿಸಿದಳಲ್ಲಾ, ಹಾಗೆಯೇ ಆ ಷೂನಿಂದ ಈಗ ನಡೆಯಬಹುದಲ್ಲಾ; ಅದೊಂದು ಸಣ್ಣ ಪರಿಹಾರ ಶಾಂತಿಗೆ.''

''ಅಯ್ಯೋ, ಬಿಡಪ್ಪಾ, ನನ್ನ ಸಂಕಟ ಅಷ್ಟು ಸುಲಭದಲ್ಲಿ ಪರಿಹಾರವಾಗುವು ದಿಲ್ಲ. ನೀನೇನೋ ಅಪ್ಪನನ್ನು ಹೆದರಿಸಿ ಕೂರಿಸುತ್ತಿ ನಮಗೆ ಹಾಗಾಗುತ್ತದೆಯೇ ?

ಅವರು ದಯಧರ್ಮ ಅರಿತುಕೊಂಡಿದ್ದರೆ ಹೀಗಾಗುತಿತ್ತೇ ? ಇದಕ್ಕೇನು ಪರಿಹಾರ ಹೇಳು ?''

''ಅದು ಬಿಡಿ, ಮಿತಿಮೀರಿದ್ದು. ಆದರೂ ನಾವು ಒಗ್ಗಟ್ಟಿಂದ ಎದುರಿಸಿದರೆ ಪರಿಹಾರಕಂಡುಕೊಳ್ಳಬಹುದು.''ಹುಡುಗ ಧೈರ್ಯದಿಂದ ಆ ಮಾತು ಹೊರಹಾಕಿದ್ದ.

''ಮನೆಬಿಟ್ಟು ಹೋಗುತ್ತಾರಲ್ಲ, ಅದಕ್ಕೇನು ಮಾಡುತ್ತಿ ? ಅದು ನಮಗೇ ಅವಮಾನ.''

''ಇದಕ್ಕೆಲ್ಲಾ ತಲೆ ಕೆಡಿಸಿಕೊಳ್ಳಬಾರದು. ಅದು ಅವರಿಗೇ ಅವಮಾನ ಹೊರತು ನಮಗಲ್ಲ. ಈಗ ಘೋರ್ಪಡೆ ಮಗನಿಗೆ ಶ್ಯಾಮಲಾ ಮಾಲೆ ಹಾಕದಿದ್ದರೆ ಅಪ್ಪನಿಗೆ ತಾನೆ ಅವಮಾನ ? ನಾವು ಈ ರೀತಿ ಲೆಖ್ಖಾಚಾರದಿಂದಲೇ ಹೋಗಬೇಕು. ನೀವು ಹೆದರಿ ಬಾಗಿಲ ಹಿಂದೆ ನಿಂತು ಮಾತಾಡುತ್ತೀರಿ ಅದೇ ತಪ್ಪು.''

''ತೋಳ್ಬಲದ ಮುಂದೆ ನಮ್ಮದೇನು ನಡೆದೀತು ? ಆಗಲೇ ಮೈಮನ ನಜ್ಜುಗುಜ್ಜಾಗಿದೆ. ಇನ್ನೂ ಎಷ್ಟು ನೋಯಿಸಿಕೊಳ್ಳಲಿ ಹೇಳು.

''ಮಗನೇ! ಚಿಂತಾಸಮಂ ನಾಸ್ತಿ ಶರೀರ ಶೋಷಣಂ ಎನ್ನುತ್ತದೆ ಸುಭಾಷಿತ. ನನ್ನ ಮೈ ಜೀರ್ಣವಾದುದೇ ಚಿಂತೆಯಿಂದ. ಇಷ್ಟೊಂದು ಸಂಕಷ್ಟಗಳಿದ್ದರೆ ಚಿಂತೆ ಮೂಡದಿರುತ್ತದೆಯೇ ? ದುಡ್ಡು ದುಗ್ಗಾಣಿ ಇಲ್ಲದೆ ಐವರ ಬದುಕು ಸಾಗುವುದು ಹೇಗೆ ? ತಿಂಗಳಿಗಾಗುವಷ್ಟು ಸಾಮಗ್ರಿ ತಂದುಕೊಟ್ಟರಾಗಲೀ ಅಥವಾ ಹಣ ಕೊಟ್ಟರಾಗಲೀ ತೊಂದರೆಯಿಲ್ಲ. ದಿನದಿನವೂ ಅದಿಲ್ಲ-ಇದಿಲ್ಲ ಎಂದು ಪುಡಿಗಾಸಿಗಾಗಿ ಕೈಯೊಡ್ಡುವ ಕಷ್ಟ ಯಾರಿಗೆ ಬೇಕು ಹೇಳು ? ಕೇಳುವ ಮುನ್ನ ಗಂಡ ಯಾವ 'ಮೂಡ್'ನಲ್ಲಿದ್ದಾನೆ ಎಂದು ನೋಡಿಕೊಳ್ಳಬೇಕು.''

ಗೌರೀಮಾ ಮ್ಲಾನ ಮುಖಿಯಾದಳು.

* * *

ಶಾಂತಲಾ ಬೊಂಬೆಗೆ ಫ್ರಾಕ್ ಹೊಲಿದು ಮುಗಿಸಿದ್ದಾಳೆ. ಆ ಕ್ಷೀಣಿತ ಕೈಗಳಲ್ಲಿ ಸೂಜಿ ದಾರ ಆಡುವುದನ್ನು ನೋಡಿದರೆ ಒಡಲೆಲ್ಲ ಸುಖದುಃಖಗಳ ಭಂಡಾರ. ಎದೆಯಾಳದಿಂದ ನಿಟ್ಟುಸಿರೊಂದನ್ನು ಹೊರಹಾಕಿ ''ನೀನು ತುಂಬಾ ಕೈ ನೋಯಿಸಿ ಕೊಳ್ಳುತ್ತಿ. ಕೂರುವುದಕ್ಕಿಂತ ಹೆಚ್ಚು ಓಡಾಡುವುದು ಒಳ್ಳೆಯದು.''

''ಸ್ಟೀಲ್ ರಾಡ್ ತೊಡೆಗೆ ಒತ್ತುತ್ತೆ. ಹೆಚ್ಚು ಹೊತ್ತು ಓಡಾಡಿದರೆ ನೋವು. ಅದಕ್ಕೇ ಕುಳಿತು ಕೆಲಸ ಮಾಡುವೆ.''

''ಈದಿನ ಶ್ಯಾಂ ಕರವಸ್ತ್ರ ಒಯ್ದಿದ್ದಾಳೆಯೇ ?''

"ಹೌದಮ್ಮಾ, ಆರು ವಸ್ತ್ರ ಹೊಲಿದುಕೊಟ್ಟಿರುವೆ."

"ನಿನ್ನ ಬುದ್ಧಿ ಚಿಗರಿದಷ್ಟೇ ಚುರುಕಾಗಿ ಆರೋಗ್ಯವೂ ಚಿಗರಿದ್ದರೆ....ಎಂಬ ಯೋಚನೆ ಯಾವಾಗಲೂ ಬರುತ್ತೆ."

ಅವಳು ಮಾತಾಡದೆ ಬೊಂಬೆಯ ಫ್ರಾಕನ್ನು ತೆಗೆದು ತಾನು ಹೊಲಿದುದನ್ನು ತೊಡಿಸಿ ಅಂದಚೆಂದ ನೋಡಿ ಹೆಮ್ಮೆ ಪಟ್ಟು ನುಡಿದಳು "ಇದನ್ನು ಶ್ಯಾಂ ಹೇಳಿಕೊಟ್ಟದ್ದು. ಮುಂದಿನದನ್ನು ನಾನೇ ಹೊಲಿಯುವೆ!"

ಆ ಮುಹೂರ್ತದಲ್ಲಿ ಎಲ್ಲಿಯೋ ನಿರ್ಲಕ್ಷಿತ ಅಪೂರ್ವ ಕಳೆ ಬಂದೊದಗಿದಂತೆ ಕಣ್ಣುಗಳಲ್ಲಿ ಒಂದೆರಡು ಕ್ಷಣ ಮಿನುಗಿ ಮಾಯವಾಯಿತು. ಗೌರೀಮಾ ಆ ಕಣ್ಣುಗಳ ಹೊಳಪನ್ನು ನೋಡಿಯೇ ನೋಡಿದಳು. ಆ ಸನ್ನಿವೇಶ ತನ್ನನ್ನು ಗತಕಾಲಕ್ಕೆ ಸೆಳೆದೊಯ್ಯಿತು..ಶಾಂತಲಾಗೆ ಜ್ವರ ಬರುವ ಮುನ್ನಾದಿನ ಶಾಲೆಯಿಂದ ಹಿಂದಿರುಗಿದ ಕೂಡಲೇ ಮುಖಮಜ್ಜನ ಮಾಡಿ ಹೇಳಿದ್ದಳು "ಅಮ್ಮಾ! ಇನ್ನು ಮೇಲೆ ನಿಮಗೆ ಏನೆಲ್ಲಾ ಸಹಾಯ ಬೇಕೋ ಅದನ್ನು ಮೊದಲೇ ಮಾಡಿಕೊಟ್ಟು ಅನಂತರ ಹೋಂ ವರ್ಕ್ ಮಾಡಿಕೊಳ್ಳುವೆ."

"ನೀನಿನ್ನೂ ಚಿಕ್ಕವಳು. ಏಕೆ ಇಷ್ಟೆಲ್ಲಾ ಶ್ರಮವಹಿಸುತ್ತಿ ಹೇಳು ? ಮುಂದೆ ಮುಂದೆ ಮಾಡಿದರಾಯಿತು. ಈಗಲೇ ಏಕೆ ? "

"ಆಗಲಿ, ಮುಂದೆಯೂ ಮಾಡೋಣ. ಈಗಲೂ ಮಾಡೋಣ. ಏನಿದೆ ಹೇಳಿಬಿಡಿ."

"ಅಕ್ಕಿ ಆರಿಸುವುದಿದೆ."

ಅವಳು ಮುಖ ಮಜ್ಜನ ಮಾಡಿ ಅಕ್ಕಿ ಆರಿಸಲು ಕುಳಿತಾಗಲೇ ಪಾಂಚಾಲಿ ಒಳಬಂದಿದ್ದಾಳೆ. ಮನೆಗೆ ಮರಳಿದ ಕ್ಷಣವೇ ಕೆಲಸಕ್ಕೆ ತೊಡಗಿದ ಗೆಳತಿಯನ್ನು ನೋಡಿ "ಇದೇನು, ಈಗಲೇ ಕೆಲಸ ಹಿಡಿದಿದ್ದೀ ? ಹೊಟ್ಟೆಗಿಷ್ಟು ಏನಾದರೂ ತಿಂದೆಯೋ, ಇಲ್ಲವೋ ?"

"ಅಮ್ಮ ತಿಂಡಿ ಅಣಿ ಮಾಡುವುದರೊಳಗಾಗಿ ಇದಿಷ್ಟು ಮಾಡಿಕೊಟ್ಟರೆ ಸ್ವಲ್ಪಹೊತ್ತು ಆಟ. ಅನಂತರ ಹೋಂ ವರ್ಕ್ ಮಾಡಿಕೊಳ್ಳಲು ಅನುಕೂಲ. ಅಮ್ಮನಿಗೆ ಸಹಾಯಕರಿಲ್ಲ. ಕೆಲಸ ಕಷ್ಟವಾಗುತ್ತೆ. ಅದಕ್ಕೆ ನಾನು ಮಾಡಿಕೊಡುವೆ. ಬಾ, ಇಲ್ಲೆ ಮಣೆಯ ಮೇಲೆ ಕುಳಿತುಕೋ. ಮಾತಾಡುತ್ತ ಕೆಲಸ ಮುಗಿಸುವೆ.

"ನೀನು ಮಾಡು. ಸ್ವಲ್ಪಹೊತ್ತು ಬಿಟ್ಟು ಬರುವೆ. ಅನಂತರ ಆಡೋಣ."

"ನಾನೇ ಬರುವೆ, ನಿನ್ನ ಬಳಿ ಒಳ್ಳೆಯ ಆಟಿಕೆಗಳಿವೆ. ಅಲ್ಲೇ ಆಡೋಣ."

"ಆಗಲಿ ಶಾಂತೀ."

ಅವಳು ಹೊರಟಳು ಶಾಂತಲಾ ತನ್ನ ಕೆಲಸ ಮುಗಿಸಿ ಅಲ್ಲಿಗೆ ಹೊರಟಾಗ ತುಸು ಹೊತ್ತೇ ಆಗಿತ್ತೇನೋ....ಪಾಂಚಾಲಿ ಪುನಃ ಬಂದು ಹಣಿಕಿ ನಾನು ಅಮ್ಮನೊಂದಿಗೆ ಪೇಟೆಗೆ ಹೋಗಿ ಬರುವೆ. ನೀನು ಮನೆಗೆ ಬರಬೇಡ ಆಯಿತೇ ?"

## ೧೩

ಅವಳು ಹೇಗೆ ಬಂದಳೋ ಹಾಗೆಯೇ ಒಂದು ಕ್ಷಣದಲ್ಲಿ ಮಿಂಚಿ ಮಾಯವಾದಳು.

"ನೀನು ಆಗಲೇ ಅವಳೊಂದಿಗೆ ಆಟವಾಡಿದ್ದರೆ ಚೆನ್ನಾಗಿತ್ತು. ಈಗ ಆಟ ಆಡಲು ಯಾರೂ ಇಲ್ಲವಲ್ಲಾ ಮಗಳೇ?"

ಶಾಂತಲಾ ಸಪ್ಪೆಯಾದರೂ "ಹೋಗಲಿ, ಇನ್ನೆಂದಾದರೂ ಆಡಿಕೊಳ್ಳುವೆ," ಎಂದು ಹೋಂ ವರ್ಕ್ ಕೈಕೊಂಡಳು. ಅನಂತರ ಜ್ವರ ಬಂದು ಪೋಲಿಯೋ ತಗಲಿ ಮನೆಯಲ್ಲೇ ಉಳಿಯುವಂತಾದ ಅವಳು ಪಾಂಚಾಲಿಯ ಮನೆಗೆ ಹೋಗಲೇ ಇಲ್ಲ. ಪಾಂಚಾಲಿಯೇ ಯಾವಾಗಲಾದರೂ ಬರುತಿದ್ದಳಾದರೂ ಅಂದಿನ ಸಂತೋಷವೆಲ್ಲಿ? ಕಾಲಿನ ಬಲ ತಗ್ಗಿ ಕುಳಿತಲ್ಲೇ ಕುಳಿತು ಸಪ್ಪೆಯಾಗಿ ಉಸಿರಾಡುವ ಪ್ರಸಂಗಕ್ಕೆ ಸಿಕ್ಕಿಕೊಂಡಳು. ಅನಂತರ ಎಂದೂ ಸುಖಿಯಾಗಲಿಲ್ಲ. ದೈವಕ್ಕೆ ಕಣ್ಣಿಲ್ಲ. ಒಳ್ಳೆಯ ಮಗುವಿಗೆ ಕೊಡಬಾರದ ಕಷ್ಟಕೊಟ್ಟ...

ಸ್ವಾಮಿನಿ ಮಗಳನ್ನು ಅಪ್ಪಿ "ನೀನು ತುಂಬ ಜಾಣೆ" ಎಂದಳು. ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು.

* * *

ಶಕೀಲೆಯ ಪತ್ರ ಬಂದಾಗ ಹನ್ನೊಂದು ಗಂಟೆ. ಮನೆಯಲ್ಲಿದ್ದವಳು ಗೌರೀಮಾ ಮಾತ್ರ.

ಮನೆಯ ಮುಂಬಾಗಿಲ ಬಳಿ ಕಟಕಟ ಸದ್ದಾದಾಗ ಗೌರೀಮಾ ಕದ ತೆರೆದಳು. ಪೋಸ್ಟಿನವ ಕಾಗದವನ್ನು ಕೊಟ್ಟು ಸ್ಟಾಂಪ್ ಹಚ್ಚಿಲ್ಲ. ಎರಡು ರೂಪಾಯಿ due ಕೊಡಬೇಕು ಎಂದ. ಕಾಗದ ನೋಡಿದರೆ ಶಕೀಲೆಯದು. ತನ್ನ ಕೈಯಲ್ಲಿ ಕಾಸಿಲ್ಲ. ಬೇಡವೆಂದು ಬಿಟ್ಟೇನೆಯೇ ಅದು ಶಕೀಲೆಗೇ ಹೋಗಿ ಸೇರುತ್ತದೆ. ವಿಧಿ ಇಲ್ಲದೆ

ಶಾಂತಲೆಯ ಬಳಿಗೆ ಹೋದಳು ಗೌರೀಮಾ. ಕೇಳಲು ಬಾಯೇ ಬರುವುದಿಲ್ಲ. ಮೇಲಾಗಿ, ಅವಳು ಒಂದಿನವೂ ಈ ತಂಗಿಯನ್ನು ವಿಚಾರಿಸಿಕೊಳ್ಳುವುದಿಲ್ಲ. ಕೇಳುವುದಾದರೂ ಹೇಗೆ? ಕಾಗದವನ್ನು ಅವಳ ಕೈಗಿಟ್ಟು ''due ಕೊಡಬೇಕಾಗಿ ಬಂದಿದೆ ಮಗಳೇ!'' ಎಂದಳು, ದನಿಯಲ್ಲಿ ಕಳಕಳಿ-ಸಂಕಟಗಳನ್ನು ತುಂಬಿಕೊಂಡ ತಾಯಿ.

''ನಿಮ್ಮ ಬಳಿ ಹಣ ಇಲ್ಲವೇನಮ್ಮಾ?''

''ಇಲ್ಲ...ಏನು ಮಾಡೋಣ?''

''ನಾನೇ ಕೊಡುವೆ...ಅಕ್ಕ ಪೆಟ್ಟಿಗೆ ಬೀಗ ಹಾಕಿ, ಬೀಗದ ಕೈ ನನ್ನ ತಲೆದಿಂಬಿನಡಿ ಇಟ್ಟಿದ್ದಾಳೆ. ತೆಗೆದುಕೊಳ್ಳಿ.''

ಆ ಸಣ್ಣ ಮಗಳ ಮಾತಿನಲ್ಲಿ ಕಿಂಚಿತ್ತಾದರೂ ನೋವು-ಸಂಕಟ ಮೂಡಲಿಲ್ಲ. ತಾಯಿಗೆ ತನ್ನ ಹೊಟ್ಟೆಯೇ ಉರಿದು ಹೋಯಿತು. ಮರುಮಾತಾಡದೆ ತನ್ನ ಸಂಕಟವನ್ನು ತೋರಿಕೊಳ್ಳದೆ ಎರಡು ರೂಪಾಯಿ ತೆಗೆದುಕೊಟ್ಟು ಕಾಗದ ಪಡೆದಳು.

''ಕಾಗದ ಕೊಡಿ...'' ಕೈಯೊಡ್ಡಿ ಕೇಳಿದಳು ಶಾಂತಲಾ.

ಗೌರೀಮಾ ಕಾಗದವನ್ನು ಅವಳಿಗೆ ಕೊಟ್ಟು ''ನನ್ನ ಕೆಲಸ ಮುಗಿಸಿ ತೈಲ ತರುವೆ'', ಎಂದು ಹೇಳಿ ಒಳಹೋದಳು. ಶಾಂತಲಾ ಕಾಗದವನ್ನು ಒಡೆದಳು.

...ನಾನು ಈ ಕಾಗದ ಬರೆಯುವಾಗ ರಾತ್ರಿ ಹನ್ನೆರಡು ಗಂಟೆ. ಇದೀಗಷ್ಟೆ ಒಳಗಣ ಕೆಲಸ ಮುಗಿಸಿ ಬಂದೆ. ವರ್ತಮಾನ ಪತ್ರಿಕೆಯನ್ನು ಓದಿದ ಮೇಲೆ ಕಾಗದ ಬರೆಯಲು ಕುಳಿತೆ. ಇನ್ನು ಒಂದು ಗಂಟೆಗೆ ನೀರು ಬರುತ್ತದೆಯಷ್ಟೆ...ಎಲ್ಲಾ ಕೊಡ ಪಾತ್ರೆಗಳನ್ನೂ ತುಂಬಿಕೊಳ್ಳಬೇಕು. ಈಗ ಮಲಗಿದರೆ ಎಚ್ಚರವಾಗುವುದಿಲ್ಲ. ಆದ್ದರಿಂದ ಎಚ್ಚರವಾಗಿದ್ದು ನೀರು ತುಂಬಿದನಂತರ ಮಲಗುವೆ. ನೀರು ತುಂಬುವ ಕೆಲಸವನ್ನಾದರೂ ವಹಿಸಿಕೊಳ್ಳಿ ಎಂದು ಮೂರಿಗೂ ಹೇಳಿ ಸೋತೆ....ಇನ್ನು ನನಗಿರುವ ಸಹಾಯ ಎಂದರೆ ನನ್ನ ಕೈ ಕಾಲು ಮಾತ್ರ.

ನನ್ನ ಆರೋಗ್ಯ ಏನೇನೂ ಸುಧಾರಿಸಲಿಲ್ಲ. ಟಾನಿಕ್ಕು-ಔಷಧ ಏನೇನೋ ತೆಗೆದುಕೊಳ್ಳುತ್ತಿರುವೆ. ಯಾಕೋ ಯಾವುದೂ ಮೈಗೆ ಹಿಡಿಯುತ್ತಿಲ್ಲ. ನನ್ನ ಜೀವನ ನಿಮ್ಮ ಜೀವನಕ್ಕಿಂತ ಏನೇನೂ ಉತ್ತಮವಿಲ್ಲ. ನಾನು ಹೊರಗೆ ದುಡಿಯುತ್ತಿದ್ದು ನನ್ನ ಪಗಾರ ನಾನು ಪಡೆಯುತ್ತಿರುವುದು ಹೆಚ್ಚಿನದಾದರೂ ಅದರಿಂದ ನನಗೆ ಸುಖಕ್ಕಿಂತಲೂ ಕಷ್ಟವೇ ಹೆಚ್ಚಾಗಿದೆ. ಎತ್ತಿನ ದುಡಿತದೊಂದಿಗೆ ಮಾನಸಿಕ ಹಿಂಸೆ ದೈಹಿಕ ಹಿಂಸೆ ಎರಡನ್ನೂ ಅನುಭವಿಸುವ ಪಾಡು ಪರಮಾತ್ಮನಿಗೇ ಪ್ರೀತಿ.

ಸಂಸಾರ ಇಷ್ಟೊಂದು ಹಿಂಸ್ರಕ ಎನಿಸಿದ್ದರೆ ನಾನು ಈ ಜೀವನಕ್ಕೆ ಕಾಲಿಡುತ್ತಿರಲಿಲ್ಲ...ಖಂಡಿತ ಬೇಡವಾಗಿತ್ತು. ಅವರ ಅಫೀಸಿನಲ್ಲಿ ಮಜಬೂತಾದ ಅಧಿಕಾರಿಣಿ ಇದ್ದಾಳೆ. ಅವಳ ಮಾಂಸಲ ಶರೀರವನ್ನು ನೋಡಿದರೆ ನನಗೆ ಅಸಹ್ಯ. ಇವನಿಗೆ ಅವಳು ಅಚ್ಚುಮೆಚ್ಚು. ಹೊರಹೋಗುವಾಗ ಇಬ್ಬರೂ ಟಾಕು ಟೀಕಾಗಿ ಹೊರಡುತ್ತಾರೆ. ರಾಗಾನುರಾಗವೆಲ್ಲಾ ಅವಳೊಂದಿಗೆ. ನಾನೊಮ್ಮೆ ಅವನಿಗೆ ಎಚ್ಚರಿಸಿದೆ.

''ನೀನು ಇಷ್ಟೊಂದು ಹೀನಾಯವಾಗಿ ವರ್ತಿಸುವುದು ಸರಿಯಲ್ಲ. ದೊಡ್ಡ ಮಕ್ಕಳ ಮುಂದೆ ಪರಸ್ತ್ರೀ ಸಂಗ ಸರಿಯಲ್ಲ. ಸ್ವಲ್ಪ ಯೋಚನೆ ಮಾಡು.''

''ನಿನ್ನಂಥ ಎಲುಬಿನ ಹಂದರ ಕಟ್ಟಿಕೊಂಡು ಏನು ಮಾಡಲಿ? ನೀನೊಂದು ಓತೀಕ್ಯಾತ!''

ಆದರೆ, ಓತೀಕ್ಯಾತ ಹಗಲಿರುಳೂ ಬೇಕು. ಅತೀವ ಕುಡಿತದ ಕಾಮೇಚ್ಛೆ ಒಂದೆರಡರಿಂದ ತೀರುತ್ತದೆಯೇ? ಮಾತಾಸಮಂ ನಾಸ್ತಿ ಶರೀರ ಪೋಷಣಂ ಎನ್ನುತ್ತದೆ ಸುಭಾಷಿತ. ನೀವು ಹತ್ತಿರವಿದ್ದರೆ ಈ ಶರೀರ ಸೌಖ್ಯವಾದರೂ ಒದಗುತಿತ್ತು. ನಾನು ದೂರ ನಗರಕ್ಕೆ ಬಂದು ಕೆಟ್ಟೆ. ಮನೆ ಕಟ್ಟುವ ಯೋಚನೆ ಗಂಗಮ್ಮನ ಪಾಲು; ನನ್ನ ಹಣ ಉಳಿತಾಯ ಕನಸಿನ ಗಂಟು...ನಿರಾಸೆ, ಯಾವೊತ್ತೂ ನಿರಾಸೆ ಕಾದಿಟ್ಟ ಬುತ್ತಿ. ದಿನ ಮಾನಗಳು ಹೀಗೆಯೇ ಉರುಳುತ್ತಿವೆ.

ನಾನು ಎಷ್ಟೆಷ್ಟು ಪ್ರಯತ್ನಿಸಿದರೂ ಎಳ್ಳಷ್ಟೂ ಹಿತಸಾಧನೆಯಾಗಲಿಲ್ಲ ಈವರೆಗೆ.

ಅಲ್ಲದೆ, ಅಪ್ಪನಿಂದ ಈಚೆಗೊಂದು ಕಾಗದ ಬಂದಿದೆ. ಯಾವತ್ತೂ ಬರೆಯದ ಅಪ್ಪನ ಕಾಗದವನ್ನು ನೋಡಿ ಆಶ್ಚರ್ಯದಿಂದ ಒಡೆದು ಓದಿದೆ. ಅದರಲ್ಲಿದ್ದುದು ರಾಶಿರಾಶಿ ಪುರಾಣ ಶ್ಯಾಮಲೆ ಮತ್ತು ಶರತ್ತರ ಮೇಲೆ. ಅವರು ಗೊತ್ತುಮಾಡಿದ ಗಂಡನ್ನು ನೀವುಗಳು ನಿರಾಕರಿಸಿದರೆ ನಾನು ದೇಶಾಂತರ ಹೋಗುವೆ ಎಂದು ಬರೆದಿದ್ದಾರೆ. ಇದಕ್ಕೇನು ಹೇಳುತ್ತೀರಿ? ನೀವೆಲ್ಲಾ ಕೂಡಿ ಯೋಚಿಸಿ ನೋಡಿ. ಎಲ್ಲಿಯೂ ಸರ್ವೋತ್ತಮನಾದ ವರ ಸಿಕ್ಕುವುದಿಲ್ಲ. ಎಲ್ಲರಲ್ಲಿಯೂ ಲೋಪ ದೋಷಗಳು ಇರುತ್ತವೆ. ಅವರೇನೋ ಧನಿಕ-ಇಂದ್ರ-ಚಂದ್ರ ಎಂದು ಹೊಗಳಿ ಹಾಡಿ ಬರೆದಿದ್ದಾರೆ. ಆದ್ದರಿಂದ ಶ್ಯಾಂ ಒಪ್ಪುವಂತಹ ಗಂಡಾದರೆ ಒಪ್ಪಿಕೊಂಡು ಬಿಡಿ...ಓ, ನೀರು ಬಂದಿತು ನಲ್ಲಿಯಲ್ಲಿ. ಇನ್ನು ನೀರು ತುಂಬುವ ಕೆಲಸ ಓತೀಕ್ಯಾತಕ್ಕೆ! ಸಧ್ಯ ಲೇಖನಿಗೆ ವಿರಾಮ.

# ೧೪

ಚಿಲಿಪಿಲಿ ಪಕ್ಷಿಗಳ ಕೊರಳುಲಿಯಲ್ಲಿ ಸಂಧ್ಯಾರಾಗದ ಮೊಳಗು.

ಸಾಲು ಮರಗಳಲ್ಲಿ ಆಗಲೇ ಗೂಡುಗಳನ್ನರಸುವ ಸಣ್ಣ-ಪುಟ್ಟ ಪಕ್ಷಿಗಳ ಮೇಳ.

ಸಂಧ್ಯಾಸೂರ್ಯ ಪಶ್ಚಿಮಾದ್ರಿಯ ಶೃಂಗಸಿರಿಗೆ ಮನಸೋತು ಹೊನ್ನ ರಾಗವನ್ನು ಹಿಂದೆಯೇ ಬಿಟ್ಟು ತೆರಳಿದ್ದಾನೆ. ಆವುದೋ ಅನನ್ಯಲೋಕದ ಪಥವಿಡಿದು.

ಶ್ಯಾಮಲಾ ಬಸ್ಸಿಗಾಗಿ ಕಾದು ಕಾದು ಸ್ಥಳ ಸಿಕ್ಕದಿದ್ದಾಗ ನಡೆಯುವುದೇ ಲೇಸೆಂದು ಹಾದಿಯಂಚಿನ ಕಾಲ್ಪಥವನ್ನು ಹಿಡಿದಳು. ಹಾದಿ ಹತ್ತು ಮಾರು ಸಾಗಿತ್ತೇನೋ...ಸರ್ರನೆ ಬದಿಯಲ್ಲಿ ಹಾದು ಹೋದ ರಕ್ತವರ್ಣ ರಂಜಿತ ಕಾರೊಂದು ತಟ್ಟನೆ ಹಿಮ್ಮೊಗವಾಗಿ ಹರಿದು ಬಂದು ಬಳಿಯಲ್ಲಿ ನಿಂತಿತು. ಅದರಿಂದ ಇಳಿದ ಡಾ॥ ಫರೀದ್ ಬಳಿಗೆ ಬಂದು ಕೇಳಿದ "ನಿನಗೆ ಬಸ್ಸು ಸಿಗಲಿಲ್ಲವೇ?"

"ಇಲ್ಲ ಸರ್. ಇಷ್ಟೊತ್ತಿನ ತನಕ ಕಾದು ಹಾಗೇ ಹೊರಟೆ... ಈವೊತ್ತು ಪುನಃ ಜ್ವರ ಬಂದಿದೆ. ಬಹುಶಃ ನಾಳೆ ನಾಡಿದ್ದು ಬರಲಾರೆ ಎನಿಸುತ್ತೆ. ಜ್ವರ ಬಿಟ್ಟರೆ ಬೇಗ ಬರುವೆ, ಸರ್!"

"ನಡೆ ನಿನ್ನನ್ನು ಮನೆ ತಲ್ಪಿಸಿ ಹೋಗುವೆ."

"ನಿಮಗೇಕೆ ತೊಂದರೆ ಸರ್?"

"ಪರವಾಯಿಲ್ಲ."

ಡಾ॥ ಫರೀದಾ ಮುಂದಿನ ಸೀಟಿನ ಬಾಗಿಲನ್ನೇ ತೆರೆದು ನಿಂತಾಗ

"ನಾನು ಹಿಂದಿನ ಸೀಟಿನಲ್ಲಿಯೇ ಕುಳಿತುಕೊಳ್ಳುವೆ" ಎಂದಳವಳು.

"ಪರವಾಯಿಲ್ಲ. ಅಷ್ಟು ಸಂಕೋಚವೇಕೆ?"

ಶ್ಯಾಮಲಾ ವಿಧಿ ಇಲ್ಲದೆ ಹತ್ತಿದರೂ ಅತ್ಯಂತ ಸಂಕೋಚದ ಗಣಿಯಾದಳು. ಬಾಗಿಲ ಬದಿಯಲ್ಲಿ ಮೈ ಮುದುಡಿ ಕುಳಿತ ಅವಳು ನುಡಿದಳು "ಸಂಪಂಗಿರಾಮ ನಗರದಲ್ಲಿ ನಮ್ಮ ಮನೆ."

"ಓ ಆ ಕಡೆಯೆ?"

ಕಾರು ಸಂಪಂಗಿರಾಮ ನಗರದ ಕಡೆ ಹರಿಯಿತು.

"ನಿನ್ನ ಮದುವೆಯ ವಿಚಾರ ಏನಾಯ್ತು?"

"ನಾನು ಒಪ್ಪಲಿಲ್ಲ. ಬಲಾತ್ಕಾರ ನಡೆಯುತ್ತಿದೆ."

"ಇಷ್ಟವಿಲ್ಲದಿದ್ದರೆ ಒಪ್ಪಿಕೊಳ್ಳಬೇಡ."

"........."

ಅವಳು ತೋರಿದ ತಿರಿವಿನಲ್ಲಿ ಕಾರು ತಿರುಗಿಸಿ ಡಾ॥ ಫರೀದ್ ಕೇಳಿದ,

" ಕಾಫಿ ಕುಡಿಯೋಣವೇ?"

"ದಯವಿಟ್ಟು ತೊಂದರೆ ತೆಗೆದುಕೊಳ್ಳಬೇಡಿ ಸರ್."

"ತೊಂದರೆಯಿಲ್ಲ. ನಿನಗೂ ಜ್ವರ ಎನ್ನುತ್ತಿ. ಬೆಳಿಗ್ಗೆಯಿಂದ ಏನೂ ಇಲ್ಲ."

ಅವಳ ಉತ್ತರವನ್ನೂ ನಿರೀಕ್ಷಿಸದೆ ಒಂದು ಹೋಟೆಲಿನ ಮುಂದೆ ಕಾರನ್ನು ನಿಲ್ಲಿಸಿದ. ಶ್ಯಾಮಲಾ ಉಪಾಯವಿಲ್ಲದೆ ಇಳಿದಳು. ಇಬ್ಬರೂ ಎದುರುಬದುರಾಗಿ ಮೇಜಿನ ಮುಂದೆ ಕುಳಿತರು.

"ತಿಂಡಿ ಏನು ತೆಗೆದುಕೊಳ್ಳುವೆ?"

"ನನಗೆ ತಿಂಡಿ ಏನೂ ಬೇಡ ಸರ್!"

"ಇಡ್ಲಿ ತೆಗೆದುಕೊ. ಆದರಿಂದೇನೂ ತೊಂದರೆಯಿಲ್ಲ."

ರವೆ ಇಡ್ಲಿ ಮತ್ತು ಚಹಕ್ಕೆ ಆರ್ಡರ್ ಕೊಟ್ಟ ಡಾ॥ ಫರೀದ್. ಅವಳು ಮೈಯೆಲ್ಲಾ ಸಂಕೋಚದ ಮುದ್ದೆಯಾದಳು. ಜ್ವರದ ಕಾವು ಏರುತ್ತಿತ್ತು ಮೈಯಲ್ಲಿ. ಒಮ್ಮೆ ಹಾಸಿಗೆ ಸೇರಿದರೆ ಸಾಕು ಎಂಬಷ್ಟು ಮೈನೋವು. ತಿಂಡಿ ಹೇಗೆ ತಿನ್ನಲಿ? ಬೇಡ ಎಂದರೆ ಹೇಗೋ ಎಂಬ ಸಂಕೋಚ.

"ನೀನು ಬೇಸರ ಪಟ್ಟುಕೊಳ್ಳುವುದಿಲ್ಲವಾದರೆ ನಾನೊಂದು ಮಾತು ಹೇಳುವೆ."

"ಇಲ್ಲ...."

"ನಮ್ಮ ಸ್ನೇಹಿತರು ಹೇಳಿದ್ದು, ಗಂಗಾರಾಂ ಫೋರ್ಪಡೆಯಿಂದ ಸಾಲ ತೆಗೆದಿದ್ದಾರಂತೆ. ಆ ಹಣ ಸಂದಾಯಾರ್ಥವಾಗಿ ಮಗಳನ್ನು ಕೊಡುವೆ ಎಂದು ಮಾತು ಕೊಟ್ಟಿದ್ದಾರಂತೆ. ಫೋರ್ಪಡೆಯ ಹಣವನ್ನು ಗಂಗಾರಾಂ ಹಿಂದಿರುಗಿಸಿದರೆ ಈ ಹಗರಣ ಮುಕ್ತಾಯವಾಗುತ್ತೆ."

"ಹಲವು ಹಾಳು ಹವ್ಯಾಸಗಳನ್ನು ಹಚ್ಚಿಕೊಂಡ ಅವರಲ್ಲಿ ಹಣ ಇದ್ದಂತಿಲ್ಲ. ಕೈಯಲ್ಲಿ ಹಣ ಇದ್ದರೆ ಸಾಲ ಮಾಡುವ ಪ್ರಮೇಯವಿಲ್ಲ."

"ಹಾಗಾದರೆ ಹಣವಿಲ್ಲ ಎನ್ನುವಿಯಾ?"

"ನನ್ನ ಊಹೆ ಅಷ್ಟೆ. ಅವರು ಎಂದೂ ತಮ್ಮ ವ್ಯವಹಾರವನ್ನು ಕುರಿತು ಮನಬಿಚ್ಚಿ ಮಾತಾಡುವುದಿಲ್ಲ. ಬರೀ ಅಧಿಕಾರವೇ ಹೊರತು ಸಹಕಾರ ಇಲ್ಲ."

ಇಡ್ಲಿ ಕಾಫಿ ಆಗಮಿಸಿತು. ಅವಳು ಒಂದೇ ಇಡ್ಲಿ ಸಾಕೆಂದರೂ ಬಿಡದೆ ಎರಡಿಡ್ಲಿಯ ಪ್ಲೇಟನ್ನು ಮುಂದೆ ಸರಿಸಿದ. ಅವಳು ಕೈ ಹಚ್ಚಲಾರದೇ ಹಚ್ಚಿದಳು.

ಹೊರ ಜಗತ್ತಿನಲ್ಲಿ ಆಗಲೇ ಮುಸ್ಸಂಜೆಯ ಮಸುಗಪ್ಪು ಮುಸುಗುತಿತ್ತು.

''ಒಂದುವೇಳೆ ಹಣದ ಅಗತ್ಯ ಬಿದ್ದರೆ ನಾನು ಸಹಾಯ ಮಾಡಬಲ್ಲೆ... ಆದರೆ...'' ಮಾತು ಅಷ್ಟಕ್ಕೇ ತುಡುಗಡಿಯಿತು. ಅವಳ ಮುಖ ಭಾವವನ್ನೇ ನೇರವಾಗಿ ನಿಟ್ಟಿಸಿದ. ಅವಳ ಮೌನವೇ ಉತ್ತರವಾಯಿತು.

''ಘೋರ್ಪಡೆಯ ಒತ್ತಾಯಕ್ಕೆ ತಲೆ ಕೆಡಿಸಿಕೊಳ್ಳಬೇಡ. ನಿನ್ನ ಕಷ್ಟಕ್ಕೆ ನಾನಿರುವೆ.''

ಡಾ|| ಫರೀದ್ ಅವಳ ಕೈಮೇಲೆ ತಟ್ಟಿ ನುಡಿದ. ಕಣ್ಣುಗಳಲ್ಲಿ ಆಶಾಭಾವನೆಯ ಮಿಂಚು ಮಿನುಗಿತು.

ಅವಳು ಬಾಗಿದ ತಲೆ ಎತ್ತಲಿಲ್ಲ. ಕಾಪಿ ಮುಗಿಯಿತು. ಡಾ|| ಫರೀದ್ ಹಣಕೊಟ್ಟು ''ಹೋಗೋಣವೇ'' ಎಂದ. ಶ್ಯಾಮಲಾ ಸಮ್ಮತಿ ಸೂಸಿದಳು. ಇಬ್ಬರೂ ಕಾರು ಹತ್ತಿದರು.

''ನಿನಗಾಗಿ ಹಣ ಅಥವಾ ಯಾವುದೇ ತ್ಯಾಗಕ್ಕೂ ಸಿದ್ಧನಿರುವೆ. ನನಗೆ ತಿಳಿಸದೆ ನೀನು ಹೆಜ್ಜೆ ಮುಂದಿಡಬೇಡ.''

ಕಾರು ಮನೆಯ ಮುಂದೆ ನಿಲ್ಲುತ್ತಲೂ ಗಂಗಾರಾಂ ಅಚ್ಚರಿಯಿಂದ ನಿಟ್ಟಿಸಿದ. ಅವಳು ಕಾರಿಂದ ಇಳಿದವಳೇ ''ನಮಸ್ಕಾರ್ ಸರ್!'' ಎಂದು ನುಡಿದು ಮನೆ ಹೊಕ್ಕಳು.

* * *

ತಂದೆಯ ಕೆಂಗಣ್ಣುಗಳನ್ನು ನೋಡಿದಾಗ ಅಮಲು ಏರಿದೆ ಎಂಬುದರ ಅರಿವಾಯಿತು. ಶ್ಯಾಮಲಾ ಮುಂಬಾಗಿಲನ್ನು ಬಿಟ್ಟು ಹಿಂಬಾಗಿಲ ಕಡೆಯಿಂದ ಒಳಹೊಕ್ಕು ''ಶರತ್-ಶರತ್! ಎಂದು ಕೂಗಿ ಕರೆದಳು. ಕಾಫಿ ಕುಡಿದಿದ್ದರೂ ಬಾಯೊಣಗಿ ಬಂದಿತ್ತು. ಒಳಗಿಂದ ಬಂದ ತಾಯಿ ಏನಮ್ಮಾ! ಎಂದಳು. ಈ ದಿನ ಪುನಃ ಜ್ವರ ಬಂದಿದೆ. ಎಷ್ಟು ಕಾದರೂ ಬಸ್ಸು ಸಿಗಲಿಲ್ಲ. ಕೊನೆಗೆ ನಮ್ಮ ಬಾಸ್ ಕಾರಿನಲ್ಲಿ ಬಿಟ್ಟು ಹೋದರು'' ಎಂದಳು ತಂದೆಗೂ ಕೇಳಿಸುವಂತೆ. ಆದರೆ, ಗಂಗಾರಾಂಗೆ ಆ ಸಣ್ಣ ಕಾರಣಕ್ಕಾಗಿ ಪರಕೀಯನ ಜೊತೆ ಕಾರಿನಲ್ಲಿ ಬಂದುದು ಸರಿದೋರಲಿಲ್ಲ. ಅವನು ಅಲ್ಲಿಂದಲೇ ಕೂಗಿದ ''ನಿನಗೆ ಕೆಲಸಕ್ಕೆ ಹೋಗಬೇಡ ಎನ್ನಲಿಲ್ಲವೇ? ಮತ್ತೇಕೆ ಹೋಗಿದ್ದೆ?''

"ಅಪ್ಪಾ! ನಾನು ಕೆಲಸ ಬಿಡುವುದೂ ಇಲ್ಲ. ನೀವು ಹೇಳಿದ ಗಂಡನ್ನು ಮದವೆಯಾಗುವುದೂ ಇಲ್ಲ! ನೀವು ಒತ್ತಾಯಿಸಿದರೆ ನಾನು ಕೆರೆಬಾವಿ ಬಿದ್ದು ಪ್ರಾಣ ಕಳೆದುಕೊಳ್ಳುವೆ!"

ಕಂಪಿತ ಸ್ವರದಿಂದ ನುಡಿದ ಮಗಳನ್ನು ಕೆಕ್ಕರಿಸಿ ನೋಡಿದ ಗಂಗಾರಾಂ. ಕೆಂಗಣ್ಣುಗಳಲ್ಲಿ ಕಿಡಿಗಳುದುರುವಷ್ಟು ರೋಷ

ಶರತ್ ಓದುತ್ತಿದ್ದ ಪುಸ್ತಕವನ್ನು ಹಿಡಿದುಕೊಂಡೇ ಎದುರು ಬಂದು ನಿಂತ. ತುಟಿ ಎರಡು ಮಾಡಲಿಲ್ಲ. ಗಂಗಾರಾಂ ಹೊರಹೋಗಿ ವರಾಂಡದಲ್ಲಿ ಕುಳಿತ. ಮನಸ್ಸು ಸಿಟ್ಟಗೆದ್ದ ಹಾವಿನಂತೆ ಬುಸುಗುಡುತಿತ್ತು. ಇದಕ್ಕೇನು ಪರಿಹಾರ? ಯಾವ ರೀತಿ ಬಗ್ಗಿಸಲಿ? ಪ್ರಶ್ನೆಗಳು ತಲೆಯಲ್ಲಿ ಸುತ್ತುತ್ತಿವೆ ಗಿರಗಿಟ್ಟಿಯಾಗಿ. ಆಸೆ ಮೈಲಿಮೈಲಿ ದೂರ. ನಿರಾಶೆಯ ಪ್ರೇತದ ತತ್ತಳ ತುಳಿತ ಎದೆಯ ರಂಗದಲ್ಲಿ. ಹೊತ್ತು ಉರುಳಿ ಮುಸ್ಸಂಜೆ ಹೆಜ್ಜೆಯಿಟ್ಟಿತು.

ಗಂಗಾರಾಂ ದಡದಡನೆ ಮೆಟ್ಟಿಲಿಳಿದು ಕ್ಲಬ್ಬಿನ ಕಡೆ ಹೊರಟ.

ಶ್ಯಾಮಲಾ ತಮ್ಮನ ಕೈ ಹಿಡಿದುಕೊಂಡು "ಈಗೇನು ಮಾಡಲಿ ಹೇಳು ಶರತ್?" ಎಂದಳು ದೈನ್ಯವಾಣಿಯಲ್ಲಿ.

"ನಿನಗೆ ಜ್ವರ ಇದೆ. ಈಗ ನೆಮ್ಮದಿಯಿಂದ ಮಲಗು. ನೀನು ಅಪ್ಪನಿಗೆ ಹೇಳುವುದನ್ನು ಹೇಳಿದ್ದೀಯೆ. ಇನ್ನೇನೂ ಮಾತು ಬೇಡ. ಮುಂದಿನ ಸಮಾಚಾರ ನನಗಿರಲಿ. ನಾನು ನೋಡಿಕೊಳ್ಳುವೆ."

"ದಯವಿಟ್ಟು ಉಪಕಾರ ಮಾಡು."

"ನೀನು ಸುಮ್ಮನೆ ನಿದ್ದೆ ಮಾಡು."

ಶಾಂತಲಾ ಷೂಗಾಲಿಂದ ಹಿಂದಿನ ಅಂಗಳದಲ್ಲಿ ಓಡಾಡುತ್ತಿದ್ದಳೇನೋ ಒಳಗೆ ಬಂದಿರಲ್ಲಿಲ. ಬೊಂಬೆಗೆ ಒಮ್ಮೆ ಹೊಸ ಫ್ರಾಕ್‌ತೊಡಿಸಿದರೆ ಇನ್ನೊಮ್ಮೆ ಹಳೆಯ ಫ್ರಾಕ್ ತೊಡಿಸಿ ಮುದ್ದಿಸುತ್ತಾಳೆ. ಶರ್ಮಿಳಾ! ನನ್ನ ಶರ್ಮಿಳಾ!! ಎನ್ನುತ್ತ ಮುದ್ದಾಡಿ ಮುತ್ತುಕೊಟ್ಟು ನಲಿದಾಡಿದರೆ ಮನಸ್ಸಿಗೆ ಎಷ್ಟೋ ನೆಮ್ಮದಿ. ಅದುವರೆಗೆ ಕರವಸ್ತ್ರಗಳನ್ನು ಹೊಲಿದು ಮಡಿಸಿಟ್ಟು ಬಂದಿದ್ದ ಅವಳಿಗೆ ತನಿಗಾಳಿಯ ಅವಶ್ಯಕತೆಯಿತ್ತು ಕೂಡ.

ಮೆಟ್ಟಿಲುಗಳನ್ನು ಇಳಿಯುವಾಗ-ಹತ್ತುವಾಗ ತಾಯಿಯ ಸಹಾಯ ಬೇಕೇ ಬೇಕು.

ಶಾಂತಲಾ ಮೆಟ್ಟಿಲಿನ ಬಳಿಗೆ ಬಂದು "ಅಮ್ಮಾ...!" ಎಂದು ಕರೆದಾಗಲೇ ನಡುಮನೆಯಲ್ಲಿದ್ದ ಶರತ್ ತಂಗಿಯ ದನಿ ಕೇಳಿ ಹೊರಬಂದ.

"ಇಗೋ, ನನ್ನ ಕೈ ಹಿಡಿದುಕೊ. ನೀನೇ ಹತ್ತುವ ಪ್ರಯತ್ನ ಪಡು."

"ನಾನು ದಿನವೂ ಹತ್ತುವುದು ಹಾಗೆಯೇ. ಅಮ್ಮನ ಕೈಹಿಡಿದುಕೊಂಡು ನಾನೇ ಹತ್ತುವೆ."

ಅವನ ಕೈಯನ್ನು ಹಿಡಿದುಕೊಂಡು ತಾನಾಗಿಯೇ ಹತ್ತಿದಳು ಶಾಂತಲಾ.

"ಅಮ್ಮ ತೈಲ ಉಜ್ಜಲು ಹಚ್ಚಿದ ಮೇಲೆ ನಿನ್ನ ಕಾಲು ನಿಧಾನವಾಗಿ ಚೇತರಿಸಿಕೊಳ್ಳುತ್ತಿದೆ. ಈಗ ಮೊದಲಿನಷ್ಟು ಮೂಳೆಯಾಗಿಲ್ಲ."

ನಿರಾಸೆಯ ದನಿ ಹೊರಬಿತ್ತು "ಅದು ಆಗುವುದು ನಾನು ಸಾಯುವ ಕಾಲಕ್ಕೆ!"

"ಇಲ್ಲಕಣೆ! ಒಂದುವೇಳೆ ಆಗದಿದ್ದರೆ ಜಯಪುರದಿಂದ ಒಳ್ಳೆಯ ಮರಗಾಲು ಮಾಡಿಸಿ ತರಿಸುವೆ; ಚಿಂತೆ ಮಾಡಬೇಡ."

ಗಲ್ಲವನ್ನು ಮುದ್ದಿಸಿ ಒಳಕರೆತಂದ. ಅವಳು ಷೂ ಬಿಚ್ಚಿ ಕುರ್ಚಿಯನ್ನು ತಳ್ಳಿಕೊಂಡೇ ಅಕ್ಕನ ಬಳಿ ಬಂದು ಕುಳಿತುಕೊಂಡಳು.

"ನಿನ್ನ ಕರವಸ್ತ್ರಗಳನ್ನು ಕೊಟ್ಟಿರುವೆ. ಈ ದಿನ ಆರು ರೂಪಾಯಿ ಬಂದಿದೆ. ನಿನ್ನ ದುಡ್ಡು ಆಗಲೇ ಅರವತ್ತು ರೂಪಾಯಿ ಆಗಿರಬಹುದು. ನಿನಗೆ ಒಂದು ಗಾಲಿ ಕುರ್ಚಿಯನ್ನು ಮಾಡಿಸಿ ಕೊಡುವೆ. ಷೂ ಬೇಸರವಾದಾಗ ಗಾಲಿಕುರ್ಚಿಯಲ್ಲಿ ಓಡಾಡಬಹುದು."

"ಅಲ್ಲಿ ಮೊದಲೇ ಸ್ಥಳಸಂಕೋಚ. ಅದೂ ಬಂದರೆ ಎಲ್ಲಿಟ್ಟುಕೊಳ್ಳುವುದು?"

"ಹೇಗಾದರೂ ಮಾಡೋಣ."

"ಜ್ವರ ಕಡಿಮೆಯಾಗಿದೆಯೇ?"

"ಇಲ್ಲ ಶಾಂತೀ."

"ಚೆನ್ನಾಗಿ ವಿಶ್ರಾಂತಿ ತೆಗೆದುಕೊ. ಅನಂತರ ಎಲ್ಲಾ."

"ಇನ್ನೂ ಮಾ ಬರಲಿಲ್ಲವೇ?"

"ಆಗಲೇ ಬಂದರು. ಸ್ನಾನ ಮಾಡುತ್ತಿರಬಹುದು."

"ಅಮ್ಮಾ ಇಲ್ಲದಿದ್ದರೆ ಈ ಮನೆಯೊಂದು ಮನೆಯೇ?"

"ಪಾಪ, ಅವರಿಗೆ ನಮ್ಮಿಂದ ಏನೆಲ್ಲಾ ತೊಂದರೆ?"

"ತಾಯಿ ಆಗುವುದೇ ತೊಂದರೆ ಅನುಭವಿಸುವುದಕ್ಕೆ."

ನಿಜ ಎಂದುಕೊಂಡಳು ಶಾಂತಲಾ.

* * *

ಶರತ್ ಅವಸರದಿಂದ ಕೇಳಿದ "ನಾನೀಗ ಹೊರಹೋಗುವೆ. ನಿನಗೇನಾದರೂ ಔಷಧಿ ಬೇಕಿದ್ದರೆ ಡಾಕ್ಟರ ಕ್ಲಿನಿಕ್‌ಗೆ ಹೋಗಿ ಬರೋಣ. ಅನಂತರ ನಾನು ರಾಮು ಮನೆಗೆ ಹೋಗಬೇಕು. ಏನು ಹೇಳುತ್ತೀ?"

"ಆಗಲಿ, ಬರುವೆ ಹೋಗಿ ಬರೋಣ."

ಗೌರೀಮಾ ಶೌಚಾಲಯದಿಂದ ಹೊರಬರುತ್ತಲೂ ಇವರಿಬ್ಬರೂ ಡಾಕ್ಟರ ಕ್ಲಿನಿಕ್ ಕಡೆ ಹೊರಟರು. ಬಸ್ಸು ಹಿಡಿದು ಕ್ಲಿನಿಕ್ ಮುಟ್ಟಿದಾಗ ನಾಲ್ಕಾರು ಮಂದಿ ರೋಗಿಗಳು ಕುಳಿತಿದ್ದರು. ಇವರಿಬ್ಬರೂ ಹೊರಬಂದು ಬಾಗಿಲಲ್ಲಿ ಕಾದು ನಿಂತ ಸಮಯದಲ್ಲೇ ಸರ್ರನೆ ಮುದೆ ಸಾಗಿಹೋದ ಸಾಗರ ನೀಲಿವರ್ಣದ ಕಾರೊಂದು ನಿಂತಿತು. ಘೋರ್ಪಡೆ ಕಾರಿಂದ ಇಳಿದು ಬಂದು ಕೇಳಿದ "ಏಕೆ ಇಲ್ಲಿ ನಿಂತಿದ್ದೀರಿ?"

ಮುಂದಿನ ಸೀಟಿನಲ್ಲಿ ಕುಳಿತಿದ್ದ ಹರಿಕಿಷನ್ ಘೋರ್ಪಡೆ ತಂದೆಯ ಪಕ್ಕದಲ್ಲಿ ನಿಂತ.

"ಅಕ್ಕನಿಗೆ ಜ್ವರ ಬಿಟ್ಟಿಲ್ಲ. ಡಾಕ್ಟರನ್ನು ನೋಡಲು ಬಂದೆವು."

"ನಾನು ಒಳಹೋಗಿ ಡಾಕ್ಟರಿಗೆ ಹೇಳುವೆ."

ಅವನು ಆ ಕ್ಷಣವೇ ಒಳಹೋಗಿ ಡಾಕ್ಟರಿಗೆ "ಜ್ವರದ ಮಗು ಹೊರಗಡೆ ಕಾಯುತ್ತಿದೆ. ಬೇಗನೆ ನೋಡಿದರೆ ಒಳ್ಳಿತು. ನಾನೇ ಮನೆಗೆ ಕರೆದೊಯ್ದು ಬಿಟ್ಟು ಬರುವೆ."

ಘೋರ್ಪಡೆಗೆ ಪರಿಚಯಸ್ಥನಾದ ಆ ಡಾಕ್ಟರು ಒಪ್ಪಿಕೊಂಡು ತಿಳಿಸಿದ "ಈ ರೋಗಿಯನ್ನು ಹೊರ ಕಳಿಸಿದನಂತರ ನೋಡುವೆ."

"ಆಗಲಿ..." ಎಂದು ಒಪ್ಪಿಕೊಂಡ ಹರಿಕಿಷನ್ ಘೋರ್ಪಡೆ.

ಹರಿಕಿಷನ್ ಶ್ಯಾಮಲೆಯನ್ನು ಅಡಿಯಿಂದ ಮುಡಿಯವರೆಗೆ ನೋಡಿ ಹಿರಿಹಿರಿ ಹಿಗ್ಗಿದ. ಅವಳಿಗೆ ನಾವು ಇಲ್ಲಿ ಸಿಕ್ಕಿಕೊಳ್ಳಬೇಕೆ? ಎಂದು ಚಡಪಡಿಸಿತು ಜೀವ. ಶರತ್ ಕಿವಿಯಲ್ಲಿ "ನಾವು ಹೋಗಿ ಬಿಡೋಣ ನನಗೆ ಔಷಧಿಯೂ ಬೇಡ, ಏನೂ ಬೇಡ" ಎಂದಳು.

ಇಬ್ಬರೂ ಮೆಟ್ಟಿಲಿಳಿಯೋಣ ಎಂದರೆ ಜಯದ್ರಥ ನಿಂತಂತೆ ಮೆಟ್ಟಿಲ ಮೇಲೆಯೇ ನಿಂತಿದ್ದಾನೆ ಹರಿಕಿಷನ್ ಘೋರ್ಪಡೆ.

ಶರತ್ ಕೇಳಿದ "ಸ್ವಲ್ಪ ದಾರಿ ಬಿಡಿ."

"ತಾಳಿ, ತಾಳಿ, ಅಣ್ಣ ಒಳಹೋಗಿದ್ದಾರೆ."

ಅಷ್ಟರೊಳಗಾಗಿ ಘೋರ್ಪಡೆ ಹೊರಬಂದು ಕೇಳಿದ "ಹೋಗಮ್ಮಾ ಡಾಕ್ಟರು ಕರೆಯುತ್ತಿದ್ದಾರೆ."

ಮೆಟ್ಟಿಲಿಳಿಯುವುದಕ್ಕೆ ಅವಕಾಶವಿಲ್ಲದ ಮೇಲೆ ಒಳಹೋಗುವುದು ಮೇಲು ಎನಿಸಿತು ಶ್ಯಾಮಲೆಗೆ. ಒಳಹೋಗಿ ಔಷದಿ ತೆಗೆದುಕೊಂಡು ಹೊರಬಂದರೆ ಇಬ್ಬರೂ ಕಾದೇ ಇದ್ದಾರೆ."

"ಬನ್ನಿ....ಇಬ್ಬರನ್ನೂ ಮನೆಗೆ ಬಿಟ್ಟು ಹೋಗುವೆ."

"ಉಹೂ...ದಯವಿಟ್ಟು ನೀವು ಹೋಗಿ. ನಾವು ಹೀಗೆಯೇ ಹೋಗುತ್ತೇವೆ."

ಹಾ, ಹೂ ಎನ್ನುವುದರೊಳಗಾಗಿ ಅವರಿಬ್ಬರೂ ಫುಟ್‌ಪಾತ್ ಹಿಡಿದಾಯಿತು. ಘೋರ್ಪಡೆ ಹೇಳುವಷ್ಟು ಹೇಳಿ ತನ್ನ ಹಾದಿ ಹಿಡಿದ. ಅದುವರೆಗೂ ಬಿಗಿ ಹಿಡಿದಿದ್ದ ಉಸಿರನ್ನು ಹೊರಬಿಟ್ಟ ಶ್ಯಾಮಲಾ,

"ಶರತ್, ಇಂದು ತಪ್ಪಿಸಿಕೊಂಡದ್ದು ನಮ್ಮ ಪುಣ್ಯ' ದೇವರು ಕಾಪಾಡಿದ."

"ಒಳ್ಳೆ ಹದ್ದು ಬಂದು ಎರಗಿದಂತಾಯಿತು!"

"ಜೊತೆಗೆ ನೀನಿದ್ದುದರಿಂದ ಗೆದ್ದೆ. ಇಲ್ಲದಿದ್ದರೆ ಏನಾಗಬೇಕಿತ್ತೋ?"

"ನೀನು ಬರುವುದಿಲ್ಲ, ಎಂದರೆ ಅವರೇನು ಮಾಡುತ್ತಿದ್ದರು? ಬೀದಿಯಲ್ಲಿ ಇಷ್ಟೊಂದು ಮಂದಿ ಓಡಾಡುವಾಗ ಅಷ್ಟೇಕೆ ಭಯ?"

"ಅವರಿಬ್ಬರೂ ಒಂದೇ ಸೈಜು, ಒಳ್ಳೆ ದೈತ್ಯರಿದ್ದಂತಿದ್ದಾರೆ...! ನೋಡಿದರೇನೇ ಭಯ. ಮೈ ನಡುಗುತ್ತಿದೆ."

"ಅಪ್ಪನಿಗೆ ಸರಿಯಾದ ಅಳಿಯ!"

ಶರತ್ ಗಟ್ಟಿಯಾಗಿ ನಕ್ಕುಬಿಟ್ಟ!

ಎಂದೋ ಓದಿದ್ದ ಸೂಕ್ತಿಯೊಂದು ಚಿತ್ರಬಿತ್ತಿಯಲ್ಲಿ ಧುಮುದುಮಿಸಿತು. ತನ್ನಲ್ಲೇ ಗುಣುಗುಣಿಸಿದಳು ಶ್ಯಾಮಲಾ.

ಹರೇಃ ಪಾದಾಹತಿಃ ಶ್ಲಾಘ್ಯಾ ನ ಶ್ಲಾಘ್ಯಂ ಖರರೋಹಣಂ ।
ಸ್ಪರ್ಧಾಪಿ ವಿದುಷಾ ಯುಕ್ತಾ ನ ಯುಕ್ತಾ ಮೂರ್ಖಮಿತ್ರತಾ ॥

## ೧೭

ಶ್ಯಾಮಲೆಯ ಜ್ವರ ಇಳಿದು ಏರುತ್ತಿತ್ತು. ಸಂಪೂರ್ಣ ಬಿಡಲಿಲ್ಲ.

ಗೌರೀಮಾ ತಾನೇ ಹೋಗಿ ಡಾಕ್ಟರಿಗೆ ಸ್ಥಿತಿಗತಿಯ ವರದಿ ಮಾಡಿ ಔಷಧಿ ತರುತಿದ್ದಳು. ಆದರೂ ಜ್ವರ ಕಣ್ಣುಮುಚ್ಚಾಲೆ ಆಡುತ್ತಿತ್ತು. ಒಂದು ವಾರ ಕಳೆದರೂ ಜ್ವರ ಬಿಡದಿದ್ದುದು ತಾಯಿಗೆ ಕಳವಳಕ್ಕೆ ಕಾರಣ.

ಗಂಗಾರಾಂ ಕಂಡೂ ಕಾಣದಂತೆ ಸುಮ್ಮನೇ ಇರುತ್ತಿದ್ದ. ಔಷದಿಗೆ ಕಾಸು ಕೊಸರು ಯಾವುದೂ ಇಲ್ಲ.

ಶಾಂತಲಾ ಹಗಲಿರುಳೂ ಬಳಿಯಲ್ಲಿರುತ್ತಾಳೆ. ಅವಳ ಕಷ್ಟದಲ್ಲಿ ಸಂಪೂರ್ಣ ಸಹಾನುಭೂತಿ ಅನುಕಂಪ ಒಡಲಾಳದಲ್ಲಿ ತುಂಬಿ ಹೋಗಿತ್ತು. ಷೂ ಹಾಕಿಕೊಂಡು ಅಕ್ಕನ ಅಗತ್ಯಗಳನ್ನು ಪೂರೈಸಲು ತಾನೇ ಮುಂದಾಗುತ್ತಿದ್ದರೆ ಒಡಲಲ್ಲಿ ಮರುಕ ತಾಯಿಗೆ.

''ನೀನು ಓಡಾಡುವುದು ಕಷ್ಟ. ಆದರೂ, ಅದರಿಂದ ಕಾಲಿಗೆ ಬಲ ಬರುವುದಾದರೆ ಅನುಕೂಲವೇ.''

''ನಿನ್ನ ಜ್ವರದ ಚಾರ್ಟನ್ನು ನಾನೇ ಬರೆದಿಡುವೆ. ಈಗಣ ಜ್ವರ ಎಷ್ಟು ಹೇಳು.''

ಆ ಸಣ್ಣ ಹುಡುಗಿಯ ವಿಶ್ವಾಸ-ಪ್ರೀತಿ-ಆಸ್ಥೆ ದೊಡ್ಡವರಿಗಿಂತ ಮಿಗಿಲು. ಅಂಥ ಹುಡುಗಿಗೆ ದೇವರು ಅನ್ಯಾಯ ಮಾಡಿ ಬಿಟ್ಟ ಎಂದು ಮನದಲ್ಲೇ ನೊಂದುಕೊಂಡು ಉತ್ತರಿಸುವಳು ಶ್ಯಾಮಲಾ.

ಬೆಳಗಿನ ಹತ್ತರ ಸಮಯ.

ಆಫೀಸಿನ ಜವಾನ ಬಾಸ್-ನ ಕಾಗದ ತಂದುಕೊಟ್ಟು ಹೋದ. ಅದರಲ್ಲಿ ತನ್ನ ಕ್ಷೇಮವನ್ನು ವಿಚಾರಿಸಿಕೊಳ್ಳುವ ನೆವದಲ್ಲಿ ರಾಗಾನುರಾಗವನ್ನೇ ಹರಿಸಿದ್ದ ಬಾಸ್. ಒಮ್ಮೆ ದೇಹದಾದ್ಯಂತ ಬೆವತು ಹೋದಳು ಶ್ಯಾಮಲಾ. ಅದು ನಿಶ್ಶಕ್ತಿಯ ಪರಿಣಾಮವೋ ಅಥವಾ ಭಯದ ಪರಿಣಾಮವೋ ದೇವರಿಗೇ ಗೊತ್ತು. ಉತ್ತರ ಬರೆಯಲು ಕೋರಿದ್ದಾನೆ. ರಜೆಗಾಗಿ ಬರೆದುಕೊಳ್ಳಲೇ ಬೇಕು. ಅದರಲ್ಲಿ....ಮುಂದೆ ಓಡಲಿಲ್ಲ, ಯೋಚನೆಯ ತೇಜಿ. ಕಾಗದವನ್ನು ಹರಿದು ಬುಟ್ಟಿಗೆ ತೂರಿದಳು. ಆದರೇನು ? ಎಲ್ಲೆಲ್ಲಿ ಚಲಿಸಿದರೂ ಬಂದು ನಿಲ್ಲುತ್ತಿದ್ದುದು ಆ ದುರ್ದಾಂತ ಬಿಂದುವಿನಲ್ಲೇ.

ತಂದೆ-ಫೋರ್ಮನ್-ಫರೀದ್ ಮೂವರೂ ಮೂರು ಕಡೆಯಿಂದ ಅಖಾಡ ಕ್ಕಿಳಿದಿದ್ದಾರೆ. ಯಾವ ರೀತಿಯಲ್ಲಿ ವಿಧಿ ಪಾಶವೊಗೆಯುತ್ತೋ....ನಾನು ಯಾವ ಗಳಿಗೆಯಲ್ಲಿ ಮುಳುಗಿ ಹೋಗುವೆನೋ....

ಆ ಯೋಚನೆ ಬಂದಾಗ ದೇಹದಾದ್ಯಂತ ಚಳಿಯು ರಘುರಿ ಜರ್‍ರನೆ ಹರಿದಾಡತೊಡಗಿತು. ಹೊದ್ದಿಕೆಯನ್ನು ಎಳೆದೆಳೆದು ಹೊದ್ದುಕೊಂಡರೂ ಚಳಿಚಳಿ.

''ಏಕೆ ಶ್ಯಾಂ ನಡುಗುತಿದ್ದೀ ?''

''ಚಳಿಯಾಗುತ್ತಿದೆ.''

''ಚಾರ್ಟಿನಲ್ಲಿ ಬರೆದಿಡಲೇ ?''

''ತಾಳು ಅನಂತರ....ಹೇಳುವೆ.''

ಗುಡುಗು ಮಿಂಚುಗಳ ಒಕ್ಕೂಟ. ಧೋಧೋ ಸುರಿವ ಮಳೆಯ ಏಕನಾದ. ಭೋರನೆ ಬೀಸುವ ಬಿರುಗಾಳಿ.

ರಾತ್ರಿಯೆಲ್ಲಾ ಬೀಸಿದುದರಿಂದಲೋ ಏನೋ ಬೆಳಗಿನ ಸಮಯದಲ್ಲಿ ಬಿರುಗಾಳಿ ಹಿಂಜರಿದು ಭಯಂಕರ ಭೋರಾಟಕ್ಕೆ ಮಂಗಳ ಹಾಡಿತು. ಮಳೆ ಮಾತ್ರ ಒಮ್ಮೆ ನಿಂತರೂ ಮತ್ತೊಮ್ಮೆ ಶುರು.

ಆ ಮಳೆಯಲ್ಲೇ ಕೊಡೆ ಹಿಡಿದುಕೊಂಡು ಬಂದ ಶಾರದಾ ಕರ್ವೆಯನ್ನು ನೋಡಿ ಆಶ್ಚರ್ಯ ಪುಳುಕಿತಳಾಗಿ ತೆಕ್ಕನೆ ಎದ್ದು ಕುಳಿತು ಕೈಹಿಡಿದುಕೊಂಡು ಸ್ವಾಗತಿಸಿ ಕೇಳಿದಳು ಶ್ಯಾಂ,

''ಇದೇನು ? ಈ ಮಳೆಯಲ್ಲಿ ಬಂದಿದ್ದಿ ?''

''ನಾನು ಮನೆ ಬಿಡುವಾಗ ಮಳೆ ಬಿಟ್ಟಿತ್ತು. ಹೊರಟೆ, ಬಸ್ಸಿನಲ್ಲಿ ಬರುವುದಷ್ಟೆ; ಅದರಿಂದೇನಾದೀತು ? ಆವೊತ್ತಿನಿಂದ ನಿನ್ನನ್ನು ನೋಡಬೇಕೆಂದು ಇಚ್ಛೆ ಪಟ್ಟಿದ್ದೆ. ಬರಲಾಗಲೇ ಇಲ್ಲ. ಆಫೀಸ್ ಕೆಲಸ-ಮನೆಗೆಲಸ. ಗಂಡ-ಮಕ್ಕಳು. ಸಮಯ ಕಳೆದುದೇ ತಿಳಿಯದಷ್ಟು ಸಂಸಾರದ ಜಂಜಡ. ಇದು ಎಂದೆಂದಿಗೂ ಇದ್ದದ್ದೇ ಎನಿಸಿ ಇಂದು ಹೊರಟೇ ಬಿಟ್ಟೆ. ಹಾಗೆ ಹಠ ತೊಡದಿದ್ದರೆ ಇನ್ನೂ ಎಷ್ಟು ದಿನ ಮುಂದೂಡ ಬೇಕಾಗಿತ್ತೋ. ನೋಡು, ಬಂದೇ ಬಿಟ್ಟೆ! ನೀನು ನನ್ನನ್ನು ಅಭಿನಂದಿಸಲೇಬೇಕು!''

''ಖಂಡಿತ! ನಿನ್ನನ್ನು ಎಷ್ಟು ಅಭಿನಂದಿಸಿದರೂ ಸಾಲದು. ಬಾ, ಕುಳಿತುಕೊ.''

ತನ್ನ ಶಯ್ಯಾಪ್ರಾಂತದಲ್ಲೇ ಕುಳಿತುಕೊಳ್ಳಬಂದ ಅವಳನ್ನು ತಡೆದು ''ನೀನು ಕುರ್ಚಿಯ ಮೇಲೆ ಕುಳಿತುಕೊ. ನನ್ನ ಜ್ವರ ನಿನಗೂ ಅಂಟುವುದು ಬೇಡ,'' ಎಂದಳು ನಮ್ರೆಯಿಂದ. ಅನಂತರ ಶಾಂತಲೆಯನ್ನು ಕುರಿತು ''ಅಮ್ಮನನ್ನು ಕರೆದು ಬಾಮ್ಮಾ ಶಾಂತೀ'' ಎಂದಳು.

ಶಾಂತಲಾ ಷೂ ತೊಟ್ಟು ಅಡಿಗೆಯ ಮನೆಗೆ ಹೋಗಿ ಹೇಳಿಬಂದಳು.

''ಹೇಗಿದ್ದಿ, ಜ್ವರ ಕಡಿಮೆಯಾಗುತ್ತಿದೆಯೇ ?''

“ಇಲ್ಲ; ದಿನವೂ ಬರುತ್ತಲೇ ಇದೆ. ಆಫೀಸಿಗೆ ಬರಲು ಇನ್ನೂ ಏಳೆಂಟು ದಿನಗಳು ಬೇಕೋ ಏನೋ....ನಿಮಗೂ ತೊಂದರೆ. ನನಗೂ ತೊಂದರೆ ಹೀಗಾಗಿದೆ.”

“ಏನು ಮಾಡೋಣ ? ಕಾಹಿಲೆ ಬೀಳದವರು ಯಾರಿದ್ದಾರೆ ? ಬಂದದ್ದನ್ನು ಅನುಭವಿಸಬೇಕು. ಅದಕ್ಕೆ ಚಿಂತೆ ಪಟ್ಟರೆ ಆದೀತೇ ?” ಎಂದಳು ಶಾರದಾ ಸಂತೈಸುವ ದನಿಯಲ್ಲಿ.

“ಮಲಗುವುದು ತುಂಬ ಕಷ್ಟ-ಬೇಸರ. ಡಾಕ್ಟರು ವಿಷಮ ಶೀತ ಜ್ವರ ಎನ್ನುತ್ತಿದ್ದಾರೆ. ಅದಾದರೆ ತುಂಬ ವಿಶ್ರಾಂತಿ-ಪಥ್ಯಗಳು ಅಗತ್ಯ. ಹೇಗೆ ಸುಧಾರಿಸಿಕೊಳ್ಳುವೆನೋ ತಿಳಿಯದು.”

“ಸುಮ್ಮನೆ ಮಲಗಿಕೊ. ಸಾಧ್ಯವಾದರೆ ಪುಸ್ತಕ ಓದು....”

ಗೌರೀಮಾ ಬಿಸಿಬಿಸಿ ಕಾಫಿಯೊಂದಿಗೆ ಆಗಮಿಸಿ ಅತಿಥಿಯನ್ನು ಆದರದಿಂದ ಉಪಚರಿಸಿದಳು. ಶಾರದಾ ಕಾಫಿಯನ್ನು ಕುಡಿದು ಬಸಿಯನ್ನು ತಾನೇ ಒಳಗೊಯ್ದಿಟ್ಟು ಬಂದು ನುಡಿದಳು “ನೀನು ಮಾನಸಿಕವಾಗಿ ಬಹಳವಾಗಿ ನೊಂದಿದ್ದಿ. ಅದೇನಾದರೂ ನಿನ್ನ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರಿದೆಯೋ ಎಂಬ ಯೋಚನೆ ನನಗೆ.”

“ನಾನು ಮನ ನೊಂದಿರುವುದು ನಿಜ. ಆದರೆ, ಅದೇ ಕಾರಣ ಎನ್ನಲಾರೆ ಕಾಹಿಲೆಗೆ. ಅಮ್ಮ ಹೇಳುವುದೂ ಹಾಗೆಯೇ. ಅದೇನಾದರೂ ಇರಲಿ, ಈಗ ನನ್ನ ಕೆಲಸ ಯಾರು ನೋಡಿಕೊಳ್ಳುತಿದ್ದಾರೆ? ಒಂದು ವೇಳೆ ನಾನು ಬರುವುದು ತಡವಾದರೆ ನನ್ನ ಕೆಲಸದ ಗತಿಯೇನೋ....ನನಗೆ ಅದೂ ಒಂದು ಯೋಚನೆ.”

“ಅದೇನೂ ತೊಂದರೆಯಾಗದು ಬಿಡು.”

“ಶಾರದಾ ಕೇಳು,” ಒಂದು ದೀರ್ಘವಾದ ನಿಟ್ಟುಸಿರನ್ನು ಹೊರ ಹಾಕಿ ನುಡಿದಳು ಶ್ಯಾಮಲಾ, “ನನಗೀಗ ಈ ಜೀವನವೇ ಬೇಸರ ಬಂದಿದೆ. ನಮ್ಮಿಂದ ನಾಲ್ಕು ಮಂದಿಗೆ ಪ್ರಯೋಜನವಾಗುವುದಾದರೆ ಬದುಕು ಸತ್ಯ ಸುಂದರ. ಇಲ್ಲದಿದ್ದರೆ ಏನು ಫಲ ? ತಮ್ಮನ ಓದು ಪೂರೈಸದೆ ಈ ಜೀವನ ತುಂಬುವದಿಲ್ಲ. ಅವನು ಡಿಗ್ರಿ ತೆಗೆದುಕೊಳ್ಳಬೇಕಾದರೆ ಇನ್ನೂ ಅನೇಕ ವರ್ಷವಿದೆ. ಅಲ್ಲಿಯತನಕ ನಾನು ಅಲ್ಪಸ್ವಲ್ಪವಾದರೂ ಆಧಾರವಾಗದಿದ್ದರೆ ಕಷ್ಟ. ದುರದೃಷ್ಟಕ್ಕೆ ಶಾಂತಲಾ ಬೇರೆ ಹೀಗಾಗಿದ್ದಾಳೆ. ನಾನು ಬಿ.ಎ. ಪೂರೈಸಲು ಪೋಸ್ಟಲ್ ಟ್ಯೂಷರ್‌ಗೆ ಬರೆದುಕೊಂಡಿದ್ದೆ. ಅದೀಗ ಬಂದಿದೆ. ರಾತ್ರಿ ಓದಿಕೊಳ್ಳಬೇಕು. ಈಗ ನಾನು ಹಿಂದುಳಿದರೆ ಈ ಮನೆ ಅತಂತ್ರವೇ. ಇದನ್ನೆಲ್ಲಾ ಯೋಚಿಸುತ್ತಾಹೋದರೆ ಕೊನೆ ಮುಟ್ಟುವುದೇ ಇಲ್ಲ. ನ್ಯಾಯ-ನೀತಿ ಇಲ್ಲವೇ ಇಲ್ಲ. ದುಷ್ಟ ಸಹವಾಸದಿಂದ ದುಷ್ಟತನ ದಿನದಿನಕ್ಕೂ

ಮುಂಬೆಳೆಯುತ್ತಿದೆ. ನಿನ್ನೆ ಡಾಕ್ಟರ ಕ್ಲಿನಿಕ್‌ಗೆ ಹೋದರೆ ಅಲ್ಲಿ ಘೋರ್ಪಡೆ ಮತ್ತು ಅವನ ಮಗ ಪ್ರತ್ಯಕ್ಷ! ಅಪ್ಪ ಕ್ಲಿನಿಕ್ ಒಳ ಹೋದರೆ ಮಗ ತೋಳ ಕುರಿಮರಿ ನೋಡಿದಂತೆ ನೋಡುತ್ತಿದ್ದಾನೆ! 'ನಾನು ಏಕೆ ಬಂದೆ' ಎನಿಸಿತು ನನಗೆ. ಅಲ್ಲಿಂದ ಹಾಗೆಯೇ ಬಂದು ಬಿಡಲೇ ಎನಿಸಿದಾಗಲೇ ಡಾಕ್ಟರಿಂದ ಕರೆ ಬಂತು. ಒಳಹೋಗಿ ಬಂದರೆ ಇಬ್ಬರೂ ಕಾದೇ ಇದ್ದಾರೆ! ಕಾರು ಹತ್ತು ಮನೆಗೆ ಬಿಡುವೆ ಎಂದು ಒತ್ತಾಯವೇ ಒತ್ತಾಯ! ಮೈಯಲ್ಲಿ ಜ್ವರ ಬೇಯುತಿತ್ತು. ಆದರೂ ಶರತ್ ಕೈಹಿಡಿದುಕೊಂಡು ತಿರುಗಿ ನೋಡದೆ ಫುಟ್‌ಪಾತ್ ಹಿಡಿದೆ. ಬಲಾತ್ಕಾರ....ಬಲಾತ್ಕಾರ! ನಮ್ಮ ಬೇಕು-ಬೇಡಗಳು ಯಾರಿಗೂ ಇಲ್ಲವೇ ಇಲ್ಲ! ಕುರಿ-ಕೋಳಿಗಳಿಗಿಂತಲೂ ಕಡೆ ನಾವು! ನನ್ನ ತಂದೆ ಅವಿದ್ಯಾವಂತನಲ್ಲ. ಮತ್ತೇಕೆ ಈ ಹುಚ್ಚಾಪಟ್ಟೆ ಬದುಕು ? ಘೋರ್ಪಡೆಯಿಂದ ಸಾಲ ಏತಕ್ಕೆ ? ಮನೆಗೆ ತಿಂಗಳು ಪೂರ್ತಿ ಗ್ರಾಸ ಪಡೆದುಕೊಳ್ಳಬೇಕೆಂದರೆ ಕಣ್ಣೀರು ಕರೆಯಬೇಕು. ಅಮ್ಮ ಕೂಡ ಕಾಲೇಜು ಹತ್ತಿದವರು. ಅವರಿಗೆ ಆರ್ಥಿಕ ಸ್ವಾತಂತ್ರ್ಯ-ವೈಯುಕ್ತಿಕ ಸ್ವಾತಂತ್ರ್ಯ ಇಲ್ಲವೇ ಇಲ್ಲ. ಅವರಲ್ಲಿ ಅಪ್ಪನಿಗೆ ದೈಹಿಕ ಸಂಬಂಧವೇ ಹೊರತು ಮಾನಸಿಕ-ಬೌದ್ಧಿಕ ಸಂಬಂಧವೇ ಇಲ್ಲ. ಅವರ ಕೈ ಖರ್ಚಿಗೆ ಐದು ರೂಪಾಯಿ ಸಹ ಬರುವುದಿಲ್ಲ. ಶಾಂತಲಾ ಮೂಲೆ ಸೇರಿದಳು ಎಂದು ತಾತ್ಸಾರ! ಮಾನವೀಯತೆ ಎಂಬುದು ಇಲ್ಲವೇ ಇಲ್ಲ! ಇದನ್ನೆಲ್ಲಾ ಹೇಗೆ ಸಹಿಸೋಣ ? ಈಗ ಘೋರ್ಪಡೆಯ ಸಾಲಕ್ಕೆ ನನ್ನ ಮಾರಾಟ ಮಾಡುವ ಹೊಂಚಿಕೆ ಹರಿಕಿರ್ಷ ಮಲರೋಗಿ. ಕುಡುಕ. ನಲವತ್ತರ ಪ್ರಾಯ. ಇದಕ್ಕೇನೆನ್ನುತ್ತಿ ? ಈಗ ನಾನು ಮಾತು ಕೊಟ್ಟಾಗಿದೆ. ನೀನು ಒಪ್ಪಿಕೊಳ್ಳದೆ ಹೋದರೆ ನಾನು ದೇಶಾಂತರ ಹೊರಟು ಹೋಗುವೆ ಎಂಬ ಬೆದರಿಕೆ. ಇದಕ್ಕೆಲ್ಲಾ ಏನು ಪರಿಹಾರ ? ಇದು ಹಿಂದೂಸ್ಥಾನದ ವೈಶಿಷ್ಟ್ಯ. ಅಮ್ಮ 'ಪೇಪರ್ ಬ್ಯಾಗ್'ಗಳನ್ನು ಮಾಡಿ ಅಂಗಡಿಗೆ ಕೊಟ್ಟು ತನ್ನ ಖರ್ಚು ಪೂರೈಸಿಕೊಳ್ಳುತ್ತಾರೆ. ಇದು ಜೀವನ....!''ಅತ್ಯಂತ ಖಿನ್ನ ಮುಖದಿಂದ ಹೊರಬಿದ್ದ ವಾಕ್ಯಸರಣಿಯನ್ನು ಕೇಳಿ ಶಾರದಾ ಕರ್ವೆ ಚಿಂತಿತಳಾದಳು. ಸ್ವಲ್ಪ ಹೊತ್ತು ರುದ್ರಮೌನ ರಾಜ್ಯವಾಳಿತು.

ಮುಖಬಿಂಬದ ಮೇಲೆ ತುಂತುರು ತುಂತುರಾಗಿ ಮೂಡಿದ ಸ್ವೇದ ಬಿಂದುಗಳನ್ನು ಕರವಸ್ತ್ರದಿಂದ ಒರಿಸಿಕೊಂಡು ''ನೀನೊಂದು ಕೆಲಸ ಕೊಡಿಸಿ ಉಪಕಾರ ಮಾಡಿದೆ ಶಾರದಾ. ನೀನು ಆತ್ಮೀಯ ಗೆಳತಿಯಾದುದಕ್ಕೆ ನಿನ್ನ ಕರ್ತವ್ಯ ನೆರವೇರಿಸಿದೆ. ನಾನು ಹೇಗೆ ನಿನ್ನ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವೆನೋ ದೇವರಿಗೇ ಗೊತ್ತು. ಅಥವಾ ಹೀಗೆಯೇ ಎಲ್ಲಾ ಕಾಲ ದೆಸೆಗೊತ್ತಿ ಸಾಯುವೆನೋ ಏನೋ....'' ಎಂದಳು

ತೊಯ್ದ ಕಣ್ಣುಗಳನ್ನು ಒರಿಸಿಕೊಳ್ಳುತ್ತ. ಮರುಗಳಿಗೆಯಲ್ಲಿ ಎದೆಯಾಳದಿಂದ ಅಂತರ್ವಾಣಿ ಕೂಗಿಹೇಳಿತು "ಚಿಂತಾ ಸಮಂ ನಾಸ್ತಿ ಶರೀರ ಶೋಷಣಂ"

"ಛೀ! ಛೀ! ಎಂತಹ ಮಾತಾಡುತ್ತಿ? ನೀನು ಸುಖವಾಗಿದ್ದರೆ ಸಾಕು. ನೀನು ನನಗಾಗಿ ಮಾಡಬೇಕಾದುದೇನೂ ಇಲ್ಲ. ನಾನು ಸಾಕಷ್ಟು ಸುಖವಾಗಿರುವೆ. ಆ ಬಗ್ಗೆ ನಾನು ದೇವರಿಗೆ ಋಣಿಯಾಗಿರಲೇಬೇಕು ನನ್ನ ವಿಚಾರದಲ್ಲಿ ಅವನು ದಯಾಘನ."

"ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ"

"ವೇದಕಾಲೀನ ಮನು ಪ್ರಣೀತ ನ್ಯಾಯ ಶಾಸ್ತ್ರ ಇಂದಿಗೂ ಎಂದಿಗೂ ನಡೆಯುವುದಾದರೆ ನಮ್ಮ ವಿದ್ಯೆ- ನಾಗರಿಕತೆ ಇವುಗಳಿಗೆ ಬೆಲೆಯಾದರೂ ಏನು? ಪುರುಷವರ್ಗ ಸ್ವಾರ್ಥ ಸಾಧನೆಗಾಗಿ ಮಾಡಿಕೊಂಡ ವ್ಯವಸ್ಥೆ ಪರಂಪರಾನುಗತವಾಗಿ ಉಳಿದು ಬಂದಿದೆ. ನಾವು ಮೂಕಮೌನಿಗಳಾಗಿ ಸಹಿಸಿಕೊಂಡು ಬಂದಿರುವುದೇ ಇದರ ಊರ್ಜಿತಕ್ಕೆ ಕಾರಣ. ಆದ್ದರಿಂದ ಈ ಸಂಕಟಭೋಗ ಅನಿವಾರ್ಯ. ಇದನ್ನೆಲ್ಲಾ ಇಂದು ಕಲಿತವರು-ಸಮಾಜ ಸುಧಾರಕರು ವಿಚಾರವಿಹಾರ ಮಾಡಿ ನಮ್ಮ ಕ್ಷುದ್ರ ಸಮಾಜವನ್ನು ಶುದ್ಧೀಕರಿಸುವ ಹೊಣೆಗಾರಿಕೆ ಹೊತ್ತುಕೊಳ್ಳದಿದ್ದರೆ ಎಂದೆಂದಿಗೂ ಹೀಗೆಯೇ ಶಾರದಾ. ಚಿಕ್ಕಂದಿನಿಂದ ಅಮ್ಮನ ಗೋಳು ನೋಡುವಾಗ ಈ ಸಮಾಜ ಸುಧಾರಣೆಗಾಗಿ-ಸ್ತ್ರೀ ಜನೋದ್ಧಾರಕ್ಕಾಗಿ ಹೊಡೆದಾಡಬೇಕು. ಬಹುಜನ ಮಾನಿತವಾಗುವಂತಹ ಸುಧಾರಣೆ ಜಾರಿಗೆ ತರಬೇಕು ಎಂದು ಮುಂತಾಗಿ ನನಗೆ ನಾನೇ ಯೋಚಿಸುತ್ತಿದ್ದೆ. ಅಮ್ಮನ ಸಂಕಷ್ಟದಲ್ಲಿ ಮನಃಪೂರ್ವಕವಾಗಿ ಪಾಲ್ಗೊಂಡು ಅವರ ಕೆಲಸಗಳನ್ನು ಪೂರೈಸಿ ಸಾಂತ್ವನದ ನುಡಿಗಳಿಂದ ಸಂತೈಸುತಿದ್ದೆ. ಆದರೆ, ಸಮಾಜಸುಧಾರಣೆಯ ಮಾತು ಒತ್ತಟ್ಟಿಗಿರಲಿ. ನಾನು ಸಿಕ್ಕಿಕೊಂಡಿರುವ ಉರುಲಾದರೂ ಎಂತಾದ್ದು? ನಾನು ಅಪ್ಪನಿಗೆ ಅಂದೇ ಹೇಳಿದೆ "ನಾನು ಈ ಕೆಲಸ ಬಿಡುವುದೂ ಇಲ್ಲ; ನಿಮ್ಮ ಘೋರ್ಪಡೆಯನ್ನು ಮದುವೆಯಾಗುವುದೂ ಇಲ್ಲ. ನೀವು ಒತ್ತಾಯಿಸಿದರೆ ನಾನು ಕೆರೆ-ಬಾವಿ ಬಿದ್ದು ಪ್ರಾಣ ಬಿಡುವೆ." ಎಂದು.

ಅದನ್ನವರು ಮನಸ್ಸಿಗೆ ತೆಗೆದುಕೊಳ್ಳಲೇ ಇಲ್ಲ, ಪ್ರತಿಯಾಗಿ ನಾನೇ ದೇಶಾಂತರ ಹೋಗುವೆ ಎನ್ನುತಿದ್ದಾರೆ. ಇದಕ್ಕೇನು ಪರಿಹಾರ? ಶಾರದಾ, ಇದು ವಿನಾಕಾರಣ ಉಂಟಾದ ತೊಡಕು. ಘೋರ್ಪಡೆಯೊಂದಿಗೆ ಸಾಲ ಪಡೆಯಬೇಕಾದುದೇ ಇರಲಿಲ್ಲ. ತನ್ನ ದುಡಿಮೆಯಲ್ಲಿ ಬಹುಭಾಗ ತಾನೇ ಉಳಿಸಿಕೊಳ್ಳುವ ವ್ಯಕ್ತಿಗೆ ಸಾಲ ಬೇಕಾಗಿರಲಿಲ್ಲ. ಸಂಸಾರಕ್ಕಾಗಲೀ, ಮನೆ ಕಟ್ಟಲಾಗಲೀ, ಮನೆಗೆ ನಾಗರಿಕ ಸೌಲಭ್ಯ ಒದಗಿಸಲಾಗಲೀ,

ತನಗೊಂದು ವಾಹನ ಕೊಳ್ಳುವುದಕ್ಕಾಗಲೀ ಚಿಕ್ಕಾಸು ಬಳಸುವ ಯೋಚನೆ ಎಂದೂ ಮಾಡಲಿಲ್ಲ. ತನ್ನ ದುಡಿಮೆಯ ಹಣವನ್ನು ಉಳಿಸಿಕೊಂಡು ಬಂದಿದ್ದಲ್ಲಿ ಅದೇ ಮನೆಕಟ್ಟಲು ಸಾಕಿತ್ತು. ಈ ಮನೆಯ ಯಜಮಾನ ರಿಪೇರಿ-ಸುಣ್ಣ ಬಣ್ಣ ಯಾವುದೂ ಮಾಡಿಸುವುದಿಲ್ಲ. ಇವರೂ ಮಾಡಿಸುವುದಿಲ್ಲ. ಈ ಹರಕುಮುರುಕು ಗೂಡಿನ ವಾಸ ದೇವರಿಗೇ ಪ್ರೀತಿ. ಇಂಥ ಪರಿಸ್ಥಿತಿಯಲ್ಲಿ ಘೋರ್ಪಡೆಯೊಂದಿಗೆ ಸಾ....ಲ!''

ಅಶಕ್ತ ಶರೀರದಿಂದ ವಿಶಾದವಾಣಿ ಕ್ಷೀಣಗತಿಯಲ್ಲಿ ಹೊಮ್ಮುತ್ತಿದ್ದರೆ ತನಗೇ ಅಳು ಬರುವಂತಾಯಿತು ಶಾರದಾ ಕರ್ವೆಗೆ.

ಸ್ವಲ್ಪ ಹೊತ್ತು ಇಬ್ಬರೂ ಮಾತಾಡದೆ ಮೌನ ತಾಳಿದರು.

ಶಾಂತಲಾ ಬೊಂಬೆಯನ್ನು ಎತ್ತಿಕೊಂಡು ಶಾರದೆಗೆ ತೋರಿಸಿ ''ಪಾಂಚಾಲಿ ಇದನ್ನು ನನಗಾಗಿ ತಂದುಕೊಟ್ಟಿದ್ದಾಳೆ. ತುಂಬಾ ಮುದ್ದಾಗಿದೆ ನೋಡಿ!''

ಅದನ್ನು ಕೈಗೆ ತೆಗೆದುಕೊಂಡ ಶಾರದಾ ''ನಿಜ ಶಾಂತೀ! ಬೊಂಬೆ ಬಲೂ ಮುದ್ದಾಗಿದೆ.''ಎಂದು ತೊಡೆಯ ಮೇಲಿಟ್ಟುಕೊಂಡು ಪುನಃ''ನೀನು ಚೆನ್ನಾಗಿ ಸಂಪಾದಿಸುತ್ತೀಯಂತೆ! ನೀನು ತುಂಬ ಜಾಣೆ!''

''ಬೊಂಬೆಯೂ ಅವಳ ದುಡಿಮೆಯೇ!''ಎಂದಳು ಶ್ಯಾಮಲಾ.

''ಓ ಹೌದೇ ?''

''ಸುಮ್ಮನೇ ಕುಳಿತಿರುವುದು ಹೇಗೆ ಅಕ್ಕಾ? ಅದಕ್ಕಾಗಿ ಏನಾದರೂ ಮಾಡುವೆ.''

''ಮಾಡು....ತುಂಬಾ ಒಳ್ಳೆಯದು.''

''ನಾನು ಸ್ಕೂಲಿಗೆ ಹೋಗಿ ಕಲಿಯಬೇಕು. ಪರೀಕ್ಷೆ ಕಟ್ಟಬೇಕು. ಏನೆಲ್ಲಾ ಯೋಚನೆ ಬರುತ್ತೆ? ಆದರೂ ಸೂಕ್ತ ಪರಿಹಾರ ಸಿಕ್ಕಿಯೇ ಇಲ್ಲ....ಕಾಲಿಗೆ ಸ್ವಲ್ಪ ಬಲ ಬಂದರೂ ಸಾಕು. ನಾನು ಸುಧಾರಿಸಿಕೊಳ್ಳಬಲ್ಲೆ.''

''ಈಗ ಅಂದಿಂದಿಗೂ ಆದ ಸುಧಾರಣೆ ಬಗ್ಗೆ ಏನೆನಿಸುತ್ತೆ ನಿನಗೆ ?''

''ನಾನು ಏನು ಹೇಳಲಿ ? ಹೆಚ್ಚಿನ ವ್ಯತ್ಯಾಸ ಏನೂ ತಿಳಿಯುವುದಿಲ್ಲ.''

ಶಾರದೆ ಎರಡೂ ಕೈಗಳಿಂದ ಅವಳನ್ನು ಅಪ್ಪಿ-ಹಿಡಿದುಕೊಂಡು ''ನೀನು ಶಾಲೆಗೆ ಹೋಗಿ ಕಲಿಯುವುದಕ್ಕಿಂತ ಹೆಚ್ಚಾಗಿ ಮನೆಯಲ್ಲಿ ಕಲಿಯುತ್ತಿದ್ದೀಯೆ. ಪರೀಕ್ಷೆಗೆ ಹೋಗಿ ಕುಳಿತರೆ ಉತ್ತೀರ್ಣಳಾಗುತ್ತಿ. ಹತ್ತಿರದ ಶಾಲೆಗೆ ಈಗಲೇ ಅರ್ಜಿ ಬರೆದುಕೊಂಡರೆ ಕುಳಿತುಕೊಳ್ಳಲು ಅವಕಾಶ ಕೊಡುತ್ತಾರೆ. ವಿದ್ಯಾ ಸರ್ವತ್ರ ಭೂಷಣಂ ಎಂಬುದು ಸತ್ಯಸ್ಯಸತ್ಯ. ಆದ್ದರಿಂದ ನೀನು ಮನೆಯಲ್ಲಿ ಓದಿ ಪರೀಕ್ಷೆಗೆ ಕುಳಿತುಕೊಳ್ಳುವುದು ಒಳ್ಳೆಯದು.''

"ಆಗಲಿ"

"I wish you good luck!"

"Thank you!"

## ೧೮

ಬೆಳಗಿನ ಹತ್ತರ ಸಮಯ. ಆಗಲೇ ಎಳೆಬಿಸಿಲಲ್ಲಿ ಉರಿಗಾವಿನ ಅವತರಣ.

ಆರೇಳು ದಿನಗಳ ಜ್ವರದ ತಾಪದಿಂದ ಶರೀರದಲ್ಲಿ ಅತೀವ ಬಳಲಿಕೆ. ಜ್ವರದ ಕಾವಿನೊಂದಿಗೆ ಸ್ಪರ್ಧೆ ಹೂಡುವ ವಾತಾವರಣದ ಕಾವು. ಹಾಲು-ಗಂಜಿ ರುಚಿಸುತ್ತಿಲ್ಲ. ಔಷದಿ-ಇಂಜಕ್ಷನ್‌ಗಳ ಪ್ರಭಾವದಿಂದಲೋ ಏನೋ ಕಣ್ಣಿಗೆ ನಿದ್ದೆಯೂ ಬರುತ್ತಿಲ್ಲ. ಹಗಲು ಹೇಗಾದರೂ ಕಳೆದರೆ ರಾತ್ರಿಯನ್ನು ಕಳೆಯುವ ಪಾಡು ದೇವರಿಗೇ ಸಂವೇದ್ಯ.

ಕಣ್ಣು ಮುಚ್ಚಿದರೆ-ಬಿಟ್ಟರೆ ಪರಿಕಿರ್ಷ ಘೋರ್ಪಡೆಯ ದೈತ್ಯರೂಪ! ಬಾರಿಬಾರಿಗೂ ಹಲ್ಕಿರಿಯುವ ಆ ಸ್ವರೂಪ ಅಸಹ್ಯವಾದರೂ ಮನಸ್ಸಿನಿಂದ ತಳ್ಳಿಹಾಕುವುದು ಕಷ್ಟವೇ.... ಅಪ್ಪ ಕೊನೆಗೂ ನನ್ನನ್ನು ಯಾವ ಹೊಂಡಕ್ಕೆ ತಳ್ಳುವರೋ ಏನೋ, ಹೇಗೆ ಈ ಸಂಕಷ್ಟದಿಂದ ಪಾರಾಗುವೆನೋ....ಡಾ॥ ಫರೀದ್‌ಗೆ ಉತ್ತರ ಬರೆಯಲೂ ಇಲ್ಲ; ಸಹಾಯ ಕೇಳಲೂ ಇಲ್ಲ. ಏನು ಮಾಡಬೇಕೋ ಬಗೆ ಹರಿಯುತ್ತಿಲ್ಲ, ಎಂದುಕೊಳ್ಳುತ್ತಿರುವಾಗಲೇ ಮುಂಬಾಗಿಲಲ್ಲಿ ಕಟಕಟ ಸದ್ದು. ಗೌರೀಮಾ ಒಳಗಿದ್ದಳೇನೋ ಕೇಳಿಸಿಕೊಳ್ಳಲಿಲ್ಲ. ಪುನಃ ಪುನಃ ಕಟ ಕಟ ಸದ್ದು.

ಶಾಂತಲಾ ಷೂ ಹಾಕಿಕೊಂಡು ಬಾಗಿಲು ತೆರೆಯಲು ಹೋದಳು, ಅಷ್ಟರೊಳಗಾಗಿ ಮತ್ತೊಮ್ಮೆ ಸದ್ದು. ಬಾಗಿಲು ತೆರೆದರೆ ಘೋರ್ಪಡೆ ಸತಿ ಸುತೆಯರೊಂದಿಗೆ ಆಗಮಿಸಿದ್ದಾನೆ!

ಶಾಂತಲಾ ಅವರನ್ನು ನೋಡಿದೊಡನೆಯೇ ಅವಾಕ್ಕಾದಳು.

"ಶ್ಯಾಮಲಾಗೆ ಜ್ವರ ಬಿಟ್ಟಿದೆಯೇನಮ್ಮಾ ?"

"ಇಲ್ಲ....ಬರುತ್ತಲೇ ಇದೆ."

"ಎಲ್ಲಿದ್ದಾಳೆ ?"

ಮೂವರು ಒಳಬಂದರು. ಆ ವೇಳೆಗೆ ಗೌರೀಮಾ ಎದುರಾದಾಗ ಘೋರ್ಪಡೆ ಅವಳನ್ನೇ ಕೇಳಿದ "ಹೇಗಿದ್ದಾಳೆ ಮಗಳು ?"

"ಇನ್ನೂ ಜ್ವರ ಬಿಟ್ಟಿಲ್ಲ" ನುಡಿಯಲಾರದೇ ನುಡಿಯಿತು ನಾಲಿಗೆ.

"ಔಷಧಿ ಕ್ರಮವಾಗಿ ಕೊಡುತ್ತಿದ್ದೀರಾ ?"

"ಹೌದು...."

ಇವರೇಕಪ್ಪಾ ಬಂದರು ಎಂಬ ತಳಮಳ ಮನದಲ್ಲಿ. ಆದರೂ ವಿಧಿಯಿಲ್ಲದೆ "ಕುಳಿತುಕೊಳ್ಳಿ" ಎಂದಳು ಸೌಜನ್ಯಪೂರ್ವಕವಾಗಿ.

ಮೂವರೂ ಕುಳಿತುಕೊಂಡರು.

"ಎಲ್ಲಿದ್ದಾಳೆ ಶ್ಯಾಮಲಾ ?"

"ಮಲಗಿದ್ದಾಳೆ...." ಮುಂದೇನೋ ಹೇಳಲು ತೊದಲಿ ಸುಮ್ಮನಾದಳು ಗೌರೀಮಾ. ಹೃನ್ಮನಗಳಲ್ಲಿ ಕಳವಳ-ಮುಜುಗರ-ಭಯ ಇನ್ನೇನೇನೋ.... ಈಗಲೀಗ ಕುಸಿದು ಬೀಳುವೆನೋ....ಎನಿಸುವಷ್ಟು ಸೋಲು ಮೈಯಲ್ಲಿ.

"ನಾನು ಅವಳನ್ನು ಡಾಕ್ಟರ ಬಳಿಗೆ ಕರೆದೊಯ್ದು ತೋರಿಸಿಕೊಂಡು ಬರುವೆ. ಕಳಿಸಿಕೊಡಿ" ಎಂದ ಘೋರ್ಪಡೆ.

"ಬೇಡಿ....ನಿಮಗೇಕೆ ತೊಂದರೆ; ಅವಳು ಹಾಗೆಲ್ಲಾ ಯಾರೊಂದಿಗೂ ಹೋಗುವುದಿಲ್ಲ."

"ಹಾಗೆಂದರೇನು ? ಮುಂದಿನ ತಿಂಗಳು ಇಪ್ಪತ್ತೆಂಟನೇ ತಾರೀಖು ಶುಭ ಮುಹೂರ್ತವಿದೆ. ಅಂದು ಧಾರೆಯೆರೆದು ಕೊಡುವೆ ಎಂದು ಮಾತು ಕೊಟ್ಟಿದ್ದಾನೆ ಗಂಗಾರಾಂ. ಇದುವರೆಗೆ ಎಲ್ಲಾ ಮಾತು ಕತೆಯೂ ಆಗಿದೆ....ಇನ್ನೇಕೆ ಸಂಕೋಚ ? ಹೇಗಿದ್ದರೂ ನಮ್ಮ ಮನೆಗೆ ಬರುವವಳೆ!"

ಘೋರ್ಪಡೆಯ ಮಾತಿಗೆ ಡಂಗು ಬಡಿದು ಹೋದಳು ಗೌರೀಮಾ. ಹೃದಯ ಕ್ರಿಯೆ ಒಂದು ಗಳಿಗೆ ನಿಂತು ಹೋದಂತೆ ಸ್ತಬ್ಧವಾಯಿತು ಶರೀರ.

"ಹೌದೂರೀ, ಮಾತುಕತೆ ಎಲ್ಲಾ ಮುಗಿದಿದೆ. ನಾವು ಒಡವೆ ವಸ್ತು ಎಲ್ಲಾ ಮಾಡಿಸಿದೇವೆ. ಇನ್ನು ಅವಳಿಗೇನೇನು ಬೇಕೋ ಅದನ್ನೆಲ್ಲಾ ಅವಳನ್ನು ಕರೆದು ಕೊಂಡು ಹೋಗಿ ಕೊಡಿಸುವುದು ಉಳಿದಿದೆ."

"ಇದು ನಮಗೇನೂ ಗೊತ್ತಿಲ್ಲ. ಮಗಳಿಗೂ ಗೊತ್ತಿಲ್ಲ. ಹೀಗೆ ಮದುವೆ ಮಾಡುವುದು ಸಾಧ್ಯವೇ ಹೇಳಿ, ಇಷ್ಟಕ್ಕೂ ಅವಳಿಗೆ ಮೈ ಚೆನ್ನಾಗಿಲ್ಲ. ಇದೆಲ್ಲಾ ಏಕೆ ಹೇಳಿ ?" ಬಾವಿ ಆಳದಿಂದ ಹೊರ ಬಿದ್ದಂತೆ ಹರಿದು ಬಂತು ದನಿ. ದೇಹದಾದ್ಯಂತ ನಸುಕಂಪನದ ಅಲೆ ಹರಿದಾಡತೊಡಗಿತು.

"ಅದಕ್ಕೇನಂತೆ, ಈಗಲೂ ಮಾತಾಡಬಹುದಲ್ಲ, ಇನ್ನೂ ಸಾಕಷ್ಟು ಸಮಯ

ವಿದೆ... ಅದಕ್ಕೇಕೆ ಅಸಮಾಧಾನ ? ಮಗಳಿಗೆ ಜ್ವರ ಬಿಡಲಿ. ಎಲ್ಲವನ್ನೂ ಸಮಂಜಸವಾಗಿಯೇ ಮಾಡೋಣ. ಈಗ ಕೇವಲ ನಮ್ಮ ನಮ್ಮೊಳಗಿನ ಮಾತು ಅಷ್ಟೆ...."

ಘೋರ್ಪಡೆ ಸಂತೋಷದಿಂದ ಸಮಾಧಾನ ಪೂರ್ವಕವಾಗಿ ನುಡಿದ.

"ಈಗ ದಯವಿಟ್ಟು ಕ್ಷಮಿಸಿ ಬಿಡಿ. ಈ ವಿಚಾರವಾಗಿ ನಾನೇನೂ ಹೇಳಲಾರೆ."

ಮೂವರೂ ಎದ್ದು ಕೊಠಡಿಗೇ ಹೋದರು. ಅದುವರೆಗೂ ಅವರ ಸಂಭಾಷಣೆಯನ್ನು ಕೇಳಿಸಿಕೊಂಡಿದ್ದ ಶ್ಯಾಮಲಾ ಮುಸುಗಿಕ್ಕಿಕೊಂಡಳು.

"ಮುಸುಗು ತೆಗೆಯಮ್ಮಾ ನೋಡೋಣ ? ಜ್ವರ ಕಡಿಮೆಯಾಗಿದೆಯೇ ?"

ಶ್ಯಾಮಲಾ ಮುಸುಗು ತೆಗೆಯಲಿಲ್ಲ. ಆಗಲೇ ಮೈಯೆಲ್ಲಾ ನಡುಕ.

"ತೆಗೆಯಮ್ಮಾ ಮುಸುಗು. ನಾವು ಮನುಷ್ಯರಲ್ಲವೇ ? ಎದ್ದೇಳು, ಡಾಕ್ಟರ ಹತ್ತಿರ ನಾವೇ ಕರೆದೊಯ್ಯುತ್ತೇವೆ. ನೀನು ಸಂತೋಷವಾಗಿದ್ದರೆ ಸಾಕು.... ನಮಗಿನ್ನೇನು ಬೇಕು ? ನಮ್ಮಲ್ಲಿ ರಾಣಿಯಂತಿರಬಹುದು. ನಿನಗೆ ಬೇಕು ಬೇಕಾದುದೆಲ್ಲಾ ಉಂಟು. ಸ್ವರ್ಗಸುಖದಂತಿದೆ. ನಮ್ಮಲ್ಲಿ ಮೊಮ್ಮಕ್ಕಳ ಕಾಲಕ್ಕೂ ಮುಗಿಯದಂತಹ ಸಂಪತ್ತು. ನೀನು ನಮ್ಮ ಮನೆಯಲ್ಲಿ ಕೆಲಸ ಮಾಡುವ ಅಗತ್ಯವಿಲ್ಲ. ಈ ಶ್ರಮ ಜೀವನ ಯಾರಿಗೆ ಬೇಕು ಹೇಳು ? ನಿಮ್ಮ ತಂದೆ ಒಳ್ಳೆ ಕೆಲಸವನ್ನು ಮಾಡಿದ್ದಾರೆ. ಏನೂ ಚಿಂತೆ ಮಾಡಬೇಡ."

"ಅಮ್ಮಾ, ದಯವಿಟ್ಟು ಒತ್ತಾಯಿಸಬೇಡಿ. ಹೀಗಾದರೆ ನನ್ನ ಕಾಹಿಲೆ ಇನ್ನಷ್ಟು ಹೆಚ್ಚುತ್ತದೆ."

ಸ್ವಲ್ಪವೇ ಮುಸುಗು ಸರಿಸಿದ ಶ್ಯಾಮಲಾ ಸಂಕಟಪೂರ್ಣ ದನಿಯಲ್ಲಿ ನುಡಿದಳು.

"ಸಂಕೋಚವೇಕೆ ? ನಾನಿಲ್ಲವೇ ಜೊತೆಗೆ, ಬಾ ಹೋಗಿ ಬರೋಣ. ಕಾರಿದೆ, ನೀನೇ ಹೋಗುವುದಾದರೆ ಬಸ್ಸಿನ ದಾರಿ ಕಾಯಬೇಕು. ಈ ತೊಂದರೆ ಎಲ್ಲಾ ಏಕೆ ? ಸಂಕೋಚ ಬೇಡವೇ ಬೇಡ ಎದ್ದು ಬಾಮ್ಮಾ...."

ಶ್ಯಾಮಲಾ ತನ್ನಲ್ಲೇ ಯೋಚಿಸಿ ಎದ್ದು ಕುಳಿತು ನುಡಿದಳು "ಮುಖ ತೊಳೆದುಕೊಂಡು ಬರುವೆ."

"ಆಗಲಮ್ಮ."

ಮೂವರೂ ಹೊರಬಂದು ಕುಳಿತುಕೊಂಡರು. ಶ್ಯಾಮಲಾ ಅಡಿಗೆಯ ಮನೆಗೆ ಹೋಗಿ ಬಾಗಿಲು ಮುಚ್ಚಿಕೊಂಡಳು ಎಷ್ಟು ಹೊತ್ತಾದರೂ ಹೊರಬರಲಿಲ್ಲ. ಅವರು ಅವಳಿಗಾಗಿ ಕಾದು ಕುಳಿತುದನ್ನು ನೋಡಿ ಗೌರೀಮಾ ಕೇಳಿಕೊಂಡಳು "ಅವಳಿಗೆ

ಈಗಲೇ ಮದುವೆಯಾಗುವುದು ಸುತರಾಂ ಇಷ್ಟವಿಲ್ಲ. ಇನ್ನೂ ಹದಿನೇಳರ ಪ್ರಾಯ. ನಿಮ್ಮ ಒತ್ತಾಯವೇಕೆ ? ದಯವಿಟ್ಟು ಕ್ಷಮಿಸಿರಿ. ಮಕ್ಕಳಿಗೆ ಇಷ್ಟವಿಲ್ಲದಾಗ ಒತ್ತಾಯಿಸುವುದು ಒಳ್ಳೆಯದಲ್ಲ. ನಾಳೆ ಜೀವಕ್ಕೆ ಅಪಾಯ ತಂದುಕೊಂಡರೇನು ಗತಿ?''

ತಾಯಿಯ ಕಳಕಳಿಯ ಬಿನ್ನಪದಿಂದ ಬಾಯ್ದೆರೆಯಲು ಮನಸ್ಸಾಗಲಿಲ್ಲ. ಒಂದೆರಡು ಗಳಿಗೆ ಸುಮ್ಮನಿದ್ದು ಘೋರ್ಪಡೆ ಹೇಳಿದ ''ನೀವು ಬುದ್ಧಿ ಹೇಳಿ, ಒಪ್ಪಿಸಿರಿ. ನಾವು ಇನ್ನೊಮ್ಮೆ ಬಂದು ನೋಡುತ್ತೇವೆ. ಗಂಗಾರಾಂಗೆ ನಾನೇ ಹೇಳುವೆ.''

ಗೌರೀಮಾ ''ಆಗಲಿ'' ಎಂದಳು ಕೈ ಮುಗಿದುಕೊಂಡು.

''ಏಳಿ ಹೋಗೋಣ, ಹೆಣ್ಣು ಮಕ್ಕಳಿಗೆ ಮದುವೆ ಎಂದರೆ ಯಾವಾಗಲೂ ಸಂಕೋಚವೇ. ಇದೇನೂ ಹೊಸದಲ್ಲ'' ಎಂದ ಘೋರ್ಪಡೆ.

ಮೂವರೂ ಹೊರಟು ಹೋದರು. ಅದುವರೆಗೂ ತುಟಿ ಎರಡು ಮಾಡದಿದ್ದ ಶಾಂತಲಾ ''ಅಮ್ಮಾ, ಅಪ್ಪ ಇದಕ್ಕೇ ಅಲ್ಲವೇ ಘೋರ್ಪಡೆ ಬಂದಾಗಲೆಲ್ಲಾ ಅಕ್ಕನನ್ನು ಕರೆಯುತ್ತಿದ್ದುದು ?''

''ಹೌದು ಮಗಳೇ! ಅವರವರ ಸ್ನೇಹಾಚಾರ ನಮಗೆ ಪ್ರಾಣ ಸಂಕಟ. ಏನು ಮಾಡೋಣ ಹೇಳು ? ಸ್ವಲ್ಪವೂ ಹಿಂದೆ ಮುಂದೆ ಯೋಚಿಸದೇ ಹೋದರೆ ಆಗುವುದೇ ಹೀಗೆ. ವಿದ್ಯಾವಂತರೂ, ಯೋಚಿಸಬಲ್ಲವರೂ ಬಟ್ಟೆಗೆಟ್ಟರೆ ಕಲಿಯದವರ ಪಾಡೇನು ? ನನಗೆ ಅದೇ ದುಃಖ.''

ಗೌರೀಮಾ ಅಷ್ಟೆಂದು ಒಳಹೋಗಿ ಕದತಟ್ಟಿ ''ಅವರು ಹೊರಟು ಹೋದರು. ನೀನು ಹೊರ ಬಾ ಮಗಳೇ'' ಎಂದಳು, ನೀರಸ ದನಿಯಲ್ಲಿ. ಹೃದಯ ಮೆಲ್ಲನೆ ಡವಡವಿಸುತ್ತಿದೆ.

ಶ್ಯಾಮಲಾ ಹೊರಬಂದು ''ನಾನು ಈ ಉಪಾಯ ಮಾಡದಿದ್ದರೆ ಅವರು ಎಷ್ಟು ಹೊತ್ತಾದರೂ ಹೋಗುತ್ತಿರಲಿಲ್ಲ. ಸಧ್ಯ ತೊಲಗಿದರಲ್ಲಾ, ಅದೇ ಸಾಕು.''

ಶ್ಯಾಮಲಾ ಹಾಸಿಗೆಯನ್ನು ಸೇರುತ್ತಲೂ ಒಳಗೆ ಬಂದ ಶಾಂತಲಾ ''ನೀನು ಮಾಡಿದ್ದು ಸರಿಯಾದ ಉಪಾಯ. ಅವರಿಗೆ ಅಷ್ಟಾದರೂ ನಾಚಿಕೆಯಿಲ್ಲ; ಮತ್ತೆ ಬರುವುದಾಗಿ ಹೇಳಿ ಹೋಗಿದ್ದಾರೆ.''

''ಈ ಜಗತ್ತೇ ಹಾಗೆ ಶಾಂತಲಾ.''

* * *

ಶರತ್ ಕ್ರಿಕೆಟ್ ಬ್ಯಾಟ್ ತಂದು ಮೂಲೆಯಲ್ಲಿಟ್ಟ; ಮೈಯೆಲ್ಲಾ ನಿಗಿನಿಗಿ ನಲಿಯುವಷ್ಟು ಉತ್ಸಾಹ ಮನದಲ್ಲಿ. ತಾಯಿ ಅವನನ್ನು ಕಾಣುತ್ತಲೂ ಘೋರ್ಪಡೆ ಬಂದು ಹೋದ ವಿಷಯವನ್ನು ಮುಂದಿಟ್ಟು ಹೇಳಿದಳು ''ಈ ಸಮಸ್ಯೆಯನ್ನು ಹೇಗೆ ಬಗೆ ಹರಿಸುವುದೋ....ಕಾಣೆ ಮಗನೇ!''

''ಸುಮ್ಮನಿರಿ....ಅದೇ ಬಗೆ ಹರಿಯುತ್ತೆ. ಅದಕ್ಕೂ ಸರಿಯಾದ ಸಮಯ ಬರಬೇಕು. ನೋಡೋಣ, ಏನೇನಾಗುತ್ತೆ ಅಂತ. ನಾನೂ ಬೇರೊಂದು ಉಪಾಯ ಹೂಡುವೆ.''

''ನಿಜ ಮಗನೇ! ಎದುರು ಹಾಕಿಕೊಂಡರೆ ಆಗುವುದಿಲ್ಲ. ಇದಕ್ಕೊಂದು ಸರಿಯಾದ ದಾರಿ ಹುಡುಕಿಕೊಳ್ಳಬೇಕು.''

ಶರತ್ ಒಳಹೋಗಿ ''ಶ್ಯಾಂ! ನಿನ್ನ ಅತ್ತೆ ಮಾವ ಬಂದಿದ್ದರಂತೆ!'' ಎಂದ ಹಾಸ್ಯ ಪ್ರಧಾನವಾದ ದನಿಯಲ್ಲಿ. ತುಟಿ-ಕೆನ್ನೆಗಳಲ್ಲಿ ತುಂಟ ನಗೆಯು ಹರಡಿತು.

''ನಿನಗೆ ತಮಾಷೆ. ನನಗೆ ಪ್ರಾಣ ಸಂಕಟ!'' ನರಳಿದಳು ಶ್ಯಾಮಲಾ.

ಶರತ್ ತಮಾಷೆಯ ದಾಟಿಯನ್ನು ಬದಲಿಸಿ ಕೇಳಿದ,

''ಈಗ ನಿನಗೆ ಜ್ವರ ಬಿಟ್ಟಿತೇ ?''

''ಇಲ್ಲ....''

''ಈ ಹಾಳು-ಮೂಳು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಮೊದಲು ಆರೋಗ್ಯ... ಅನಂತರ ಇದೆಲ್ಲಾ; ಅವರು ಬಂದು ಹೋದರೇನಂತೆ ? ಅಪ್ಪ ಮಾತು ಕೊಟ್ಟರೇನಂತೆ? ಅದಕ್ಕೆಲ್ಲಾ ಹೆದರಬೇಕಿಲ್ಲ. ಸುಮ್ಮನಿದ್ದು ಬಿಡು. ಏನಾಗುತ್ತೆ ನೋಡೋಣ.''

ಅಲ್ಲಿಗೆ ಬಂದ ಶಾಂತಲಾ ''ಇಲ್ಲಿ ಅವರಿದ್ದಷ್ಟು ಸಮಯವೂ ಉಸಿರು ಕಟ್ಟಿದಂತಾಗಿತ್ತು ಶರತ್. ಅವರು ಹೋಗುವವರೆಗೂ ನಾನು ಪುಸ್ತಕದಿಂದ ಕಣ್ತೆಗೆಯಲಿಲ್ಲ'' ಎಂದಳು; ಮುಖಬಿಂಬ ದುಃಖ-ಅಸಮಾಧಾನಗಳಿಂದ ಬಣ್ಣಗೆಟ್ಟಿತ್ತು.

''ಬಿಡು. ಬಿಡು. ಬಂದರೇನಾಯ್ತು; ನೆಂಟರು ಬಂದರು, ಎಂದುಕೊಂಡರಾಯ್ತು.''

''ಬಂದವರು ಬಂದ ಹಾಗೆ ಹೋದರೆ ತೊಂದರೆ ಏನಿತ್ತು ? ಅವರ ವ್ಯವಹಾರ ಇಲ್ಲಿಯತನಕ ಏಕೆ ಕೈ ಚಾಚಬೇಕು ?''

ಶರತ್ ಪಕಪಕನೆ ನಕ್ಕುಬಿಟ್ಟ-''ಹೆಣ್ಣಿದ್ದವರ ಮನೆಗೆ ಜನ ಬರುವುದು ಹೀಗೆಯೇ!''

"ನಾನಿಂದು ಡಾಕ್ಟರ ಬಳಿಗೆ ಹೋಗಬೇಕಿತ್ತು. ನನಗೆ ಬಹಳ ಬಳಲಿಕೆ. ಆ ಡಾಕ್ಟರನ್ನೇ ಬರ ಹೇಳಿದ್ದರೆ ಒಳ್ಳೆಯದಿತ್ತು....ಏನು ಮಾಡುತ್ತಿ ?" ಶ್ಯಾಮಲಾ ನಡುವೆ ಬಾಯಿ ಹಾಕಿದಳು.

"ಗೆಳೆಯನ ಮನೆಗೆ ಹೋಗುವಾಗ ಹಾಗೇ ಹೇಳಿ ಹೋಗುವೆ."

"ಹಾಗೇ ಮಾಡಪ್ಪಾ, ನಾನು ಹೋಗಲಾರೆ."

ಶ್ಯಾಮಲಾ ಮೈ ಮುದುಡಿ ಮಲಗಿದಳು ಹೊದಿಕೆ ಹೊದ್ದು.

* * *

ತಂಗಿಯನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ನುಡಿದಳು ಶ್ಯಾಮಲಾ, "ನಿನ್ನದು ಸುಮಾರು ಎಪ್ಪತ್ತು ರೂಪಾಯಿ ನನ್ನ ಬಳಿ ಇದೆ. ಅದಕ್ಕೆ ಇನ್ನಷ್ಟು ಹಣಹಾಕಿ ಒಂದು ಪುಟ್ಟ 'ವ್ಹೀಲ್ ಚೇರ್' ಮಾಡಿಸುವೆ. ಅದರಲ್ಲಿ ಕುಳಿತು ನೀನು ಮನೆಯೆಲ್ಲಾ ಓಡಾಡಬಹುದು; ಶಾಲೆಗೂ ಹೋಗಬಹುದು. ಆಯಿತೇ ?"

"ಸರಿ....ಅಕ್ಕಾ! ಈ ಪುಟ್ಟ ಮನೆಯಲ್ಲಿ ವ್ಹೀಲ್ ಚೇರ್ ಓಡಾಡಲು ಸಾಧ್ಯವೇ ?"

"ನಾನು ಮಾಡಿಸುವುದು ಬೇಬಿಚೇರ್ ತಾನೇ ? ಓಡಾಡಬಹುದು ಪರವಾಯಿಲ್ಲ. ನೀನು ಸಂತೋಷವಾಗಿದ್ದರೆ ಸಾಕು....ನಿನ್ನ ಜೊತೆಯಲ್ಲಿ ಮಲಗಿರೋಣ-ಮುದ್ದಿಸೋಣ ಎನಿಸುತ್ತೆ. ಆದರೆ ಮುಟ್ಟುವುದಕ್ಕೇ ಭಯ. ನನ್ನ ಜ್ವರ ನಿನಗೂ ಅಂಟಿದರೆ ಎಂಬ ಚಿಂತೆ."

"ಏನೂ ಆಗುವುದಿಲ್ಲ" ಎಂದವಳು ಸ್ವಲ್ಪಹೊತ್ತು ಯೋಚಿಸಿ ಪುನಃ ಅಕ್ಕಾ! ನನಗೆ ಅಂಟಿದರೂ ಪರವಾಯಿಲ್ಲ ಬಿಡು. ನನ್ನಂತಹ ಅದೃಷ್ಟಹೀನರಿಗಾಗಿ ಏಕೆ ಆತಂಕ ? ನರಳುವುದಾದರೆ ಕಷ್ಟ. ಸತ್ತು ಹೋದರೆ ಏನೂ ನಷ್ಟವಿಲ್ಲ. ಇನ್ನೂ ಒಳ್ಳೆಯದೇ!"

ಆ ತಕ್ಷಣ ಅವಳ ಬಾಯಿ ಮುಚ್ಚಿದಳು ಶ್ಯಾಮಲಾ.

"ಈ ದೇಶದಲ್ಲಿ ಹೆಣ್ಣಾಗಿ ಹುಟ್ಟಬಾರದು."

ಗೌರೀಮಾ ಶಾಂತಲೆಯ ತಲೆಬಾಚಿ ಜಡೆ ಹೆಣೆಯುತ್ತ ನುಡಿದಳು,

"ನಮ್ಮ ಸಮಾಜದ ಓರೆಕೋರೆಗಳನ್ನು ಇನ್ನೊಂದು ಶತಮಾನಕ್ಕೂ ತಿದ್ದಲಾಗುವುದಿಲ್ಲ ಶ್ಯಾಮಲಾ. ಈ ಪುರುಷವರ್ಗ ಹೇಗೇ ಇರಲಿ, ಎಷ್ಟೇ ದುರ್ಗುಣಗಳನ್ನು ಹೊಂದಿರಲಿ, ಅವಿದ್ಯಾವಂತರಿರಲಿ, ರೋಗಿಗಳಿರಲಿ ತಮ್ಮ ಅರ್ಧಾಂಗಿಯರು ಮಾತ್ರ ಸರ್ವೋತ್ತಮವಾಗಿರಬೇಕು. ಅಲ್ಲಿ- ಇಲ್ಲಿ ಹತ್ತು

ಹುಡುಗಿಯರು ನೋಡುವುದು-ಬಿಡುವುದು ಆರಿಸುವುದು ಇದು ಅರ್ಥಹೀನ.... ತನ್ನ ಕುರೂಪ-ಕುವಿದ್ಯೆ-ಕುಸಂಸ್ಕಾರಗಳು ಗಣನೆಗೇ ಬರುವುದಿಲ್ಲ. ನಾವು ನಮ್ಮ ಹುಡುಗಿಯರನ್ನು ಅಂಕೆಯಲ್ಲಿಟ್ಟುಕೊಳ್ಳುವುದು ಇವರ ಉದ್ಧಟತನಕ್ಕೆ ಚೋದನೆ ಎನಿಸುತ್ತೆ. ವಿದೇಶಗಳಲ್ಲಿ ಹೆಣ್ಣು ಮಕ್ಕಳಿಗೆ ಸ್ವಾತಂತ್ರ್ಯವಿದೆ. ಅವರಿಗೆ ಬೇಕಾದವರನ್ನು ಆರಿಸಿಕೊಳ್ಳುತ್ತಾರೆ. ಇಲ್ಲಿಯವರ ಪಾಡು ದೇವರಿಗೇ ಪ್ರೀತಿ. ನಾವು ತಂದೆ-ತಾಯಿಗಳು ಹುಡುಕುವುದರಲ್ಲಿ ಲೋಪದೋಷಗಳು ಉಳಿಯುವ ಸಾಧ್ಯತೆ ಬಹಳ ಎಂದರೆ ತಪ್ಪಲ್ಲ. ವಿದೇಶೀಯರು ಗೆಳೆತನದಲ್ಲೇ ಒಂದೆರಡು ವರ್ಷ ಕಳೆದು ಅನಂತರ ಸಂಸಾರಕ್ಕೆ ಇಳಿಯುತ್ತಾರೆ. ನಮ್ಮ ನರಕ ಜೀವನವನ್ನು ನೋಡಿದರೆ ಅದೇ ಕ್ಷೇಮವೆಂದು ತೋರುತ್ತದೆ''

ಆ ಕೂಡಲೇ ಚಿತ್ತಭಿತ್ತಿಯಲ್ಲಿ ಡಾ॥ ಫರೀದ್ ಸುಳಿದಳಿದ. ಅವನಿಗೆ ಉತ್ತರ ಬರೆಯುವ ಸಾಹಸವನ್ನು ತಾನು ಮಾಡಲಿಲ್ಲ. ಅವನನ್ನು ಅರ್ಥಮಾಡಿಕೊಳ್ಳುವುದೂ ನನ್ನಿಂದ ಸಾಧ್ಯವಾಗಲಿಲ್ಲ. ಮುಂದೆಯೂ ಅರ್ಥಮಾಡಿಕೊಳ್ಳುವೆನೋ ಇಲ್ಲವೋ ಎನಿಸಿ ನಿಟ್ಟುಸಿರುಬಿಟ್ಟಳು ಶ್ಯಾಮಲಾ. ಹೃದಯ ಕುಂಡಲಿನಿಯಿಂದ ಹರಿದ ಭಾವಧಾರೆ ಮುಖಬಿಂಬಿದಲ್ಲಿ ತೊಟ್ಟಿಕ್ಕಿತು ತಟತಟನೆ.

## ೧೯

ಹೊರಜಗತ್ತು ಎಂದಿನಂತೆಯೇ ಇದೆ. ಸೂರ್ಯ, ಆಕಾಶ, ಮೋಡ, ಗಾಳಿ, ಹಾರಾಡುವ ಹಕ್ಕಿಗಳು ಎಲ್ಲವೂ ಎಂದಿನಂತೆಯೇ ಇವೆ.

ಆದರೆ ....!

ಇಂದೇಕೋ ನನ್ನ ಮನಸ್ಸೇ ಸರಿಯಾಗಿಲ್ಲ; ಅಪ್ಪ ಹೇಳುವುದು ದೇಶಾಂತರ ಹೋಗುವೆ; ಎಂದು. ಒಂದು ವೇಳೆ ಅಪ್ಪ ದೇಶಾಂತರ ಹೋಗುವುದಾದರೆ ಈ ಮನೆ ನಡೆಯುವುದು ಹೇಗೆ? ನಾನು ಬದುಕಿರುವುದರಿಂದ ಈ ಸಮಸ್ಯೆ. ಒಂದು ವೇಳೆ ನಾನೇ ಇಲ್ಲವಾದರೆ...? ಯಾವ ಸಮಸ್ಯೆಯೂ ಇಲ್ಲವಲ್ಲಾ......ಈ ಜೀವನ ಭಯಂಕರ ಮೊಸಳೆ ಇದ್ದಂತೆ, ಎಲ್ಲಿಯಾವೆಡೆಯಲ್ಲಿ ಕಚ್ಚಿ ಹಿಡಿಯುತ್ತದೋ, ಒಮ್ಮೆ ಸಂಸಾರ ಕಟ್ಟಿಕೊಂಡರೆ ಮುಗಿಯಿತು. ಅನಂತರ ನರಕ....ನರಕ. ಅದರಿಂದ ಬಿಡುಗಡೆ ಸತ್ತಾಗಲೇ. ಸಂಸಾರ ಬಂಧನದ ಬಿಗಿಮುಷ್ಟಿಯಲ್ಲಿ ನರಳಿನರಳಿ ಸಾಯುವುದಕ್ಕಿಂತ ಈಗಲೇ ಸಾಯುವುದು ಲೇಸು. ಗಂಡಿಗೆ ಯಾವ ಕಟ್ಟು ಪಾಡೂ ಇಲ್ಲ. ಹೆಣ್ಗೆ

ಎಲ್ಲಿಲ್ಲದ ಗೋಳು. ಇದೆಲ್ಲಾ ಏಕೆ? ಆರ್ಥಿಕ ಸ್ವಾತಂತ್ರ್ಯ, ವೈಯ್ಯುಕ್ತಿಕ ಸ್ವಾತಂತ್ರ್ಯ ಇಲ್ಲದ ಬಾಳೊಂದು ಬಾಳೇ? ಪತಿಯ ಸಹಚರ್ಯದಲ್ಲಿ -ಸಮಭಾಗಿತ್ವದಲ್ಲಿ ಜೀವನಸತ್ಯವನ್ನು ಕಂಡುಕೊಳ್ಳುವುದು ಸಾಧ್ಯವಾದರೆ ಮಾತ್ರ ಬದುಕು ಸಾರ್ಥಕ. ಹಿಂದಾಸ್ಥಾನದಲ್ಲಿ ಸ್ತ್ರೀ ಜೀವನದ ಅಂತರಗಂಗೆ ಬಹು ಮುಖವಾಗಿ ಪ್ರವಹಿಸುವುದು ಸಾಧ್ಯವೇ ಇಲ್ಲ. ಎಲ್ಲೋ ಕೆಲವರು ಸುಖೀರಾಜ್ಯವನ್ನು ಕಂಡಿರಬಹುದು. ಅದು ಅವರವರ ದಾಷ್ಟೀಕತನದಿಂದ ಎನ್ನುವುದಕ್ಕಿಂತ ಸೊತ್ತಾಗಿ-ತೊತ್ತಾಗಿ ಎಂದರೆ ಸರಿ ಹೋದೀತೇನೋ....ನಮ್ಮ ಆತ್ಮ, ನಮ್ಮ ಅಸ್ತಿತ್ವ, ನಮ್ಮ ಅಭಿಮತ ಇವುಗಳಿಗೆ ಬೆಲೆ ಏನು? ಜೀವನ ವಿಕಾಸಕ್ಕಾಗಿ-ಅಬಲತೆಯ ರಕ್ಷಣೆಗಾಗಿ ವಿವಾಹ ತಪ್ಪುವಂತಿಲ್ಲ. ವಿವಾಹಬಂಧ ನೋಡಿದರೆ ದೂರ ಗಮ್ಯದ ಹಾದಿಗೆ ಮುಳ್ಳು. ಈ ಚಿತ್ರವಿಚಿತ್ರ ವಿನ್ಯಾಸದ ಜೀವನರೇಖೆಯು ದಿಕ್ಕುದೆಸೆ ಅರಿತುಕೊಳ್ಳುವುದು ಅಸಾಧ್ಯ... ಬದುಕು ಇಷ್ಟೊಂದು ಹಿಂಸ್ರಿತವಾದರೆ ಅದನ್ನು ಹೊಂದುವುದಾದರೂ ಏಕೆ? ಏಕೆ??

ಪ್ರಶ್ನೆ ಚಿತ್ತಭಿತ್ತಿಯನ್ನು ಮೊನಚು ಮುಳ್ಳಿನಂತೆ ಕೊರೆಯುತ್ತಲಿತ್ತು. ಎಷ್ಟೇ ಪ್ರಯತ್ನಿಸಿದರೂ ಅದರಿಂದ ಬಿಡುಗಡೆ ಸಾಧ್ಯವಾಗಲಿಲ್ಲ. ಚಿಂತೆ, ಚಿಂತೆ, ಚಿಂತೆಯ ಮಹಾಪೂರ.

ಜ್ವರಬಿಟ್ಟು ಮೂರುನಾಲ್ಕು ದಿನಗಳಾಗಿದ್ದುವು. ಆದರೇನು? ದೈಹಿಕ ಶಕ್ತಿಯನ್ನು ಹಿಂಡಿ ಹೀರಿ ಹಿಪ್ಪೆಯನ್ನಾಗಿ ಮಾಡಿದೆ ವಿಷಮಶೀತಜ್ವರ. ಡಾಕ್ಟರು ಹೇಳಿದ್ದ ಔಷಧಿ-ಟಾನಿಕ್‌ಗಳನ್ನು ತೆಗೆದುಕೊಳ್ಳುತ್ತಲೇ ಇದ್ದಾಳೆ. ಆದರೂ ಸುಧಾರಿಸಿಕೊಳ್ಳಲು ಒಂದು ವಾರವೇ ಬೇಕು ಎಂಬಷ್ಟು ನಿಶ್ಯಕ್ತಿ-ಬಳಲಿಕೆ. ಸ್ವಲ್ಪ ಹೊತ್ತು ಕುಳಿತು ಓದುವುದಷ್ಟೇ;ಮತ್ತೇನೂ ಅವಳಿಂದ ಸಾಧ್ಯವಾಗದು. ಆಫೀಸಿಗೆ ರಜೆ ಬರೆದುಕೊಂಡುದುದಷ್ಟೆ, ಏನಾಯಿತೋ ತಿಳಿಯಲೂ ಸಾಧ್ಯವಾಗಿಲ್ಲ.

* * *

ಪಂಡರೀ ಬಂದಾಗ ಮಧ್ಯಾಹ್ನ ನಾಲ್ಕರ ಸಮಯ.

ಅವಳು ಬರಬರುತ್ತಲೇ ಅಂದಳು ''ನಿನ್ನನ್ನು ನೋಡಲೆಂದು ಒಂದು ಗಂಟೆ ಮುಂಚೆಯೇ ಕೇಳಿಕೊಂಡು ಹೊರಟೆ, ಡಾ॥ ಫರೀದ್ ನಿನಗೆ ಬೇಗನೆ ಗುಣಮುಖಿ ಯಾಗುವಂತೆ ಹರಸಿ ಶುಭಾಶಯ ಕಳಿಸಿದ್ದಾರೆ'' ಎಂದು ''ಗೆಟ್ ವೆಲ್ ಸೂನ್' ಕಾರ್ಡನ್ನು ಕೊಟ್ಟಳು.

"ಈ ಹಿಂದೆಯೂ ಒಂದು ಕಾರ್ಡ್ ಕಳಿಸಿದ್ದರು. ನಾನು ಪ್ರತ್ಯುತ್ತರವಾಗಿ ವಂದನೆಗಳ್ನು ಕಳುಹಿಸಿರುವೆ."

"ಈಗ ಹೇಗಿದ್ದಿ?"

"ಜ್ವರ ಬಿಟ್ಟಿದೆ. ತುಂಬ ನಿಶ್ಶಕ್ತಿ."

"ವಿಷಮ ಶೀತ ಜ್ವರ ಮರುಕಳಿಸುವುದು ಹೆಚ್ಚು. ಪಥ್ಯಪಾನಾದಿಗಳು ಬಹಳ ಮುಖ್ಯ ಇದರಲ್ಲಿ.'"

"ನಿಜ. ಮೊದಲು ನಾಲ್ಕು ದಿನ ಬಂದು ಅನಂತರ ಬಿಟ್ಟಿತ್ತು. ಮತ್ತೆರಡು ದಿನಗಳಲ್ಲಿ ಮರುಕಳಿಸಿತು. ಈಗ ಬಿಟ್ಟು ನಾಲ್ಕು ದಿನಗಳಾಗಿವೆ. ಇನ್ನು ಬರಲಾರದು ಎಂದು ತೋರುತ್ತದೆ."

"ಸಧ್ಯ, ಮರುಕಳಿಸುವುದು ಬೇಡ. ಬೇಗನೆ ಶಕ್ತಿ ಮೈಗೂಡಿಸಿಕೊಂಡು ಆಫೀಸಿಗೆ ಬಾ. ಎಲ್ಲರೂ ನಿನ್ನ ನಿರೀಕ್ಷೆಯಲ್ಲಿದ್ದಾರೆ."

"ನನಗೂ ಆ ಯೋಚನೆ ತುಂಬಾ ಇದೆ. ಮನೆಯಲ್ಲಿದ್ದು ಬಹಳ ಬೇಸರ ಬೇರೆ. ಮೊನ್ನೆ ಡಾಕ್ಟರ ಶಾಪಿಗೆ ಹೋಗುವಾಗ ದಾರಿಯಲ್ಲಿ ಶಾಂತಲೆಗೆ ಒಂದು 'ವ್ಹೀಲ್ ಚೇರ್' ಮಾಡಿಸಲು ಅಂಗಡಿಗೆ ಹೋಗಿದ್ದೆ. ಹತ್ತು ನಿಮಿಷದ ವ್ಯವಹಾರ ಮುಗಿಸುವಾಗ ತಲೆ ತಿರುಗುವಂತಾಯ್ತು. ಅನಂತರ ಇಷ್ಟು ಬೇಗ ಬಂದುದು ತಪ್ಪಾಯ್ತು ಎಂದುಕೊಂಡು ಹೊರಟು ಬಂದೆ. ಈ ದಿನ ಆ ವ್ಹೀಲ್‌ಚೇರ್ ಬರುತ್ತೆ. ಪಾಪ, ಶಾಂತಲಾ ಇದ್ದಲ್ಲೇ ಇದ್ದು ಬೇಸರಗೊಂಡಿದ್ದಾಳೆ. ಅದು ಬಂದರೆ ಸ್ವಲ್ಪ ಓಡಾಡಬಹುದು ಅವಳನ್ನು ನೋಡಿದರೆ ನನಗೆ ಒಡಲೆಲ್ಲ ಸಂಕಟ. ದೇವರು ನಿಷ್ಕರುಣಿ. ಅವಳನ್ನು ಮೂಲೆಗೆ ಕೂರಿಸಿ ಬಿಟ್ಟ;" ವಾಕ್ಯ ಸರಣಿ ಮುಗಿದಾಗಲೇ ನಿಟ್ಟುಸಿರೊಂದು ಹೊರಬಿತ್ತು.

ಪಂಡರೀ "ಹೌದು" ಎಂಬಂತೆ ತಲೆದೂಗಿ "ಒಬ್ಬೊಬ್ಬರಿಗೆ ಒಂದೊಂದು ಬಗೆಯ ಕಷ್ಟ, which cannot be cured must be endured" ಎಂದಳು ವಿಷಾದವಾಣಿಯಲ್ಲಿ.

"ಈಗ ನಿನ್ನ ಜೀವನ ಸಮಸ್ಯೆ ಎಲ್ಲಿಯವರೆಗೆ ಬಂದಿದೆ? ನಿನ್ನ ಅನಿಷ್ಟವನ್ನು ನಿನ್ನ ತಂದೆ ಮತ್ತು ಘೋರ್ಪಡೆ ಒಮ್ಮನದಿಂದ ಒಪ್ಪಿಕೊಂಡಿದ್ದಾರೆಯೇ?"

"ಈಚೆಗೆ ಅವರ್‍ಯಾರೂ ಬಂದಿಲ್ಲ, ಅಪ್ಪ ಏನೂ ಹೇಳಲಿಲ್ಲ. ಆದ್ದರಿಂದ ಹಾಗೇ ಉಳಿದಿದೆ. ಅದು ಮುಂದುವರಿಯದಿದ್ದರೆ ಸಾಕು..ಗೊಜ್ಜು ಮೈಯಿನ ಆ ಭೂಪ ಅಲ್ಲಿ ಕಂಡರೆ ಇಲ್ಲಿ ನಡುಕ. ಈ one way traffic ನನಗೆ ಏನೇನೂ ಹಿಡಿಸುತ್ತಿಲ್ಲ.

ಹೇಗೆ ಈ ಜೀವನ ಸಮಸ್ಯೆ ಬಗೆಹರಿಯುತ್ತೋ ಎನಿಸುತ್ತಿದೆ. ಅಪ್ಪ ಮಾಡಿದ ಸಾಲ ಸಂದಾಯವಾದರೆ ಈ ಸಮಸ್ಯೆಗೆ ಪರಿಹಾರ. ಈ ಹಣದ ಮೊತ್ತವೆಷ್ಟು, ಏತಕ್ಕೋಸ್ಕರ ಮಾಡಿದರು ಎಂಬುದು ತಿಳಿಯದು. ಅಲ್ಪಸ್ವಲ್ಪವಾದರೆ ಕಂತು ಕಟ್ಟಬಹುದು. ಈಚಿನ ಬೆಳವಣಿಗೆ ಏನು ಎಂಬುದು ತಿಳಿಯದು. ನಾನು ಎಲ್ಲವನ್ನೂ ಭಗವಂತನ ಪಾದಾರವಿಂದಗಳಿಗೆ ಬಿಡುವೆ.''

''ಅದು ಸರಿ. ಭಗವಂತ ಬಗೆ ಹರಿಸಿದರೆ ಸಾಕು. ಆದರೂ ಹಾಗೆಂದು ಸುಮ್ಮನಿರಬೇಡ. ನೀನೇನೂ ದಡ್ಡಿ ಅಲ್ಲ. ಪ್ರಚಂಡ ಬುದ್ಧಿಮತ್ತೆಯ ಮಾನಿನಿ. ಎಲ್ಲರಿಗಿರುವಂತೆಯೇ ನಿನಗೂ ಬೇಕು ಬೇಡಗಳ ಅವಶ್ಯಕತೆ ಇರುತ್ತದೆ. ನಿನ್ನ-ಮಾನಸಿಕ-ದೈಹಿಕ-ಬೌದ್ಧಿಕ ಸ್ತರಗಳಿಗೆ ಸರಿಯಾದ ವ್ಯಕ್ತಿ ಬಂದರೆ ಸ್ವಾಗತಿಸು. ಇಲ್ಲದಿದ್ದರೆ ಹೀಗೆ ಕೆಲಸ ಮಾಡಿಕೊಂಡಿರು. ಜೊತೆ ಜೊತೆಗೇ ಓದು, ಕೆಲಸ ಮತ್ತು ಜೀವನ ಒಟ್ಟಿಗೆ ನಡೆಯಲಿ. ನೀನು ತಾಯಿಗೆ-ತಂಗಿಗೆ ಆಧಾರವಾದರೆ ಸಾಕಲ್ಲ.''

''ನಿಜ ಪಂಡರೀ. ನಾನು ಯೋಚಿಸುವುದು ಅದನ್ನೇ. ಎಂ.ಎ. ಮಾಡಿಕೊಂಡು ಲೆಕ್ಚರರ್ ಆಗುವ ಯೋಚನೆ ಇದೆ. ತಮ್ಮ ಕ್ರಿಕೆಟ್ ಆಟಗಾರ. ಓದಿನಲ್ಲಿ ಆಸಕ್ತಿ ಕಡಿಮೆ. ಅವನನ್ನು ಓದಿಸುವ ಹೊಣೆಯೂ ಇದೆ. ಬರೀ ನನ್ನದನ್ನೆ ನಾನು ನೋಡಿಕೊಂಡರೆ ಆಗದು. ದಯಾ ದಾರಿದ್ರ್ಯದಿಂದ ನರಳುವ ಈ ಸಂಸಾರವನ್ನು ತೀರ ಹಚ್ಚುವ ಪ್ರಯತ್ನ ನನ್ನದು. ಹಿಂದೂಸ್ಥಾನದ ಸ್ತ್ರೀಜನ ದಲಿತರಿಗಿಂತ ದಲಿತರು. ತೆರೆಯ ಮರೆಯಲ್ಲಿ ನಡೆಯುವ ಅನಾಚಾರ-ಅತ್ಯಾಚಾರ ಬಹುತೇಕವಾಗಿ ಹೊರ ಜಗತ್ತಿಗೆ ತಿಳಿಯುವುದಿಲ್ಲ; ಎಲ್ಲೋ ಹದ್ದುಮೀರಿದ ಕೆಲವಂಶ ಬೆಳಕಿಗೆ ಬಂದು ಸದ್ದು ಗದ್ದಲವೆಬ್ಬಿಸುತ್ತದೆ. ಇಂದು ಕೆಲವು ಸ್ತ್ರೀಬಂಧವಿಮೋಚನಾ ಸಂಘ-ಸಂಸ್ಥೆಗಳು ಹುಟ್ಟಿಕೊಂಡು ತಲೆಯತ್ತುತ್ತಿವೆ...ನನ್ನ ಸಮಸ್ಯೆ ಬಗೆಹರಿಯದಿದ್ದಲ್ಲಿ ಇದನ್ನು ಅಂಥ ಒಂದು ಸಂಸ್ಥೆಯ ಮುಂದೆ ಇಡುವೆ. ನಾನು ನಿಶ್ಚಯಿಸಿರುವುದು ಇದೇ. ನಾನು ಮದುವೆಯಾಗಲೇ ಬಾರದು ಎಂಬ ಯೋಚನೆಯಲ್ಲಿರುವೆ. ಭಗವಂತ ಯಾವ ದಾರಿ ತೋರುತ್ತಾನೋ....''

''ಹೌದು, ಶ್ಯಾಂ! ಅವಸರದಿಂದ ಯಾರು ಯಾರಿಗೋ ಮಾಲೆ ಹಾಕಿದರೆ ಅದರ ಪರಿಣಾಮ ಅನುಭವಿಸುವವರು ನಾವೇ.''

ಆ ಮಾತು ಎದೆಯಾಳದಲ್ಲಿ ಕೈಯಾಡಿಸಿತು.

''ನಮಗೆ ನಾವೇ ಆರಿಸಿಕೊಳ್ಳುವಂತಹ ಅವಕಾಶ ನಮಗೆಲ್ಲಿದೆ?'' ಕಿವಿಯ ಸನಿಹದಲ್ಲಿಯೇ ಕೂಗಿ ಹೇಳಿತು ಅಶರೀರವಾಣಿ.

"ಜಾತಿ ಮತಗಳ ಹಾವಳಿ, ವರದಕ್ಷಿಣೆಯ ಕಾಟ, ಅಸ್ವತಂತ್ರದ ಹಿಂಸೆ, ಆರ್ಥಿಕ ದುರವಸ್ಥೆ, ಅನಾಚಾರಗಳ ಕೋಟಲೆ, ಅಂಧಾನುಕರಣೆ ಅವೆಲ್ಲಾ ಸಾಮಾನ್ಯಕ್ಕೆ ಬಗೆಹರಿಯುವ ಸಮಸ್ಯೆಗಳೇ? ಈ ದೇಶದ ಸ್ತ್ರೀ-ಜೀವನ ಎಷ್ಟು ನರಕಮಯ ಎಂಬುದನ್ನು ಬಲ್ಲವರೇ ಬಲ್ಲರು. ಹೊರ ಜಗತ್ತಿಗೆ ಭಾರತ ಸಂಸ್ಕೃತಿ ಕಸ್ತೂರಿ ಪರಿಮಳ! ಇದಕ್ಕೇನೆನ್ನೋಣ?"

"ಹಾ! ಈ ಗಂಭೀರ ಪರಿಸ್ಥಿತಿಯನ್ನು ಯಾವ ಮಾನದಂಡ ಅಳೆಯಬಲ್ಲದು? ಯಾವ ಕಾನೂನು ಸರಿಪಡಿಸಬಲ್ಲದು? ಯಾವ ಸರಕಾರ ಮನಗಾಣಬಲ್ಲದು? ಇದು ಎಂದೆಂದಿಗೂ ಆಕಾಶಗಂಗೆಯೇ-ಕೊಲೆ, ಕೊಲೆ, ಕೊಲೆಗಳಿಗೆ ಇತಿ ಮಿತಿಯೇ ಇಲ್ಲ. ಮಾನಸಿಕ-ಬೌದ್ಧಿಕ-ದೈಹಿಕ-ಆರ್ಥಿಕ-ಚಿಂತನಕ್ಷಮತೆಗಳ ಕಗ್ಗೊಲೆಯ ನಿಯಂತ್ರಣ ಸಾಕ್ಷಾತ್ ಬ್ರಹ್ಮದೇವ ಬಂದರೂ ಸಾಧ್ಯವಾಗದು. ಇನ್ನು ಸ್ತ್ರೀಬಂಧ ವಿಮೋಚನಾ ಸಂಘಗಳೇನು ಮಾಡಿಯಾವು? ಕಾಲೋಚಿತವಾಗಿ, ಪ್ರಸಂಗೋಚಿತವಾಗಿ ಉಪಾಯದಿಂದ ಜಾರಿಕೊಳ್ಳುವುದರ ಹೊರತು ಬೇರೆ ದಾರಿಯನ್ನೇ ನಾನು ಕಾಣುತ್ತಿಲ್ಲ. ವಿದ್ಯಾಭ್ಯಾಸದಿಂದ, ಅದರಲ್ಲೂ ಸ್ತ್ರೀ ವಿದ್ಯಾಭ್ಯಾಸದಿಂದ ಸಾಮಾಜಿಕ ಪರಿಸ್ಥಿತಿ ಸುಧಾರಿಸುತ್ತೆ ಎಂದು ಮನಃಪೂರ್ತಿ ಯೋಚಿಸಿದ್ದ ಕಾಲವೊಂದಿತ್ತು. ಈಗೀಗ ವಿದ್ಯಾ ಸರಸ್ವತಿಯು ಏನೂ ಮಾಡಲಾರಳು ಎಂಬುದು ಅರ್ಥವಾಗುತ್ತಿದೆ. ನಮ್ಮ ನಮ್ಮ ಉದ್ಧಾರ ಸ್ವಂತಿಕೆಯಿಂದಲೇ ಹೊರತು ಇನ್ನಾರಿಂದಲೂ ಸಾಧ್ಯವಿಲ್ಲ. ಮನೋಬಲ -ಆತ್ಮಬಲ ಇದ್ದರೂ ದೈಹಿಕಬಲ ಇಲ್ಲದಿರುವುದರಿಂದ ಸಾಧ್ಯತೆ ಕುಂಠಿತವೇ. ನೂರಕ್ಕೆ ನೂರರಷ್ಟು ಸಾಧನೆ ಎಂಬುದು ನಮ್ಮಲ್ಲಿ ಕನಸಿನ ಮಾತು."

"ನಿಜ. ಪಂಡರೀ ! ಈ ವಿಚಾರ ಎಷ್ಟು ಯೊಚಿಸಿದರೂ ಸಾಲದು. ಭಾರತ ಸ್ತ್ರೀಯರು ಜೀವನ ಪರಿಸ್ಥಿತಿ ಖಂಡಿತ miserable."

"ಕೇಳು!

ಯಥಾ ಹ್ಯೇಕೇನ ಚಕ್ರೇಣ ನ ರಥಸ್ಯ ಗತಿರ್ಭವೇತ್ ।

ಏವಂ ಪುರುಷಕಾರೇಣ ವಿನಾ ದೈವಂ ನ ಸಿದ್ಧ್ಯತಿ ॥

ಎನ್ನುತ್ತದೆ ಸುಭಾಷಿತ, ಅದ್ದರಿಂದ ನಮ್ಮ ಪ್ರಯತ್ನವನ್ನಂತೂ ನಾವು ಮಾಡಲೇಬೇಕು."

ಸ್ವಲ್ಪ ಹೊತ್ತು ರುದ್ರಮೌನ ರಾಜ್ಯವಾಳಿತು.

ಶಾಂತಲಾ ನಾಲ್ಕು ಕರವಸ್ತ್ರಗಳನ್ನು ಅಕ್ಕನ ಕೈಗೆ ಕೊಟ್ಟು " ಈ ವಾರ ನಾನು ಹೆಚ್ಚು ಪ್ರಯತ್ನಿಸಲಿಲ್ಲ. ನಾಲ್ಕು ಮಾತ್ರ ಹೊಲಿದಿರುವೆ. ಇದುವರೆಗೆ ದಿನಕ್ಕೊಂದು

ತಯಾರಿಸುತಿದ್ದೆ. ಈ ಸಲಿ ಅದೇಕೋ ಸೋಮಾರಿತನ....'' ಎಂದಳು ತುಟಿಗಳಲ್ಲಿ ಕಿರುನಗೆ ತೇಲಿಸಿ.

''ಓ ! ನನ್ನ ತಂಗಿ ಸೋಮಾರಿಯಾದಾಳೇ? ಹೆಚ್ಚು ಹೆಚ್ಚು ಓದಿದ್ದಿ. ನಿನಗೆ ಹೊಲಿಯಲು ಸಮಯವಾಗಲಿಲ್ಲ ಅಷ್ಟೆ.''

ತಂಗಿಯನ್ನು ಮುದ್ದಾಡಿ'' ನೀನು ನನ್ನ ಸ್ವೀಟ್ ಪೆಪ್ಪರ್‌ಮೆಂಟ್!'' ಎಂದಳು, ಕೆನ್ನೆಗೆ ಹೂ ಮುತ್ತನೊತ್ತಿ.

ತಲೆ ಬಾಗಿಲಲ್ಲಿ ಕಟ ಕಟ ಸದ್ದು.

''ಅಮ್ಮ ಮನೆಯಲಿಲ್ಲ. ಇರು, ನಾನೇ ತೆಗೆಯುವೆ.''

ಶ್ಯಾಮಲಾ ಎದ್ದು ಹೋಗಿ ಕದ ತೆರೆದಳು ನೋಡೆ! ಅಪ್ಪ ಮತ್ತು ಹರಿಕಿಷನ್ ಘೋರ್ಷಡೆ! ಒಮ್ಮೆಗೇ ಮೈಗೆ ಬಿಸಿನೀರೆರಿಚಿದಂತೆ ಬೆವತು ಹೋದಳು ಶ್ಯಾಮಲಾ.

''ಎರಡು ಬಸಿ ಕಾಫಿ ತಾ ಶ್ಯಾಮಲಾ.'' ತಂದೆಯ ಅಪ್ಪಣೆ.

ಆ ಕೂಡಲೆ ಹೇಗೆ ಅಲ್ಲಿಂದ ಜಾರಿಕೊಂಡಳೋ...ಅಡಿಗೆಯ ಮನೆಯಲ್ಲಿ ಮಣೆಯ ಮೇಲೆ ಕುಸಿದು ಕುಳಿತಳು. ಹೃದಯ ಮೃದಂಗ ದಡ ದಡ ಮಿಡಿಯಿತು. ಕಣ್ಣುಗಳಿಗೆ ಮಂಜು ಕವಿದಷ್ಟು ಕತ್ತಲೆ.

ಅದೇ ಹರಿಕಿಷನ್ ಘೋರ್ಪಡೆಗೆ ಸ್ವರ್ಗವೇ ಧರೆಗಿಳಿದಷ್ಟು ಸಂತಸ. ತನ್ನ ಪ್ರಿಯತಮೆಯ ಪುನರ್ ಸಂದರ್ಶನಕ್ಕಾಗಿ ಹೃದಯ ಹಾತೊರೆಯುತ್ತಿದೆ. ಕಣ್ಣುಗಳಲ್ಲಿ ಘನಿಸಿದ ಆಸೆಯ ಛಾಯೆ ದಟ್ಟೈಸಿದೆ. ಮೈಯೆಲ್ಲಾ ಮನಸ್ಸಾಗಿ ಕ್ಷಣಕ್ಷಣವನ್ನೂ ಕಾತರದಿಂದ ಕಳೆಯುತ್ತಿದ್ದಾನೆ.

ಆತನ ಆಸೆ ಪ್ರತ್ಯಾಸೆಗಳನ್ನು ನೋಡಿದರೆ ಗಂಗಾರಾಮನಿಗೆ ಸ್ವರ್ಗಕ್ಕೆ ಒಂದೇ ಗೇಣು!

ಕೆಲವು ನಿಮಿಷಗಳು ಸದ್ದಿಲ್ಲದೆ ಉರುಳಿ ಹೋದುವು.

ದೇಹದಾದ್ಯಂತ ಕಂಪನದ ಅಲೆ ಹರಿದಾಡುತ್ತಿದೆ. ಈ ಮನೆಯೇ ಈ ಕ್ಷಣ ಕುಸಿದಿದ್ದರೆ ಅಥವಾ ಈ ಭೂಮಿಯೇ ಬಿರಿದಿದ್ದರೆ? ಒಂದೇ ಕ್ಷಣದಲ್ಲಿ ಗಂಡಾಂತರ ಕಳೆದು ಹೋಗುತ್ತಿತ್ತು. ಭಗವಂತ ಅಷ್ಟೂ ಮಾಡಬಾರದೇ? ಹಾ....! ಕೃಪೆ ಮಾಡು!

ಅದೇ ವೇಳೆಗೆ ಗೌರೀಮಾ ಒಳ ಹೆಜ್ಜೆಯಿಟ್ಟಳು. ಅವಳು ಮೈಯ್ಯೂ ಬೆವತು ತುಂತುರ ತುಂತುರು ಬಿಂದುಗಳು ಮೂಡಿದ್ದುವು ಮುಖದ ಮೇಲೆ. ಕಣ್ಣು ಮುಖಗಳಲ್ಲಿ ಭಯ ಭೀತಿಯ ಮುದ್ರೆ...ಕೈಲಿದ್ದ ಬುಟ್ಟಿಯನ್ನು ಬದಿಗಿಟ್ಟು

"ಇದೇನಮ್ಮಾ ಮತ್ತೆ ? ನಾನು ಪೀಡೆ ತೊಲಗಿತು ಎಂದುಕೊಂಡಿದ್ದೆ!" ಎಂದಳು ಉಸಿರು ಕಟ್ಟಿ.

ಮರುಗಳಿಗೆಯಲ್ಲೇ ಶರತ್ ಪ್ರತ್ಯಕ್ಷ್ಯ....ಷೂ ಕಳಚಿಟ್ಟು ಒಳಬಂದು ಕೇಳಿದ "ಏನಂತೆ?"'

"ಕಾಫಿ ತಂದುಕೊಡು ಎಂದಿದ್ದಾರೆ."

"ಅಷ್ಟೇ ತಾನೇ? ತೆಗೆದುಕೊಂಡು ಹೋಗಿ ಕೊಡು. ಅದರಲ್ಲೇನು ತೊಂದರೆ?"

ಗೌರೀಮಾ ಕಾಫಿ ತಯಾರಿಸಿದಳು. ಬಸಿಯನ್ನು ತಂದ ಶರತ್. ಕಾಫಿಯನ್ನು ಸುರಿದ ನಂತರ "ಹೆದರಬೇಡ; ನೀನೇ ಕೊಡು ಅಕ್ಕಾ!" ಎಂದ. ಅರಳುಗಣ್ಣನ್ನು ಇನ್ನಷ್ಟು ಅರಳಿಸಿ.

ಶ್ಯಾಮಲಾ ಕಾಫಿ ಟ್ರೇಯನ್ನು ಹೇಗೆ ತೆಗೆದುಕೊಂಡು ಹೋಗಿ ಮುಂದಿಟ್ಟಳೋ ಹಾಗೆಯೇ ಹಿಂತಿರುಗುತಿದ್ದಾಗ ಗಂಗಾರಾಂ ತಡೆದು ಅಂದ "ಸ್ವಲ್ಪ ಕುಳಿತುಕೊ ಶ್ಯಾಂ!"

ಶ್ಯಾಮಲಾ ಮರು ಮಾತಿಲ್ಲದೆ ಹಿಂದಿರುಗಿ ಅಡಿಗೆ ಮನೆ ಸೇರಿಕೊಂಡಳು. ಶಾಂತಲಾ ಸಹ ಅಲ್ಲಿಗೇ ಬಂದು ಸ್ಟೂಲಿನ ಮೇಲೆ ಕುಳಿತುಕೊಂಡಳು. ಶರತ್ ಅಲ್ಲಲ್ಲೇ ಅಡ್ಡಾಡಿದ. ಆಳೆತ್ತರಕ್ಕೆ ಬೆಳೆದು ಪಕ್ವಾದ ಶರೀರ. ಉತ್ಸಾಹ ಉಕ್ಕುವ ಮುಖಕಣ್ಣುಗಳು. ಪುಟಿ ಪುಟಿಯುವ ಜೀವ. ಚಿಗರಿಯಂಥ ಚುರುಕು. ಅಂದಮೇಲೆ....

ಗಂಗಾರಾಂ ಮಡದಿ ಮಕ್ಕಳು ಬಂದಾರೆಂದು ಸ್ವಲ್ಪ ಹೊತ್ತು ಕಾದಿದ್ದ. ಒಳಬರುವುದಕ್ಕೆ ಶರತ್ ಇದ್ದುದರಿಂದ ಮನಸ್ಸಾಗದೆ ಘೋರ್ಪಡೆಯೊಂದಿಗೆ ಹೊರಟ. ಅವರು ಹೊರಹೋಗುತ್ತಲೂ ಶರತ್ ಮುಂಬಾಗಿಲು ಮುಚ್ಚಿ ಒಳ ಬಂದು ಹೇಳಿದ "ಅಪ್ಪ ಮತ್ತು ಹರಿಕಿಷನ್ ಘೋರ್ಪಡೆ ಇಂದು ಸಂಪೂರ್ಣ ವಿಶ್ವಾಸದಿಂದ ಹೊರ ಹೋಗಿದ್ದಾರೆ. ನೀನು ಕಾಫಿ ಕೊಟ್ಟುದುದರಲ್ಲಿ ಪೂರ್ಣ ನಂಬಿಕೆಯಿದೆ!" ಎಂದ, ಅಟ್ಟಹಾಸದಿಂದ ಕೇಕೆ ಹಾಕಿನಗುತ್ತ.

* * *

ತಲೆ ಬಾಗಿಲಲ್ಲಿ ಕಟ ಕಟ ಸದ್ದು.

ತಾಯಿ ಅಂಗಡಿಗೆ ಹೋಗಿದ್ದಾಳೆ. ಶ್ಯಾಮಲೆಗೆ ಹರಿಕಿಷನ್ ಇರಬಹುದೇನೋ ಎಂಬ ಅತೀವ ಭಯ. ಆಗಲೇ ಡವಡವಿಸುತ್ತಿದೆ ಹೃದಯ.

''ಶಾಂತಲಾಗೆ ಮೇಲಿನ ಬೋಲ್ಟ್ ಸಿಗುವುದಿಲ್ಲವಾದ್ದರಿಂದ ತೆಗೆಯುವುದು ಅಸಾಧ್ಯ...

ಕಟ. ಕಟ. ಕಟ. ಕಟ....

''ಅಕ್ಕಾ! ನಾನು ಹೊರ ಹೋಗಿ ನೋಡಿಕೊಂಡು ಬರುವೆ; ಎಂದು ಹಿತ್ತಿಲ ಬಾಗಿಲಿಂದ ಹೊರಹೋದಳು. 'ಷೂ ರಾಡ್' ಒತ್ತುವುದರಿಂದ ಬೇಗೆ ನಡೆಯುವುದು ಕಷ್ಟವೇ. ನೋಡಿದರೆ. ನೋಡಿದರೆ ವ್ಹೀಲ್ ಚೇರ್ ತಂದಿದ್ದಾನೆ ಅಂಗಡಿಕಾರ!

ಅದನ್ನು ನೋಡುತ್ತಲೂ ಆನಂದರಸ ತುಂಬಿ ತುಳುಕಿತು ಹೃನ್ಮನಗಳಲ್ಲಿ. ಹೋದ ಹಾಗೆಯೇ ಹಿಂದಿರುಗಿ ''ಅಕ್ಕಾ ವ್ಹೀಲ್‌ಚೇರ್ ಬಂದಿದೆ!'' ಎಂದು ಒಂದೇ ಉಸಿರಿಗೆ ವಿಷಯವನ್ನು ಹೊರ ಹಾಕಿದಳು ಅರಳುಗಣ್ಣಾದ ಪುಟ್ಟ ಹುಡುಗಿ. ತನ್ನಂತೆಯೆ ಆನಂದಿತಳಾದ ಅಕ್ಕನ ಮುಖವನ್ನು ಹುಬ್ಬೆತ್ತಿ ನೋಡುತ್ತಲೇ ಇದ್ದ ಆನಂದ ವಿಸ್ಫೃತನಯಗಳ ಶೋಭೆ ಎಷ್ಟೊಂದು ದರ್ಶನೀಯವೋ....ಆ ಕೂಡಲೇ ತಂಗಿಯ ಮುಖವನ್ನು ಬೊಗಸೆಯಲ್ಲಿ ಹಿಡಿದು ಹಣೆಗೆ ಹೂ ಮುತ್ತನೊತ್ತಿ ಮುಂಬಾಗಿಲನ್ನು ತೆರೆದಳು.

''ಇದೇಕೆ ಇಷ್ಟು ತಡ ಮಾಡಿದಿರಿ? ಕಳೆದ ವಾರವೇ ಕೊಡಬೇಕಿತ್ತು.''

''ಸ್ವಲ್ಪ ತಡವಾಗಿದೆ...ತುಂಬಾ ಕೆಲಸ.''

ಶ್ಯಾಮಲಾ ವ್ಹೀಲ್ ಚೇರ್ ತೆಗೆದುಕೊಂಡಳು. ಅದಕ್ಕೆ ಪಡಲೂ ಇದೆ. ಕೈಯಿಂದ ತಳ್ಳುವ ಸಾಧನವೂ ಇದೆ. ಶಾಂತಿಯನ್ನು ಕೂಡಿಸಿ 'ಪೆಡಲ್ ಮಾಡು' ಎಂದರೆ ಅಂಗಳದಲ್ಲಿ ಅತ್ತಿತ್ತ ಗಾಡಿ ನಡೆಸಿ ಮುಂಬಾಗಿಲಿಂದ ಹಿಂಬಾಗಿಲವರೆಗೆ ಪುನಃ ಪುನಃ ಮೇಲಿಂದ ಮೇಲೆ ಓಡಾಡಿ ಖುಷಿಪಟ್ಟುಕೊಂಡಳು ಶಾಂತಲಾ. ಆ ಮುಖದ ಮೇಲಿನ ಸಂತಸ-ಎಳೆನಗು ನೋಡಿದರೆ ಇವಳಿಗೂ ಅಷ್ಟೇ ಸಂತಸ. ಅವಳು ವ್ಹೀಲ್ ಚೇರಿನಲ್ಲಿ ಹಿಂದೆ ಮುಂದೆ ಓಡಾಡುವುದನ್ನು ನೋಡುತ್ತ ಅಲ್ಲೇ ನಿಂತ ಶ್ಯಾಮಲೆಗೆ ಅಂಗಡಿಕಾರ ಹಣಕ್ಕಾಗಿ ನಿಂತಿರುವುದು ಮರೆತೇ ಹೋಯಿತೇನೋ....

ಅಂಗಡಿಕಾರ ಬಿಲ್ಲು ನೀಡಿದಾಗಲೇ ನೆನಪು. ಶ್ಯಾಮಲಾ ಒಳಹೋಗಿ ಹಣ ತಂದುಕೊಟ್ಟು ಅವನನ್ನು ಕಳುಹಿಸಿ ವ್ಹೀಲ್ ಚೇರ್ ಒಳಗಡೆ ತೆಗೆದುಕೊಂಡಳು. ತಾನು ಹೇಳಿದಂತೆಯೇ ಭಾರರಹಿತ ಮತ್ತು ಸರ್ವಸಮ್ಮತವಾದ ಅದು ಮನಃಪ್ರಿಯವಾಯಿತು ಅಕ್ಕ ತಂಗಿಯರಿಗೆ.

''ಷೂಗಿಂತ ಇದೇ ಸುಖ ಅಕ್ಕಾ?''

''ಷೂ ಅರ್ಧ ಸಮಯ ಉಪಯೋಗಿಸು ಕಾಲಿಗೆ ಬಲ ಬರಬೇಕಲ್ಲ?''

ಅವಳು ಗಾಡಿಯಲ್ಲಿ ಮನೆಯೆಲ್ಲಾ ಓಡಾಡಿ "ಇದಕ್ಕೊಂದು ಪುಟ್ಟದಿಂಬು ಮಾಡಿಕೊಳ್ಳುವೆ!"

"ಹೌದು. ದಿಂಬು ಇದ್ದರೆ ಮೆತ್ತಗಾಗುತ್ತೆ."

ಗೌರೀಮಾ ಹಿತ್ತಲ ಬಾಗಿಲಿಂದಲೇ ಒಳಗಡೆ ಪಾದಾರ್ಪಣೆ ಮಾಡಿದಳು. ಪುಟ್ಟ ಮಗಳ ಮುಖದಲ್ಲಿನ ಖುಷಿ, ಮನೆ ತುಂಬ ಓಡಾಡುವ ರೀತಿ, ಪುಟ್ಟ ವ್ಹೀಲ್ ಚೇರ್ ಎಲ್ಲವೂ ಮನಸ್ಸಿಗೆ ಅಪ್ಯಾಯಮಾನ. ನೆತ್ತಿಗೊಂದು ಹೂಮುತ್ತನೊತ್ತಿ "ಇನ್ನಾದರೂ ಸಂತೋಷದಿಂದಿರು," ಎಂದಳು ಜನನಿ.

* * *

ಶರತ್ ಚೆಂಡನ್ನು ಅತ್ತಿತ್ತ ಎಸೆದಾಡುತ್ತ ಆನಂದಭೋಗಿಯಾಗಿ ಒಳ ನುಗ್ಗಿದ.

"ಶ್ಯಾಂ! ನಾನೊಂದು ವಿಜಯ ಸಾಧಿಸಿ ಬಂದಿರುವೆ! ಏನಿರಬಹುದು ಊಹಿಸು!"

"ಕ್ರಿಕೆಟ್ ಮ್ಯಾಚ್ ಗೆದ್ದೆ ಅನಿಸುತ್ತೆ."

"ಉಹೂ...ಅಲ್ಲವೇ ಅಲ್ಲ?" ನಿಧಾನವಾಗಿ ತಲೆಯಾಡಿಸಿದ ಅವನು.

"ಮೇಸ್ಟರಿಂದ ಭೇಷ್! ಎನಿಸಿಕೊಂಡೆಯಾ?" ಶಾಂತಲಾ ಕಣ್ಣರಳಿಸಿದಳು.

"ಅಲ್ಲ, ಅಲ್ಲವೇ ಅಲ್ಲ!"

"ಮತ್ತೇನು ನೀನೇ ಹೇಳಪ್ಪ."

"ನನ್ನ ಗೆಳೆಯ ರಾಜೂಗೆ ಏನು ಹೇಳಿದೆ ಗೊತ್ತೆ? ನನ್ನ ಅಕ್ಕ ಶ್ಯಾಮಲೆಗೆ ತೊನ್ನು ಇದೆ! ಅದಕ್ಕೆ ಅಪ್ಪ ಅವಳನ್ನು ಘೋರ್ಪಡೆ ಕಡೆಗೆ ಸುಲಭವಾಗಿ ತಳ್ಳಲು ನೋಡುತಿದ್ದಾರೆ!" ಎಂದು ಹೇಳಿದ್ದೆ. ಅವನು ಅದೇ ಮಾತನ್ನು ಘೋರ್ಪಡೆಯ ಹುಡುಗರಿಗೆ ತನ್ನ ಕ್ಲಾಸಿನಲ್ಲಿ ಹೇಳಿದ್ದಾನೆ. ಅವರಿಬ್ಬರೂ ಆ ಸುದ್ದಿಯನ್ನು ಮನೆಗೆ ಮುಟ್ಟಿಸಿದ್ದಾರೆ. ಈಗ ಘೋರ್ಪಡೆ ಖಾರವಾಗಿದ್ದಾನೆ! ಇನ್ನು ಇಲ್ಲಿ ಹೆಣ್ಣು ಕೇಳುವುದಿಲ್ಲ! ನೀನು ತಣ್ಣಗಿರು!"

"ಅಪ್ಪ ನಿನ್ನನ್ನು ಸುಮ್ಮನೆ ಬಿಟ್ಟಾರೇನೋ?" ತುಟಿಯ ಮೇಲೆ ಬೆರಳಿಟ್ಟು ಭಯ-ಗಾಬರಿಗಳಿಂದ ಕೇಳಿದಳು ಶ್ಯಾಮಲಾ.

ಅವನು ಅಷ್ಟೇ ನಿರಾಳವಾಗಿ ಉತ್ತರಿಸಿದ "ನನ್ನ ಹೆಸರು ಹೇಳಬೇಡ ಎಂದಿರುವೆ."

ಒಂದು ಗಳಿಗೆ ಪ್ರಕೃತಿಯೇ ಸ್ತಬ್ಧವಾದಂತೆ ತೋರಿತು ಎಲ್ಲರಿಗೂ.

# ೨೦

ಇಂದು ಡಾ॥ ಫರೀದ್ ಪತ್ರ ಹಸ್ತಗತವಾಯಿತು.

ಶ್ಯಾಮಲಾ ಕೊಠಡಿಯಲ್ಲಿ ಕುಳಿತು ತಾನೊಬ್ಬಳೇ ಓದಿಕೊಂಡು ಹರಿದು ಚೂರುಚೂರು ಮಾಡಿ ಬುಟ್ಟಿಗೆ ತೂರಿದಳು. ಹರಿದುದು ದ್ವೇಷದಿಂದೇನೂ ಅಲ್ಲ; ಯಾರಾದರೂ ನೋಡಿಯಾರು ಎಂಬ ಭಯದಿಂದ. ಅವನು ಪ್ರಪ್ರಥಮವಾಗಿ ಕೆಲಸಕ್ಕೆ ಯಾವಾಗ ಬರುತ್ತಿ ಎಂದು ಕೇಳಿದ್ದ. ಮೇಲಾಗಿ, ತನ್ನ ಪ್ರೇಮಾಲಾಪವನ್ನೂ ಹಾಡಿದ್ದ, ಆ ಹಾಡಿಗೆ ಕೊನೆಯೇ ಇಲ್ಲದಷ್ಟು ರಾಗಾನುರಾಗ.

ಅವನು ತಲೆಯಲ್ಲಿ' ಬೇಕಾದಷ್ಟು ಬಿಳಿಯ ಕೂದಲು ಮೂಡಿದೆ. ಅದು ಸುಖನೆರೆಯೋ ಅಥವಾ ಪಿ.ಹೆಚ್.ಡಿ ಮಾಡಿದ ಚಿಂತನೆಯ ಫಲವೋ ಅಥವಾ ಹಾಳು ಹವ್ಯಾಸಗಳಿಂದಲೋ ಊಹಿಸುವುದು ಕಷ್ಟವೇ. ಇದುವರೆಗೂ ಮದುವೆ ಯಾಗಿಲ್ಲವೋ ಎಂಬುದೂ ಊಹಾತೀತವಾದ ವಿಚಾರ. ಅವನ ಕುಟುಂಬಿಗರಾರೂ ಇಲ್ಲಿ ಇಲ್ಲದಿರುವುದು ಗೊತ್ತು. ಅದಕ್ಕಿಂತ ಹೆಚ್ಚಿನದೇನೂ ತಿಳಿಯದು. ಎಲ್ಲವನ್ನೂ ಕೂಲಂಕಷವಾಗಿ ತಿಳಿಯದೆ ಹೆಜ್ಜೆಮುಂದಿಡುವುದು ಕಷ್ಟ. ಇಂದು-ನಾಳೆ ಮನೆಯಲ್ಲಿರುವೆ. ನಾಡಿದ್ದು ಕೆಲಸಕ್ಕೆ ಹೋಗಲೇಬೇಕು. ಅನಂತರ ಅವರ ವಿಚಾರ ತಿಳಿದುಕೊಳ್ಳುವುದು ಲೇಸು. ಯಾರಿಂದ ತಿಳಿದುಕೊಳ್ಳಲಿ? ಹೇಗೆ ಕೇಳಲಿ??

ವಿಚಾರವಾಹಿನಿ ಅಲ್ಲಿಗೆ ಬಂದು ನಿಂತುಹೋಯಿತು.

ಆದರೇನು? ಮನಸ್ಸು ಎಷ್ಟೆಷ್ಟು ತಿರುಗಿಸಿದರೂ ಬಂದು ನಿಲ್ಲುತಿದ್ದುದು ಅಲ್ಲೇ.

....ನನ್ನ ಮುಂದೆ ಹಿರಿದಾದ ಸಮಸ್ಯೆ ಇಲ್ಲದಿದ್ದರೆ ಮದುವೆಯೇ ಬೇಡ ವಾಗಿತ್ತು. ಅದಕ್ಕಿಂತ work is worship. ನನ್ನ ಕೊನೆಗಾಲದವರೆಗೆ ಕೈತುಂಬ ಕೆಲಸವಿದ್ದರೆ ಸಾಕು. I don't want anything than that. ಅಂತರಾತ್ಮ ಕೂಗಿ ಹೇಳುತ್ತದೆ. ಹೌದು. ಅದೇ ಸರಿ. ಎನ್ನುತ್ತಾಳೆ ಅವಳು, ಅಶಕ್ತ ಶರೀರದಲ್ಲಿ ನಸುಕಂಪನದ ಅಲೆ ಮೆಲುಮೆಲ್ಲನೆ ಹರಿದಾಡಿತು.

ಶ್ಯಾಮಲಾ ಅಂತರ್ಮುಖಿಯಾಗಿ ತಾನು ಅಡರಿ ಬಂದ ಜೀವಮಾನದ ಪಾವಟಿಗೆಗಳನ್ನು ನೋಡತೊಡಗಿದಳು. ಶಾಲೆ ಕಲಿಯಲು ಅನುಭವಿಸಿದ ಪಾಡು ಒಂದೇ? ಎರಡೇ? ಅಮ್ಮನ ಪುಡಿಗಾಸು ಇಲ್ಲದಿದ್ದರೆ ಎಲ್ಲಿತ್ತು ತನಗೆ ವಿದ್ಯೆ? ಪೇಪರ್ ಬ್ಯಾಗ್ ಮಾಡುವುದರಲ್ಲಿ ತಾನು ಭಾಗಿಯಾದರೂ ಇಬ್ಬರ ಅಗತ್ಯವನ್ನು ಪೂರೈಸುವ

ಸಾಧ್ಯತೆ ಕಡಿಮೆ....ಪಕ್ಕದಲ್ಲಿ ಒಂದು ಸೀರೆ ಅಂಗಡಿ. ಅದರಲ್ಲಿ ಸೇಲ್ಸ್‌ಗರ್ಲ್ ಆಗಿ ಕೆಲಸ ಮಾಡುವ ಆಸೆ ಅಮ್ಮನಿಗೆ. ಅದಕ್ಕೂ ನಕಾರ ಅಪ್ಪನದು. ಹೋಗಲಿ, ಮಧ್ಯಾಹ್ನ ಒಂದರಿಂದ ನಾಲ್ಕು ಗಂಟೆಯವರೆಗೆ ಸೀರೆಗಳಿಗೆ ಅಂಗಡಿಯ ಲೇಬಲ್ ಹಚ್ಚುವುದು, ವಿಂಗಡಿಸಿ ವರ್ಗೀಕರಿಸುವುದು ಇಂಥಿಂಥ ಕೆಲಸಗಳನ್ನಾದರೂ ಮಾಡುವೆ ಎಂದು ಅಮ್ಮ ಕೇಳಿಕೊಂಡದ್ದುಂಟು. ಅದಕ್ಕೂ ಅಪ್ಪನ ಅಧಿಕಾರ ಕೊಡಲಿ ಹಾಕಿತು. ತಾನೂ ಕೊಡುಗೈ ನೀಡಲಾರ; ಮಡದಿ ಮುಂದಾಗಬಾರದು.

ಇದು ಶ್ರೇಷ್ಠ ವರ್ಗದವರ ಜೀವನದಲ್ಲಿ ನಡೆಯುವ ತೆರೆಮರೆಯ ಪರಿಪಾಡು.

ಇದು ಈ ಜೀವನದ ಒಂದು ಸ್ವರೂಪವಾದರೆ, ಇನ್ನೊಂದು ಸ್ವರೂಪ ಯಾವತ್ತೂ ರೋಷ-ದ್ವೇಷ, ಹೊಡೆತ-ಬಡಿತ. ಹಿಂದೆಲ್ಲಾ ಶರತ್-ಗೆ ಮಾತ್ರ ಪುಸ್ತಕ-ಪೆನ್ಸಿಲ್. ಅವನು ಕುಲಪುತ್ರ ಎಂಬ ಸಣ್ಣ ಸಮಾಧಾನ ಅಥವಾ ಕೊನೆಗಾಲಕ್ಕೆ ಆಗುವವನು ಎಂಬ ನಂಬಿಕೆ. ಮೂವರು ಹೆಣ್ಣು ಮಕ್ಕಳಲ್ಲೂ ತಾತ್ಸಾರ. ಮಡದಿಯಲ್ಲೂ ತಾತ್ಸಾರ.

ಶಕೀಲಾ ಮತ್ತು ತಾನೂ ತಾಯಿಗೆ "ಮಧ್ಯಾಹ್ನದ ಕೆಲಸ ಒಪ್ಪಿಕೊಳ್ಳಿ. ಮನೆಯಲ್ಲಿ ಹೇಗೂ ಅಪ್ಪ ಇರುವುದಿಲ್ಲ." ಎಂದು ಹೇಳಿದ್ದುಂಟು.

ಅದಕ್ಕೆ ತಾಯಿ ಉತ್ತರಿಸಿದ್ದು ಹೀಗೆ: ಅಯ್ಯೋ, ಅದೆಲ್ಲಿ ಆಗುತ್ತೆ ಮಕ್ಕಳೇ ನಿಮ್ಮಪ್ಪ ಮನೆಯಲ್ಲಿದ್ದಾಗ ಹೇಗೆ ಹೋಗಿ ಮಾಡಲಿ? ನನಗೆ ಪೇಪರ್ ಬ್ಯಾಗ್ ಮಾಡುವುದೇ ಲೇಸು. ಅವರು ಆಚೆ ಹೋದಮೇಲೆ ಮಾಡುವೆ. ಮನೆಯಲ್ಲಿದ್ದಾಗ ಮುಚ್ಚಿಟ್ಟರಾಯಿತು. ಗಳಿಸುವ ಮೊತ್ತ ಚಿಕ್ಕದು. ಆದರೂ ಮನಸ್ಸಿಗೆ ಶಾಂತಿ ಇರುತ್ತೆ. ಅಂಗಡಿ ಕೆಲಸ ವಹಿಸಿಕೊಂಡು ಒಂದಿನ ಹೋಗಿ ಒಂದಿನ ಬಿಟ್ಟರಾಗುತ್ತದೆಯೇ?"

"ಅದು ನಿಜವೇ."

ಅಲ್ಲಿಗೆ ಪ್ರಸ್ತಾಪ ನಿಂತು ಹೋಗಿ ನೀರಸ ಜೀವನ ಮುಂದುವರಿಯಿತು.

* * *

ಶಕೀಲೆಯ ಪತ್ರವಾಹಿ.

ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ

ವೇದಕಾಲೀನ ಮನುಮಹಾಶಯ ಪ್ರಣೀತ ಸೂಕ್ತಿಸಾರ ನಮ್ಮಲ್ಲಿ ಅಂದಿಂದಿಗೂ ಚಾಲ್ತಿಯಲ್ಲಿರುವುದು ಎಲ್ಲರಿಗೂ ಗೊತ್ತು. ಬಾಲ್ಯದಲ್ಲಿ ತಂದೆಯ ಸಂರಕ್ಷಣೆ ನೀನೂ ನಾನೂ ಎಲ್ಲರೂ ಕಂಡವರು. ಹೆತ್ತ ತಪ್ಪಿಗೆ ಕಾಲಯಾಪನೆಯ ಸೂತ್ರ. ಲೋಕಾಚಾರಕ್ಕಾಗಿ ಶಾಲೆಗೆ ಕಳುಹಿಸಿ ನಾಲ್ಕಕ್ಷರ ಕಲಿಸುವ ಕ್ರಮ, ಯೌವ್ವನ ಪ್ರಾಪ್ತವಾದಾಗ

ಯಾವನಿಗಾದರೂ ಕಟ್ಟಿ ಕಳುಹಿಸುವ ಪದ್ಧತಿ ನಮ್ಮಲ್ಲಿ ಸಾರೋದ್ಧಾರವಾಗಿ ನಡೆದು ಬಂದ ರೂಢಿ. ಅದನ್ನು ಅಪ್ಪ ತಪ್ಪದೆ ನಿರ್ವಹಿಸಿದ್ದು ಸತ್ಯ. ಇದು ಪಿತಾ ರಕ್ಷತಿ ಕೌಮಾರೇ ಆಯ್ತು. ಇನ್ನು ಭರ್ತ್ತ ರಕ್ಷತಿ ಯೌವನೇ. ಇದೂ ಸಹ ಸಾಮಾನ್ಯ ವಿಚಾರವಲ್ಲ. ತನ್ನ ದೈಹಿಕ ತೃಪ್ತಿಗೆ, ಬದುಕಿನ ಎಲ್ಲಾ ಅಗತ್ಯಗಳಿಗೆ ಸ್ತ್ರೀ ಬೇಕೇ ಬೇಕು. ಅದಕ್ಕಾಗಿ ಭರ್ತನ ರಕ್ಷಣೆ ಸಾರೋದ್ಧಾರವಾಗಿ ನಡೆದು ಬಂದಿದೆ ಈ ಸಮಾಜದಲ್ಲಿ. ಸ್ತ್ರೀ ಪೂಜನೀಯಳು ಎನ್ನುತ್ತದೆ ನಮ್ಮ ಸುಸಂಸ್ಕೃತಿ. ಅದರ ಬಳಕೆ ಇಂದು ಪ್ರಚಾರಕ್ಕಾಗಿ ಮಾತ್ರ. ತೆರೆಯಮರೆಯಲ್ಲಿ ಪೂಜನೀಯ ವಸ್ತು ಕಾಲ್ಕಸವೆ...ವ್ಯಕ್ತಿಯಿಂದ ಸಮಾಜ, ವ್ಯಷ್ಟಿಯಿಂದ ಸಮಷ್ಟಿ. ವ್ಯಷ್ಟಿಯ ಪ್ರಾಬಲ್ಯ ಸಮಷ್ಟಿಗೆ ಪುಷ್ಟಿ. ವ್ಯಕ್ತಿ ಚೇತನ ವಸ್ತು. ಸಮಾಜೀಕರಣಕ್ಕೆ ಚೈತನ್ಯವೇ ಮಹತ್ತರ ಅಥವಾ ಶೋಭೆ.

ಸ್ವಾರ್ಥಕ್ಕಾಗಿ - ಪ್ರಲೋಭನೆಗಾಗಿ ವ್ಯಕ್ತಿಯನ್ನು ಗಾಣದ ಕಬ್ಬಿನಂತೆ ಹಿಂಡಿದ ಮೇಲೆ ಸಮಾಜವಾದಕ್ಕೆ ಎಲ್ಲಿಯ ಬೆಲೆ? ಮಾನವ ಮತ್ತು ಮಾನವೀಯತೆ, ಸ್ವಾತಂತ್ರ್ಯ ಮತ್ತು ಚೈತನ್ಯ, ವಿದ್ಯೆ ಮತ್ತು ಅನುಭವ ಇವೆಲ್ಲವೂ ಪರಿಸರದ ಪ್ರಕಾಂಡದ ಜೊತೆ ಹೆಣಗಿ, ಜ್ಞಾನದ ಮೂಸೆಯಲ್ಲಿ ಕರಗಿ ಪರಿಪಕ್ವವಾದಲ್ಲದೆ ನಾಗರಿಕತೆಯ ಕಳಸ ಏರಿಸುವುದೆಂತು?

ಮಾರ್ಕ್ಸನ ವಿಚಾರ ತೆಗೆದುಕೊ. ಆತನ ವಿಚಾರ ಸರಣಿಯ ಪ್ರಕಾರ-ವ್ಯಕ್ತಿಯ ಬೆಳವಣಿಗೆ ಹಾಗೂ ಆತನ ಚಿಂತನೆಯ ಸಮಗ್ರ ಶಕ್ತಿಯ ಬೆಳವಣಿಗೆ ಆಗಬೇಕಾದರೆ, ಅದಕ್ಕನುಗುಣವಾಗಿ ಮೊದಲು ಮಾನವ ಸಮಾಜದ ಬದಲಾವಣೆ ಆಗಬೇಕು. ವ್ಯಕ್ತಿ ಅಥವಾ ವ್ಯಷ್ಟಿ ಎನ್ನುವುದು ಸ್ವತಂತ್ರವಾದ ಅಸ್ತಿತ್ವವೇನಲ್ಲ. ಅದ್ಭುತ ಸಮಾಜದ ಕ್ರಿಯಾಖಂಡ ಮಾತ್ರ. ಸಮಾಜದ ಅಂಗವಾಗಿ ವ್ಯಕ್ತಿ ರೂಪುಗೊಳ್ಳುತ್ತಾನೆ, ಅಷ್ಟೆ.

ಆದರೆ...ಮೂಲತಃ ವಿಚಾರಧಾರೆಯೇ ಬೇರೆ. ಸಾಮೂಹಿಕ ವ್ಯಕ್ತಿತ್ವಕ್ಕೇ ಹೆಚ್ಚಿನ ಮಹತ್ವ, ಇಲ್ಲಿ ವ್ಯಕ್ತಿ ಎಂಬುದು ಮುಖ್ಯವಲ್ಲ. ಇಡೀ ಸಾಮೂಹಿಕ ಎಂಬುದು ಒಂದು ವ್ಯಕ್ತಿ. ವೈಯ್ಯಕ್ತಿಕ ಸ್ವಾತಂತ್ರ್ಯಕ್ಕೆ ಬೆಲೆಯಿಲ್ಲ, ನಾವು ನಮ್ಮ ಸ್ಥಿತಿಗತಿಯನ್ನು ಮಾರ್ಕ್ಸ್ ವಾದ ಎನ್ನೋಣವೇ?

ನನಗೆ ಕೋಪ-ನಗು ಒಟ್ಟೊಟ್ಟಿಗೇ ಬರುತ್ತಿವೆ. ಎಷ್ಟೋ ಸಲ ಕೋಪ-ನಗು-ಅಳು ಈ ಮೂರೂ ಒಮ್ಮೆಗೇ ಅಪ್ಪಳಿಸಿ ತಕ್ಕಿಳಿಯುವುದುಂಟು! ಆಗಣ ಹೃದಯ ರಂಗದ ತತ್ತಳ ತುಳಿತವನ್ನು ಏನೆಂದು ಹೇಳೋಣ? ಮನೆಯಲ್ಲಿದ್ದಾಗ ಪರವಾಯಿಲ್ಲ. ಕೆಲವೊಮ್ಮೆ ಆಫೀಸಿನಲ್ಲೂ ಬರುತ್ತೆ. ಆಗ ನಿಗ್ರಹಕ್ಕಾಗಿ ನಾನು ಪಡುವ ಪಾಡು ಪರಮಾತ್ಮನಿಗೇ ಪ್ರೀತಿ. ಮಾನವುಳಿಸಿಕೊಳ್ಳುವ ದಾರಿ ತಲೆನೋವಿನ ಸೋಗಿನಿಂದ.

ಕಾಲ ಪ್ರವಾಹ ಹೇಗೂ ಹರಿಯುತ್ತಿರುತ್ತೆ. ನಮ್ಮದೂ ಅದರೊಂದಿಗೆ ನಡೆಯುತ್ತಿರುತ್ತೆ ನಡೆಯಲಿ....ನಡೆಯಲಿ.

ನಿನ್ನ ಜೀವನ ಸೂತ್ರವನ್ನು ಹೇಗೆ, ಯಾವ ರೀತಿಯಲ್ಲಿ ರೂಪಿಸಿಕೊಳ್ಳಲು ಯೋಚಿಸಿರುತ್ತಿ? ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ. ನೀನು ಮೋಸ ಹೋಗಬೇಡ; ನಾನು ಹತ್ತಿರಕ್ಕೇ ಮೋಸ ಹೋಗಿರುವುದನ್ನು ನೀನು ಬಲ್ಲೆ. ಎಚ್ಚರಿಕೆಯಿಂದಿರು ಶ್ಯಾಂ!

ನಿಮಗಾಗಿ ಪ್ರಾರ್ಥಿಸುವೆ. ನಮಗಾಗಿ ನೀನು ಪ್ರಾರ್ಥಿಸು.

* * *

ಶ್ಯಾಮಲಾ, ಶಾಂತಲಾ ಇಬ್ಬರೂ ತಾಯಿಯೊಂದಿಗೆ ಪೇಪರ್ ಬ್ಯಾಗ್ ಮಾಡುವುದರಲ್ಲಿ ತಲ್ಲೀನರಾಗಿದ್ದಾರೆ ಒಳಕೋಣೆಯಲ್ಲಿ. ಆಗಲೇ ನೂರು ಚೀಲಗಳ ಏಳೆಂಟು ಕಟ್ಟು ತಯಾರಾಗಿವೆ. ಶಾಂತಲಾ ಕಾಲು ನೀಡಿ ಕುಳಿತು ಪಾಲ್ಗೊಂಡಿದ್ದಾಳೆ ಕೆಲಸದಲ್ಲಿ.

ಮಧ್ಯಾಹ್ನ ಇನ್ನೂ ನಾಲ್ಕರ ಸಮಯ.

ಗಂಗಾರಾಂ ಹಿತ್ತಿಲಬಾಗಿಲಿಂದ ಒಳಬಂದು ಮನೆಯನ್ನೆಲ್ಲಾ ಒಂದು ಸುತ್ತು ಹಾಕಿದ. ಎಲ್ಲಿಯೂ ಶರತ್ ಸುಳಿವಿಲ್ಲ. ಅವನು ಈ ಹೊತ್ತಿನಲ್ಲಿ ಇಲ್ಲದಿರುವುದು ಗೊತ್ತು. ಆದರೂ ಒಂದು ಸಮೀಕ್ಷೆ, ಸ್ವಹಿತಕ್ಕೆ ಅನಂತರ ಒಳಕೋಣೆಗೆ ಬಂದ. ಮೊಟ್ಟ ಮೊದಲಿಗೇ ಚೀಲಗಳ ಕಟ್ಟುಗಳು ದೃಷ್ಟಿಗೆ ಬಿದ್ದುವು. ಹೊಸ್ತಿಲಮೇಲೆ ನಿಂತು "ಗೌರೀ....!" ಎಂದ. ಕಣ್ಣುಗಳಲ್ಲಿ ಕಿಡಿಗಳುದುರುವಷ್ಟು ಕೋಪ.

" ಏನು....?" ಎನ್ನುತ್ತ ಎದ್ದುನಿಂತಳು ಗೌರೀಮಾ.

"ನೀವೆಲ್ಲಾ ಕೂಡಿ ಏನೇನು ಮಸಲತ್ತು ಮಾಡಿದ್ದೀರಿ! ಶ್ಯಾಂ, ನೀನೇನು ಕತೆ ಹುಟ್ಟಿಸಿದ್ದಿ....? ಘೋರ್ಪಡೆಗೆ ಯಾರು ಹೇಳಿದ್ದು ನಿನಗೆ ತೊನ್ನು -ಕ್ಷಯರೋಗ ಇದೆಯೆಂದು?"

" ನನಗೊತ್ತಿಲ್ಲಪ್ಪಾ...."'

"ಬೋಗಳೇ ಚಾಂಡಾಲಿ!"

"ಅಯ್ಯೋ ದೇವರೇ! ಇಂತ ಕೆಟ್ಟ ಸುದ್ದಿ ನಾವು ಹೇಳುವುದೆಂತು? ಇದು ಯಾರದೋ...."

"ಇದೆಲ್ಲಾ ನೀವಲ್ಲದೆ ಇನ್ನಾರು ಹೇಳಲು ಸಾಧ್ಯ? ಎಂಥ ಅಪವಾದ....! ಅವಮಾನ.....!"

ಗಂಗಾರಾಂ ಇಬ್ಬರಿಗೂ ಕೆನ್ನೆಯಮೇಲೆ ಬಾರಿಸಿ ಹೊರದಬ್ಬಿದ! ಹಿತ್ತಿಲಿನ ಬಾಗಿಲನ್ನು ಬಿಗಿಹಿಡಿದ ಮಡದಿಯ ಬೆನ್ನಿಗೆ ಗುದ್ದಿ ಆಚೆನೂಕಿದ! ಒಳಗೆ ಶಾಂತಲಾ ಚೀರಾಡಿ ಅಳುತ್ತಲೇ ಇದ್ದಾಳೆ. ಅವರಿಬ್ಬರೂ ಹಿತ್ತಲ ಮೆಟ್ಟಿಲಮೇಲೆ ಮುಖಮಡಿಯಾಗಿ ಕುಳಿತು ಬಿಟ್ಟರು. ದೈಹಿಕ ನೋವಿಗಿಂತ ಮಾನಸಿಕ ನೋವು ಆಗಾಧ. ಸ್ವಲ್ಪ ಹತೋಟಿ ತಪ್ಪಿದರೂ ಗಂಗೆ-ಯಮುನೆಯರು ಪ್ರವಹಿಸುತ್ತಾರೆ ಕಣ್ಣುಗಳಲ್ಲಿ. ಯಾರಾದರೂ ನೋಡಿಯಾರೆಂಬ ಆತ್ಮ ಸಂಕಟ-ಪ್ರಾಣಹಿಂಸೆ.

ಗಂಗಾರಾಂ ಹಠಾತ್ತನೆ ಆಗಮಿಸಿದಂತೆಯೇ ಹಠಾತ್ತನೆ ನಿರ್ಗಮಿಸಿದ. ಆ ಪ್ರಸಸ್ತ ಹೆಜ್ಜೆಗಳು ಶಾಂತಿಯ ತಲೆಯಮೇಲೆ ಸುತ್ತಿಗೆಯಿಂದ ಬಡಿಯುವಂತೆ ದಡದಡನೆ ನಡೆದುವು ನೇರವಾಗಿ ಬೀದಿ ಹಿಡಿದು.

ಹಿಂದಿಲಿಂದ ಮಡದಿ ಮಕ್ಕಳ ನಯನ ಚತುಷ್ಟಯಗಳು ಕಣ್ಮರೆಯಾಗುವವರೆಗೂ ನೋಡಿದುವು. ಧೂರ್ತ! ಎಂಬ ಉದ್ಗಾರ ಒಡಲಾಳದಿಂದ ಹರಿದು ಬಂತು.

ಒಳ ಬಂದರೆ ಶಾಂತಲಾ ಒಂದೇ ಸಮನೆ ಅಳುತ್ತಿದ್ದಾಳೆ. ಅವಳನ್ನು ಮುದ್ದಿಸಿ ಸಂತೈಸಿದರು ಇಬ್ಬರೂ ಕೂಡಿ. ಅನಂತರ ತಮ್ಮನ್ನು ತಾವೇ ನಿಗ್ರಹಿಸಿಕೊಳ್ಳುವ ಮಹಾಕಾರ್ಯ.

"ನೋಡು ಶಾಂತೀ! ನೀನು ಹೀಗೆಲ್ಲಾ ಅಳುತ್ತಿದ್ದರೆ ಏನು ಹೇಳಲಿ? ಪೆಟ್ಟು ತಿಂದ ನಾವಿಬ್ಬರೂ ಈಗ ಸುಮ್ಮನಿಲ್ಲವೇ? ನೀನೇಕೆ ಆಳಬೇಕು? ಸಮಯ ಪ್ರಜ್ಞೆ ಬೆಳೆಸಿಕೊಂಡರೆ ಅಳುವುದಕ್ಕಾಗಲೀ ಚಿಂತೆಗಾಗಲೀ ಸಮಯವೇ ಇರುವುದಿಲ್ಲ. ನೀನಾಗಲೇ ಎಳೆತನವನ್ನು ದಾಟಿ ಬುದ್ಧಿಸ್ತರವನ್ನು ಬೆಳೆಸಿಕೊಂಡವಳು. ನಿನಗೆ ಹೊಸದಾಗಿ ಹೇಳುವುದೇನೂ ಇಲ್ಲ. ನಿನ್ನ ವಯಸ್ಸಿನ ಮಕ್ಕಳು ನಿನ್ನಂತೆ ಜಾಣೆಯರಾಗಿರುವುದು ಅಪರೂಪವೇ ಎನ್ನೋಣ. ಕೇಳು, ನಮ್ಮ ಸಮಾಜ ಸ್ತ್ರೀಯರನ್ನು ಸೊತ್ತಾಗಿ-ತೊತ್ತಾಗಿ ಮಾಡಲೆಂದೇ ಶಾಸ್ತ್ರಗಳ ಸಂಕೋಲೆ ಮತ್ತು ಮಂಗಳದ್ರವ್ಯಗಳ ಸಂಕೋಲೆಗಳನ್ನು ಸಿದ್ಧಗೊಳಿಸಿದೆ. ಅದನ್ನು ಅರಿತುಕೊಳ್ಳಲಾರದ ನಾವು ಪವಿತ್ರತೆಯ ನೇಮದಲಿ, ಪಾತಿವ್ರತ್ಯದ ಪ್ರೇಮದಲ್ಲಿ, ಶೃಂಗಾರದ ಮೋಹದಲ್ಲಿ, ಅಬಲತೆಯ ಪಾತ್ರದಲ್ಲಿ ನಾವು 'ನಮ್ಮತನ'ವನ್ನು ಮರೆತಿರುವುದು ಸತ್ಯ. ಕೇಳು ! ವಿದೇಶೀಯರಿಗೆ ಒಡವೆ-ವಸ್ತುಗಳ ಮೋಹ, ಜರತಾರಿ ಬಟ್ಟೆಗಳ ಮೋಹ, ಅತೀ ಅಲಂಕಾರದ ಮೋಹ, ಮಂಗಳ ದ್ರವ್ಯಗಳ ಮೋಹ ಇಲ್ಲವೇ ಇಲ್ಲ. ಅವರು ಕಲಿತ ವಿದ್ಯೆ ಅವರಿಗೆ ಸ್ವತಂತ್ರಬಾಳನ್ನು ರೂಪಿಸುತ್ತದೆ. ಅವರು ಆರ್ಥಿಕ ಸ್ವಾತಂತ್ರ್ಯ, ವೈಯುಕ್ತಿಕ ಸ್ವಾತಂತ್ರ್ಯಗಳನ್ನು ಹೊಂದಿ ತಮ್ಮ ವ್ಯಕ್ತಿತ್ವದ ಬೆಲೆಯನ್ನು

ತಿಳಿದುಕೊಂಡಿದ್ದಾರೆ. ನಮ್ಮವರೋ ಕಿವಿಮೂಗು ಚುಚ್ಚಿ, ಚಿನ್ನ ಬೆಳ್ಳಿ ಸಿಕ್ಕಿಸಿಕೊಂಡು, ಜಡದೇಹಕ್ಕೆ ಅಲಂಕರಿಸಿ ಪಶುಜೀವನ ನಡೆಸುತ್ತಿದ್ದಾರೆ,ನೀನು ಇದನ್ನೆಲ್ಲಾ ತಿಳಿದುಕೊಂಡಿರಬೇಕು. ನಾವು ಮನುಷ್ಯರಾಗಿ ಹುಟ್ಟಿ ಪಶುತ್ವವನ್ನು ಒಪ್ಪಿಕೊಳ್ಳುವುದು ನಾಚಿಕೆ ಗೇಡು! ನೀನು ಎಂದೂ ಹೇಡಿಯಾಗಿರಬಾರದು.

''ನೀನು ನನ್ನ ಸ್ವೀಟ್ ಟಾಪಿ! ನೀನು ಎಂದೆಂದೂ ಸ್ವೀಟಾಗಿಯೇ ಇರಬೇಕು. ನೀನು ಒಂದು ಸಲ ನಗು. ನೀನು ನಕ್ಕರೆ ನನ್ನ ಅಂತರಂಗ ಅರಳುತ್ತದೆ. ನೀನು ನಕ್ಕು ನನ್ನನ್ನು ಅರಳಿಸು. ಇಬ್ಬರೂ ನಕ್ಕು ನಲಿಯುತ್ತಲೇ ಸಾಯೋಣ.''

''ಆ ಮಾತುಗಳ ಸ್ಫೂರ್ತಿ ಅಂತರಂಗದಲ್ಲಿ ಕೈಯಾಡಿಸಿತು. ಶಾಂತಲಾ ಅಕ್ಕನ ಮುಖ, ಕಣ್ಣುಗಳಲ್ಲಿ ಮಿನುಗುತ್ತಿದ್ದ ಸಾತ್ವೀಕತೆಯ ಕಳೆಯನ್ನು ನೋಡಿಯೇ ನೋಡಿದಳು. ಅನಂತರ ಮನದಾಳದಿಂದ ಪುಟ್ಟ ಪ್ರಶ್ನೆಯೊಂದನ್ನು ಹೊರಹಾಕಿದಳು ''ಶ್ಯಾಂ ! ನೀನೂ ಎಷ್ಟೋ ಬಾರಿ ಅತ್ತಿದ್ದಿ ! ನಾನು ಕಾಹಿಲೆ ಬಿದ್ದಾಗ, ಅಪ್ಪಗದರಿಗೊಂಡಾಗ ನೀನು ಅಳಲಿಲ್ಲವೇ? ಇಂದೂ ಕೂಡ ಅತ್ತೆಯಲ್ಲಾ?''

''ನಿಜ....ಎಷ್ಟೋ ಬಾರಿ ಅತ್ತಿರುವೆ. ಮುಂದೆಯೂ ಅಳುವ ಪ್ರಸಂಗ ಬರಬಹುದು. ನಾನು ಅಳುವುದು ಒಡಲ ಸಂಕಟವನ್ನು ಹೊರಹಾಕುವುದಕ್ಕೆ. ಅನಂತರ ನಾನೇ ನಾನು! ಅಪ್ಪನ ಕಾಟವೊಂದಿಲ್ಲವಾದರೆ ಖಂಡಿತ ನನಗೆ ಮದುವೆಯೇ ಬೇಡ. ಎಷ್ಟು ಸಾಧ್ಯವೋ ಅಷ್ಟು ಓದಿ ಲೆಕ್ಚರರಾಗುವೆ! ನನ್ನ ಸುತ್ತಮುತ್ತಿನ ಒಳ್ಳೊಳ್ಳೆಯ ಹುಡುಗಿಯರನ್ನು ಕಲೆಹಾಕಿ ಒಗ್ಗಟ್ಟಿನಿಂದ ಸ್ತ್ರೀ ಸಮಾಜದ ಸೇವೆಗೆ ಪಣತೊಡುವೆ. ನಮ್ಮಿಂದ ಅಳಿಲ ಮಳಲ ಸೇವೆಸಲ್ಲಿದರೂ ಸಾಕು. ಅಂತೂ, ಈ ಹೇಸು ಜೀವನಕ್ಕೆ ಇತಿಶ್ರೀ ಹಾಡುವುದೊಂದೇ ನನ್ನ ಮುಂದಿನ ಗುರಿ. ಕೆಲಸ ಮಾಡುತ್ತಲೆ ಓದುವೆ. ನಿನ್ನನ್ನೂ ಓದಿಸುವೆ. ನಾನು ನೀನೂ ಎಂದೆಂದಿಗೂ ಒಟ್ಟಿಗೇ ಇರೋಣ ಆಯಿತೆ? ನೀನಿನ್ನು ಚಿಂತೆ ಮಾಡಬೇಡ ಸ್ವೀಟೀ!''

ಶ್ಯಾಮಲಾ ಅವಳ ಮುಖವನ್ನು ಎರಡೂ ಕೈಗಳಿಂದ ಅಪ್ಪಿ ಹಣೆಗೆ ಹೂಮುತ್ತನಿಟ್ಟಳು.

* * *

ಶರತ್ ಕ್ರಿಕೆಟ್ ಟೆಸ್ಟ್ ಮ್ಯಾಚಿಗಾಗಿ ಮದರಾಸಿಗೆ ಹೋಗಿ ಒಂದು ವಾರವೇ ಕಳೆದಿತ್ತು. ಅವನು ಬರುವ ದಿನ ನಿಗದಿಯಾಗಿರಲಿಲ್ಲ. ಹುಡುಗ ಪತ್ರವನ್ನೂ ಬರೆಯಲಿಲ್ಲ, ಇಂದು ಬಂದಾನು, ನಾಳೆ ಬಂದಾನು ಎಂದು ಕಾಯುವುದೇ ಹೊರತು ಗತ್ಯಂತರವಿಲ್ಲ.

ಗಂಗಾರಾಮನ ಕೋಪಾನಲಕ್ಕೆ ತುಪ್ಪ ಸುರಿದಂತೆ ಭುಗಿಲೇಳಲು ಕಾರಣ ಶರತ್ ಇಲ್ಲದುದು. ರಾತ್ರಿ ಮನೆಗೆ ಬಂದವನೇ ಸಿಟ್ಟಿನಿಂದ ಕೇಳಿದ ಗಂಗಾರಾಂ.

'' ಹೇಗೆ ಈ ಕೆಟ್ಟ ಸುದ್ದಿ ಹರಡಿತು?''

''ಜನರಿಗೇನು ಸುಮ್ಮಸುಮ್ಮನೆ ಕತೆ ಕಟ್ಟುತ್ತಾರೆ!''

''ಸುಮ್ಮನೆ ಹುಟ್ಟಲಿಕ್ಕೆ ಕಾರಣವಿಲ್ಲ.''

''.......''

''ಈಗ ಘೋರ್ಪಡೆ ಸುಮ್ಮನೆ ಇದ್ದಾನೆಯೇ? ಮಾತುಕೊಟ್ಟಾಗಿದೆ. ಸಧ್ಯ, ಇದನ್ನು ಸುಳ್ಳು ಎಂದು ಸಾಬೀತು ಮಾಡಬೇಕಾಗಿದೆ.''

ಒಳಗಿಂದಲೇ ಉತ್ತರಿಸಿದಳು ಗೌರೀಮಾ ''ಅವರು ಏನಾದರೂ ಅಂದುಕೋಳ್ಳಲಿ. ನಮಗೇನು? ಅವರ ಗೊಡವೆ ಬೇಡವೆಬೇಡ.''

''ನಿನ್ನ ಸಲಹೆ ಬೇಕಿಲ್ಲ! ಇಷ್ಟರಲ್ಲೇ ಘೋರ್ಪಡೆ ಬರಲಿದ್ದಾರೆ. ಇದೆಲ್ಲಾ ಸುಳ್ಳು ಸಮಾಚಾರ ಎಂದು ಅವರಿಗೆ ತಿಳಿಯ ಹೇಳು.''

''ನೀವೇ ಹೇಳಿರಲ್ಲ; ನನ್ನಿಂದಾಗದು.''

ಗಂಗಾರಾಂ ಗುಡುಗಿದ ''ಇದೆಲ್ಲಾ ದುಷ್ಟ ಶರತ್ ಮಾಡಿರುವ ಭ್ರಷ್ಟಾಚಾರ!''

''......''

ಶ್ಯಾಮಲಾ ಒಳಕೋಣೆಯಲ್ಲೇ ಮಾತಕತೆಯನ್ನು ಕೇಳಿಸಿಕೊಂಡು ಓದುತ್ತಿದ್ದ ಪುಸ್ತಕ ಮುಚ್ಚಿ ''ಶರತ್ ಯಾವಾಗ ಬರುತ್ತಾನೋ....ಅವನಿಲ್ಲದಿದ್ದರೆ ಎಲ್ಲಾ ಗಂಡಾಗುಂಡಿಯೇ. ಈ ಜಗತ್ತಿನಲ್ಲಿ ಕೆಲವರಾದರೂ ಒಳ್ಳೆಯವರಿರುವುದು ಪುಣ್ಯವೇ.'' ಎಂದುಕೊಂಡಾದಲೇ ಶರತ್ ಲರಕ್ ಲರಕ್ ಪಾದ ಸಪ್ಪಳ ಮಾಡುತ್ತ ಒಳಬಂದ.

## ೨೧

ಡಾ॥ ಫರೀದ್ ಕಾಫಿ ತರಿಸಿದ್ದ.

ಜವಾನ ಲೋಟಗಳನ್ನು ತೊಳೆಯುತಿದ್ದಂತೆ ಫರೀದ್ ಅಂದ ''ಚೆನ್ನಾಗಿ ತೊಳೆ.'' ಅವನು ಮತ್ತೊಮ್ಮೆ ತೊಳೆದು ಶುಚಿಗೊಳಿಸಿ ಎರಡು ಬಸಿಗಳಿಗೆ ಬೊಗ್ಗಿಸಿದ. ಒಂದು ಲೋಟೆಯನ್ನು ಶ್ಯಾಮಲಾಗೆ ತಾನೇ ನೀಡಿ ಡಾ॥ ಫರೀದ್ ನುಡಿದ

"ಗಂಗಾರಾಂ ಮಾಡಬಾರದ ಕೆಲಸ ಮಾಡಿದ್ದಾನೆ. ಹರಿಕಿಷನ್ ಘೋರ್ಪಡೆ ಮಲರೋಗಿ ಮಾತ್ರವಲ್ಲ, Half crack ಕೂಡ. ಅಂತಹವನಿಗೆ ಹೆಣ್ಣು ಕೊಡುವ ಉತ್ಸಾಹ ಏತರದ್ದು? ಅವನ ಸಾಲಕ್ಕಾಗಿಯೇ ಹೆಣ್ಣುಕೊಡುತ್ತಿದ್ದರೆ ಆ ಹಣವನ್ನು ನಾನೇ ಎಸೆದು ಬಿಡುವೆ. ತೀರಿಸಿಕೊಳ್ಳಲಿ. ನೀನು ಅದಕ್ಕಾಗಿ ತಲೆ ಕೆಡಿಸಿಕೊಳ್ಳಬೇಡ."

"......"

"ನೀನು ಏನು ಬೇಕಾದರೂ ಅನ್ನು. ನಿನ್ನ ತಂದೆಯ ವ್ಯವಹಾರ ಎಂತಹ ಮೂರ್ಖನೂ ಒಪ್ಪಲಾರ. ಅವನಿಗೆ ಯಾರೂ ಹೆಣ್ಣು ಕೊಡಲು ಮುಂದೆ ಬರಲಿಲ್ಲ. ಗಂಗಾರಾಂ ಇದರಲ್ಲಿ ತೊಡಗಿದುದನ್ನು ನೀನು ಪ್ರತಿಭಟಿಸಬೇಕು. ಸುಮ್ಮನಿದ್ದರೆ ಕೇಡು ತಪ್ಪಿದ್ದಲ್ಲ."

ಶ್ಯಾಮಲಾ ತಲೆಯೆತ್ತದೆ ಕಾಫಿ ಹೀರಿದಳು.

ಅವನು ಮುಂದುವರಿದ " ನೀನೇ ನೀನಾಗಿ ತೀರ್ಮಾನ ಕೈಕೊಳ್ಳಬೇಕು. ನಿನ್ನ ಜೀವನ ಸಂಗಾತಿಯನ್ನು ನೀನಲ್ಲದೆ ಬೇರೆಯವರು ಆರಿಸುವುದೆಂದರೇನು? ನೀನು ವಿದ್ಯಾವಂತಳಿದ್ದು ಇಷ್ಟಕ್ಕೆ ಅವಕಾಶ ಕೊಟ್ಟದ್ದು ತಪ್ಪು!"

"ಅವರು ನನಗೆ ಹೇಳಲಿಲ್ಲ; ಇಷ್ಟಕ್ಕೂ ನಾನು ಒಪ್ಪಿಕೊಳ್ಳಲೂ ಇಲ್ಲ."

"ಈಗ ಇದನ್ನು ನಿವಾರಿಸುವುದೇ ಕಷ್ಟ ಎಂಬಷ್ಟು ತೊಡಕು. ನಮ್ಮ ಅಸಿಸ್ಟೆಂಟ್ ಮ್ಯಾನೇಜರಿಗೆ ಗೊತ್ತು ಇದರ ಸಂಪೂರ್ಣ ವ್ಯವಹಾರ."

"ಎಂತಹ ನಾಚಿಗೆಗೇಡು !" ಅಶರೀರವಾಣಿ ಕೂಗಿ ಹೇಳಿತು.

ಅವಳು ಮಾತಾಡಲಿಲ್ಲ. ಚಿಂತಾಕ್ರಾಂತತೆ ಹೃನ್ಮನಗಳನ್ನು ಕಾಣದ ಕೈಗಳಿಂದ ಹಿಂಡುತಿತ್ತು ತಾನೇತಾನಾಗಿ.

ನೀನು ಇನ್ನೂ ಸರಿಯಾಗಿ ಶಕ್ತಿ ಮೈಗೂಡಿಸಿಕೊಳ್ಳಲಿಲ್ಲ. ಹೆಚ್ಚು ಕೆಲಸ ಮಾಡಬೇಡ. ಸುಮ್ಮನೆ ಕುಳಿತು ಎಷ್ಟು ಬೇಕಾದರೂ ಮಾತಾಡು ಸಾಕು....ನಿನ್ನ ಭಾವನೆಗಳೇನು? ನಿನಗೆ ಯಾವ ತರದ ಜೀವನ ಇಷ್ಟ?"

ಶ್ಯಾಮಲಾ ಹೇಳಲೋ ಬೇಡವೋ ಎಂದು ಒಂದರೆರಡುಗಳಿಗೆ ತೀವ್ರ ಚಿಂತಿತಳಾಗಿ ಹೇಳಲಾರದೇ ಹೇಳಿದಳು "ನನಗೆ ಎಂ.ಎ. ಮಾಡುವುದು ಇಷ್ಟ. ಈಗ ಬಿ.ಎ.ಗೆ ಓದುತ್ತಿರುವೆ. ಅನಂತರ ಎಂ.ಎ. ಮಾಡಿಕೊಳ್ಳುವೆ. ಪಾಠ ಹೇಳುವಿಕೆ ತುಂಬ ಇಷ್ಟ. ಮನೆಯಲ್ಲಿ ಸುಖವಿಲ್ಲ. ಅಪ್ಪನ ದುರ್ವ್ಯವಹಾರ ಅಮ್ಮನಿಗೆ ತುಂಬ ಕಷ್ಟ. ಆದ್ದರಿಂದ ಮನೆಯವರಿಗೆ ಬೆಂಬಲ ನೀಡಿ ಭಾರ ಇಳಿಸುವ ಯೋಚನೆ...ಭಗವಂತ ನಡೆಸಿಕೊಡಬೇಕು."

ಡಾ॥ ಫರೀದ್ ಸ್ವಲ್ಪಹೊತ್ತು ಸುಮ್ಮನಾದ. ಉನ್ಮತ್ತ ದೃಷ್ಟಿ ಅವಳ ಕ್ಷೀಣತ ಶರೀರವನ್ನು ಆಸ್ವಾದಿಸುವಂತೆ ನೋಡುತಿದ್ದರೆ ಅವಳಿಗೆ ಸಂಕಷ್ಟ-ಸಂಕೋಚ.

''ಈಗ ಏನಾದರೂ ಬರೆಯುವುದುಂಟೇ?''

''ಪರವಾಯಿಲ್ಲ. ನೀನು ಈಗಲೇ ಕೆಲಸ ಮಾಡಬೇಡ. ನೀನು ಮಾನಸಿಕ ಸ್ವಾಸ್ಥ್ಯ-ದೈಹಿಕ ಸ್ವಾಸ್ಥ್ಯ ಎರಡೂ ಕಳೆದುಕೊಂಡಿದ್ದೀ. ಸ್ವಲ್ಪ ಸುಧಾರಿಸಿಕೊ....''

ಅವಳು ಒಂದೆರಡುಗಳಿಗೆ ಸುಮ್ಮನಿದ್ದು ಹೊರಡಲು ಎದ್ದರೆ ಅವನೆಂದ ''ಸ್ವಲ್ಪ ಕುಳಿತುಕೊ. ನಿನ್ನೊಂದಿಗೆ ಮಾತಾಡುವುದು ಬಹಳವಿದೆ.''

ಅವಳು ಏನೋ ಹೇಳಲು ತೊದಲಿ ಸುಮ್ಮನಾದಳು. ಮನಸ್ಸು ಭಯ-ಸಂಕೋಚಗಳ ಊಟೆಯಾಗಿತ್ತು. ಎರಡೂ ಕೈಹಸ್ತಗಳಿಂದ ಮುಖವನ್ನು ಹಿಡಿದು ಆಧಾರ ಕೊಟ್ಟಳು. ಹತ್ತೂ ಬೆರಳುಗಳ ಮಧ್ಯೆಯ ಪ್ರತಿಷ್ಠಿತ ಮುಖ ಬಿಂಬವನ್ನು ನಿಟ್ಟಿಸಿ ನೋಡಿದ ಡಾ॥ ಫರೀದ್.

ಅವಳ ಅವನತ ದೃಷ್ಟಿಗದು ತಿಳಿಯಲಿಲ್ಲವೇನೋ. ತಪಸ್ವಿನಿಯಂತೆ ವಿರಾಗಿನಿಯಂತೆ ನಿಶ್ಚಲ ಭಂಗಿ ದೇಹದಾದ್ಯಂತವೂ ಆವರಿಸಿ ಹೆಡೆಮುರಿಗಟ್ಟಿದೆ.

''ನೀನು ಒಪ್ಪುವಾದಾದರೆ, ನಾನು ಈ ಸಮಸ್ಯೆ ಬಗೆ ಹರಿಸುವೆ.''

ಶ್ಯಾಮಲಾ ನಿಧಾನವಾಗಿ ತಲೆಯೆತ್ತಿ ನೋಡಿದಳು. ಅವನು ಮೈಯೆಲ್ಲಾ ಮನಸ್ಸಾಗಿ ಪ್ರಶ್ನೆಯನ್ನು ಮುಂದಿಟ್ಟಿದ್ದಾನೆ. ಮುಖಭಾವದಲ್ಲಿ ಆಸೆ-ಪ್ರತ್ಯಾಸೆಗಳ ಮುದ್ರೆ ದಪ್ಪದಪ್ಪ ಅಕ್ಷರಗಳಲ್ಲಿ.

''ದಯಮಾಡಿ ಕ್ಷಮಿಸಿ, ನಾನೀಗ ಏನೂ ಹೇಳಲಾರೆ.''

''ನಿನ್ನ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕಾದರೆ ನೀನು ಯಾವುದಾದರೊಂದು ಕ್ರಮ ಕೈಕೊಳ್ಳಲೇಬೇಕು; ಯೋಚನೆ ಮಾಡಿ ನೋಡು.'' ಒತ್ತಾಯ ಪೂರ್ವಕವಾದ ಪ್ರೇಮ ಪಿಪಾಸೆ ಎದೆಯಾಳದಿಂದ ಹರಿದುಬಂತು ಸರಾಗವಾಗಿ.

''ಈಗೀಗ ನನ್ನ ಯೋಚನೆಯಲೆಗಳೇ ಸ್ತಬ್ಧವಾದಂತೆ ಭಾಸವಾಗುತ್ತೆ. ಯೋಚಿಸಿದರೆ ವಿಷಯ ನಿಚ್ಚಳವಾಗಿ ಹೊಳೆಯುವುದಿಲ್ಲ. ನಾನೀಗ ಯಾವ ತೀರ್ಮಾನಕ್ಕೂ ಬರಲಾರೆ.''

''ಆಗಲಿ ಕೆಲವು ಸಮಯ ತೆಗೆದುಕೊ...ಅನಂತರವೇ ಹೇಳಬಹುದು.''

ಡಾ॥ ಫರೀದ್ ಎದ್ದು ನಿಂತು ಅವಳ ತಲೆಯ ಮೇಲೆ ಹಸ್ತವನ್ನಿಟ್ಟು ನೇವರಿಸಿ ನುಡಿದ.

"ನಿನಗೆ ಯಾವ ರೀತಿಯ ಸಹಾಯವನ್ನಾದರೂ ಕೇಳು. ಸಂಕೋಚಪಟ್ಟು ಕೊಳ್ಳಬೇಡ."

"ತುಂಬ ಥ್ಯಾಂಕ್ಸ್ ಸರ್!"

* * *

ಶ್ಯಾಮಲಾ ಮನೆ ಮುಟ್ಟಿದಾಗ ತಂದೆಗೂ ಮಗನಿಗೂ ವಾಗ್ವಾದ ಜೋರಾಗಿ ನಡೆಯುತಿತ್ತು. ಮಾತುಕತೆಯ ಬಿಸಿ ಮಾಡಿಗೆ ಮುಟ್ಟುವಷ್ಟು ಏರಿಕೆ. ಶ್ಯಾಮಲಾ ಭಯಭೀತಿಯಿಂದ ನೇರವಾಗಿ ಹಿತ್ತಿಲ ಬಾಗಿಲ ಮೂಲಕ ಒಳಬಂದಳು. ವ್ಯಾಪ್ತಿಗೆ ಮೀರಿ ಮಿಡಿಯ ಹತ್ತಿತು ಎಳೆಯ ಹೃದಯ.

ಶರತ್ ಹೇಳುತಿದ್ದ "ಬಿಡಿ...ಬಿಡಿ. ಇದೇನು ಕೋಳಿಮರಿ ಎಂದು ಕೊಂಡಿದ್ದೀರಾ? ಮದುವೆಯಾಗುವವರು ತಮಗೆ ಬೇಕುಬೇಕಾದ ಜೋಡಿಯನ್ನು ಆರಿಸಿಕೊಳ್ಳುವುದರಲ್ಲಿ ಸ್ವತಂತ್ರರಿರಬೇಕು ! ಕುಡುಕ, ಮಲರೋಗಿ, ಅರೆಹುಚ್ಚ, ಮುದಿಪ್ರಾಯ, ಧಡೂತಿ ಕಾಯ, ಅಂಥ ದರಿದ್ರನಿಗೆ ಹೆಣ್ಣು ಕೊಡುವ ಅಗತ್ಯವೇನೀಗ? ನಿಮಗೆ ಅವರ ಸ್ನೇಹ ಸಂಬಂಧ ಬೇಕಾಗಿದ್ದರೆ ನೀವೆ ಮದುವೆ ಯಾಗಿಬಿಡಿ!"

ಗಂಗಾರಾಂ ಕಿಡಿಕಿಡಿಯಾದ. ಆದರೇನು? ಮಗನ ಬಲಿಷ್ಠ ತೋಳುಗಳ ಮುಂದೆ ತನ್ನ ಆಟ ಏನೇನೂ ನಡೆಯುವಂತಿಲ್ಲ. ಬಂಧಿತ ಕೇಸರಿಯಂತೆ ಚಡಪಡಿಸಿದ. ತನ್ನ ಉಪಾಯ ಬುಡ ಮೇಲಾಯಿತು. ಮುಂದೇನು? ಎಂಬುದು ತನ್ನ ಮುಂದಿರುವ ಪ್ರಶ್ನೆ. ನರನರಗಳಲ್ಲೂ ಬೆಂಕಿಯ ಝುರಿ ಹರಿದಾಡಿದಷ್ಟು ಉರಿ, ಒಡಲ ಬಳ್ಳಿ ಮುರುಟುತ್ತಿರು ವಷ್ಟು ಸಂಕಟ. ವಿಸ್ಕಿಯ ಪ್ರತಾಪದ ಉತ್ತಾಲ ನರ್ತನ ತಲೆಯಲ್ಲಿ.

ಗಂಗಾರಾಂ ಅಲ್ಲಲ್ಲೇ ಶತಪಥ ಸುತ್ತಿದ. ಎಷ್ಟೇ ಯೋಚಿಸಿದರೂ ಸಮಸ್ಯೆ ಬಗೆಹರಿಸುವ ದಾರಿ ತೋರಲಿಲ್ಲ. ದಡದಡ ಮೆಟ್ಟಲಿಳಿದು ಹೋದ.

ಹೊರ ಜಗತ್ತಿನಲ್ಲಿ ಮುಸ್ಸಂಜೆಯ ಮಸುಗಪ್ಪು ಹರಡುತ್ತಲಿತ್ತು.

ಹಿತ್ತಿಲ ಬಾಗಿಲ ಕಿರು ಅಂಗಳದಲ್ಲಿ ವ್ಹೀಲ್ ಚೇರ್‌ನಲ್ಲಿ ಕುಳಿತು ಓದುತ್ತಿದ್ದ ಶಾಂತಲಾ ತಂದೆ ನಿರ್ಗಮನವನ್ನೇ ಎವೆಯಿಕ್ಕದೆ ನಿಟ್ಟಿಸಿದಳು. ಕೈಯಲ್ಲಿದ್ದ ಪುಸ್ತಿಕೆ ಹಾಗೇ ಉಳಿಯಿತು. ಎಳೆಯ ಮನಸ್ಸು, ಅಪ್ರಬುದ್ಧ ಬುದ್ಧಿ ಜೀವನದ ಜಂಜಡವನ್ನು ಅಳೆಯಲಾರದು. ಆ ಸಿಟ್ಟು-ರೋಷ-ಹೊಡೆತ-ಕೂಗಾಟಗಳಿಗೆ ಅರ್ಥವೇನೋ ಅದೂ ತಿಳಿಯದು.

ಅಪ್ಪನ ಸೇವೆಗೆ ಸದಾ ಸಡು ಕಟ್ಟಿರುತ್ತಾಳೆ ಅಮ್ಮ. ಅಕ್ಕ-ಅಣ್ಣ ಕೆಟವರಲ್ಲ. ಅಪ್ಪನ

ಸಿಟ್ಟಿಗೆ ಏನು ಕಾರಣ? ತನ್ನನ್ನು ನಿರ್ಲಕ್ಷಿಸುವುದರ ಉದ್ದೇಶ ? ಇವೆಲ್ಲ ಅರ್ಥವಾಗದ ಸಮಸ್ಯೆ. ತಂದೆಯ ಸ್ವರೂಪ ಕಣ್ಮರೆಯಾದರೂ ದೃಷ್ಟಿ ಅಲ್ಲಿಂದ ನಿರ್ಗಮಿಸಿರಲಿಲ್ಲ. ಕಲ್ಲಿಗಿಂತ ಕಲ್ಲಾಗಿದೆ ಎಳೆಯ ಜೀವ.

''ಶಾಂತೀ...!''

ಕರೆ ಕಿವಿಯನ್ನು ಮುಟ್ಟಿದರೂ ವಿಚ್ಛಿನ್ನ ಮನಸ್ಸಿಗದು ಮುಟ್ಟಲಿಲ್ಲ.

ಶ್ಯಾಮಲಾ ಹೊರ ಬಂದು ಕೇಳಿದಳು. ''ಶಾಂತೀ! ಒಳ ಬರುತ್ತೀ ತಾನೇ?''

''ಹೌದು''

ಶ್ಯಾಮಲಾ ವ್ಹೀಲ್ ಚೇರ್‌ಗೆ ಮೆಟ್ಟಲು ಹತ್ತಲು ಸಹಾಯ ಮಾಡಿ ತಂಗಿಯನ್ನು ಬರಮಾಡಿಕೊಂಡು ನುಡಿದಳು ''ನಿನ್ನ ಮೈ ತುಂಬಾ ಸೊಳ್ಳೆ ಮುತ್ತಿ ಕಡಿದಿವೆ. ನೀನು ಗಮನಿಸಿಯೇ ಇಲ್ಲ. ಶಾಂತೀ ! ಏಕಷ್ಟು ನಿರಾಸಕ್ತಿ? ಇದೆಲ್ಲಾ ಸರಿಯಲ್ಲಮ್ಮ.''

ಶಾಂತಲಾ ಮಾತಾಡದೆ ತಲೆಯೆತ್ತಿ ನೋಡಿದಳು. ಅಕ್ಕನ ಮುಖ ಭಾವದಲ್ಲಿ ಎಂತಹ ಕಾತರತೆ? ತನ್ನ ಬಗ್ಗೆ ಇಲ್ಲದ ಕಾಳಜಿ ನನ್ನ ಮೇಲೆ?

''ಏನೋ ಯೋಚಿಸುತಿದ್ದೆ ಅವು ಕಚ್ಚಿದುದು ತಿಳಿಯಲಿಲ್ಲ'' ಹುಸಿ ನಗೆಯನ್ನು ಮೂಡಿಸಲು ಪ್ರಯತ್ನಿಸಿದಳು ಶಾಂತಲಾ.

''ನೀನು ನನ್ನ ಸ್ವೀಟ್ ಹಾರ್ಟ್! ನೀನು ಯೋಚಿಸಬಾರದು.''

''ನೀನು ಹೇಳಿದ ಪಾಠ ಕಲಿತೆ.....ಈ ಸಲಿ ಪರೀಕ್ಷೆಗೆ ಖಂಡಿತ ತಯಾರಾಗ್ತೀನಿ.''

''ಓದು...ಓದು! ಚೆನ್ನಾಗಿ ಓದಿ!''

''ಕರ ವಸ್ತ್ರ ಆರು ತಯಾರಿಸಿರುವೆ. ನಿನಗೆ ತೋರಿಸದೆ ಮುಚ್ಚಿಟ್ಟಿದ್ದೆ !''

'' ಹೌದಾ ? ನೀನು ಜಾಣ ಮಗು !'' ಎರಡೂ ಕೈಗಳಿಂದ ಅಪ್ಪಿ ಹಣೆಗೆ ಮುದ್ದಿಟ್ಟಳು ಅವಳು. ಮನದ ಅಳಲಿನಲ್ಲೂ ಮುಖದಲ್ಲಿ ಹೂನಗೆ ಅರಳಿತು.

* * *

ವಾರದ ಗಾಲಿ ಉರುಳಿತು. ಮಾಮರಗಳು ಹೂವಿನ ಶೃಂಗಾರ ಪಡೆದುದಾಗಲೀ, ಚಾಂದ್ರಮಾನದ ಪೂರ್ವಾರ್ಧ ಕಳೆದುದಾಗಲೀ ಗಮನಕ್ಕೆ ಬಾರದಷ್ಟು ವಿವಶತೆ. ಉತ್ತರಾರ್ಧ ಇನ್ನೇನು ಮುಗಿಯಲಿದೆ....ಕಾಲಪುರುಷ ಯಾರಿಗಾಗಿಯೂ ಕಾಯಲಾರ ನಿಜ.

ಗೌರೀಮಾ ಎರಡೂ ತೋಳ್ಬಳ್ಳಿಗಳಿಂದ ಮೊಣಕಾಲನ್ನು ಕಟ್ಟಿ ಮಂಡಿಯ ಮೇಲೆ ತಲೆಯೂರಿದ್ದಾಳೆ. ಘೂರ್ಣ ಉದ್ಭ್ರಾಂತತೆ ತನುಮನಗಳಲ್ಲಿ. ಆಲೋಚನೆಗೆ ಅವಕಾಶವೇ ಇಲದಷ್ಟು ಸ್ತಬ್ಧ ಮನದಲೆಗಳು.

ಅಂದು ಮನೆಬಿಟ್ಟ ಪತಿಮುಹರಾಯ ಪತ್ತೆಯೇ ಇಲ್ಲ. ಆಫೀಸಿಗೂ ಬಂದಿಲ್ಲವಂತೆ. ಬರುತ್ತಾನೋ ಇಲ್ಲವೋ ಅದೂ ತಿಳಿಯದು. ಕೆಲವರು ಕಂಡಿದ್ದುಂಟು ನಗರದಲ್ಲಿ. ಅದಕ್ಕೂ ಸರಿಯಾದ ಬುಡವಿಲ್ಲ. ಶರತ್ ಆಫೀಸಿಗೆ ಎರಡು ಬಾರಿ ಹೋಗಿ ಬಂದ. ಕ್ಲಬ್ಬಿನಲ್ಲೂ ಹಣಕಿ ನೋಡಿದ ಇನ್ನು ಪೋಲೀಸ್ ಕಂಪ್ಲೇಂಟ್ ಕೊಡುವುದೊಂದು ಬಾಕಿ. ಅಂದು ಇಬ್ಬರಿಗೂ ಜಾಡಿಸಿ ಹೊಡೆದು ಗುದ್ದಿದ ಮೇಲೆ ಯಾರ ಬಳಿಯೂ ಮಾತಾಡಿರಲಿಲ್ಲ. ಶರತ್ ತಾನಾಗಿಯೇ ವಾಗ್ವಾದಕ್ಕಿಳಿದುದರಿಂದ ಮಾತಿಗೆ ಮಾತು ಆಡಿದ್ದು. ತಾನು ಮಾಡಿದ ತಪ್ಪಿಗೆ ಮಗುವನ್ನು ಬಲಿಕೊಡುವ ಸಾಹಸಕ್ಕೇನು ಹೇಳೋಣ? ಕಲಿತ ವ್ಯಕ್ತಿ ಸ್ವಲ್ಪವಾದರೂ ಯೋಚನೆಯ ಆಳಕ್ಕೆ ಇಳಿಯಬಾರದೇ? ಈ ಸಮಸ್ಯೆ ಬಗೆ ಹರಿಯುವುದು ಹೇಗೆ?...ಇನ್ನು ಶರತ್ ಕ್ರಿಕೆಟ್ ಮ್ಯಾಚಿಗೆ ಹೊರಡಬೇಕು....ಯೋಚನೆ ತುಂಡು ಗಡಿಯಿತು.

ಪಾಂಚಾಲಿ ಹಿತ್ತಿಲ ಬಾಗಿಲಿಂದ ಓಡೋಡಿ ಬಂದು "ಆಂಟೀ ಶಾಂತಿ ಎಲ್ಲಿ?" ಎಂದಳು.

"ಒಳಗಿದ್ದಾಳಮ್ಮಾ."

"ಏಕೆ ಆಂಟೀ ಸುಮ್ಮನೇ ಕುಳಿತಿದ್ದೀರಿ? ನಿದ್ದೆ ಬಂದಿತ್ತಾ?"

"ಹೌದು!" ಎಂದು ಮಗುಳು ನಕ್ಕಳು ಗೌರೀಮಾ.

ಇಬ್ಬರೂ ಶಾಂತಿಯೆಡೆಗೆ ಹೋದರೆ ಅವಳು ಲೆಕ್ಕದಲ್ಲಿ ಪೂರ್ಣ ನಿಮಗ್ನೆ.

"ಓಹೋಹೋ! ಏನಮ್ಮಾ, ಲೆಕ್ಕ ಮಾಡುತಿದ್ದೀ?"

"ಈ ಸಲಿ ಪರೀಕ್ಷೆಗೆ ಕಟ್ಟುವೆ. ನಾನೀಗ ವ್ಹೀಲ್ ಚೇರ್‌ನಲ್ಲಿ ರಸ್ತೆಯ ಮೇಲೆ ಓಡಾಡಬಲ್ಲೆ. ನಿನ್ನೆ-ಮೊನ್ನೆ ಮೈನ್‌ರೋಡ್‌ನಲ್ಲಿ-ತುಂಬ ದೂರ ಹೋಗಿ ಬಂದೆ!"

"ಭೇಷ್!" ಬೆನ್ನು ಚಪ್ಪರಿಸಿದಳು ಪಾಂಚಾಲಿ.

ಗೌರೀಮಾ ಅವರನ್ನು ಅಷ್ಟಕ್ಕೇ ಬಿಟ್ಟು ಒಳ ಹೋದಳು.

ಪಾಂಚಾಲಿ ಬಳಿಯಲ್ಲಿ ಕುಳಿತು,

"ಈ ಸಲಿ ಶಾಲೆಯಲ್ಲಿ ಕರಡಿ ಮರಿ ತಯಾರಿಕೆ ಹೇಳಿಕೊಡುತಿದ್ದಾರೆ. ನಾನು ಅದಕ್ಕೆ ಬೇಕಾದ ಫರ್ ಬಟ್ಟೆ, ಸೂಜಿ, ನೂಲು, ಹತ್ತಿ, ಗಾಜಿನ ಕಣ್ಣುಗಳು ಹೀಗೆ ಏನೆಲ್ಲಾ ಕೊಳ್ಳಬೇಕಾಗಿದೆ. ನಾನು ಅಂಗಡಿಗೆ ಹೋಗುವೆ. ನಿನಗೂ ಬೇಕಾದರೆ ಹಾಗೇ ತರಬಹುದು. ನೀನು ಏನು ಹೇಳುತ್ತೀ? ನಿನಗೆ ಬೇಕೆ ? ನಿನ್ನ ಬಳಿ ಹಣವಿಲ್ಲದಿದ್ದರೆ ಅನಂತರ ಕೊಡು. ಈಗ ನಾನೇ ತರುವೆ! ನಿನಗೆ ಗೊತ್ತಾ? ಪರೀಕ್ಷೆಯಲ್ಲಿ ಅದಕ್ಕೂ ಮಾರ್ಕ್ಸ್ ಇದೆ. ಹೊಲಿಗೆಯಲ್ಲಿ ನಿನ್ನ ಕೈಚೆನ್ನಾಗಿ ಪಳಗಿದೆ. ನೀನೂ ತಯಾರಿಸು. ಪರೀಕ್ಷೆಗೂ ಆಯಿತು; ನಿನಗೂ ಆಯಿತು!"

ಚಟಪಟನೆ ನುಡಿದಳು ಪಾಂಚಾಲಿ. ಮುಖ ಮೈ ಸಂತಸದ ಮುದ್ರೆ. ಸಂತಸವನ್ನೇ ಸಂತಸಗೊಳಿಸುವ ರೀತಿಯಲ್ಲಿ ಅರಳಿ ಮಂದಾರವಾದ ಮನಸ್ಸು.

''ಆಗಲಿ, ಪಾಂಚಾಲಿ. ಈಗ ನನ್ನ ಬಳಿ ಹತ್ತು ರೂಪಾಯಿ ಇದೆ. ಹೊಲಿದ ಕರವಸ್ತ್ರ ಆರು ಇವೆ. ಅವುಗಲಿಂದ ಆರು ರೂಪಾಯಿ ಬರುತ್ತೆ ಸಾಕೆ?''

''ಈಗ ಹತ್ತು ರೂಪಾಯಿ ಮಾತ್ರವೇ ಕೊಡು. ಎಷ್ಟಾಗುತ್ತೋ ನೋಡಿ ಅನಂತರ ತೆಗೆದುಕೊಳ್ಳುವೆ.''

ಶಾಂತಲಾ ವ್ಹೀಲ್ ಚೇರ್ ಮಂಚದ ಬಳಿಗೆ ನಡೆಸಿ ತಲೆದಿಂಬಿನ ಚೀಲದಲ್ಲಿ ಹುದುಗಿಸಿಟ್ಟಿದ್ದ ಹತ್ತು ರೂಪಾಯಿಯನ್ನು ತೆಗೆದುಕೊಟ್ಟಳು.

''ಹಾಗಾದರೆ, ನಾನಿನ್ನು ಬರಲೇ?''

''ನಿನಗಿನ್ನೇನಾದರೂ ಬೇಕೆ?''

''ಇನ್ನೇನು ಬೇಡ, ಎಲ್ಲಾ ಅಕ್ಕ ತರುತ್ತಾಳೆ.''

''ಆಗಲಿ, ಬೈಯ್! ಬೈಯ್!''

''ಬೈಯ್! ಬೈಯ್ ಪಾಂಚಾಲಿ!''

ಪರಸ್ಪರ ನಲ್ಮೆಯಿಂದ ಬೀಳ್ಕೊಟ್ಟನಂತರ ಅವಳು ಆ ಕ್ಷಣವೇ ಕಣ್ಮರೆಯಾದಳು ಮಿಂಚಿ ಮಾಯವಾಗುವ ಚಿಗರಿಯಂತೆ.

* * *

ಹೊರ ಜಗತ್ತು ಎಷ್ಟೊಂದು ಸತ್ಯ ಸುಂದರ.

ರಸದೃಷ್ಟಿಗೆ ಅಸುಂದರವಾದುದೂ ಸಹ ಸುಂದರವಾಗಿ ತೋರುವುದಾದರೂ ಜಗತ್ತು ರಸದೃಷ್ಟಿಗೆ ಮಾತ್ರ ಸುಂದರವಲ್ಲ, ರಸಹೀನ ದೃಷ್ಟಿಗೂ ಸತ್ಯ ಸುಂದರವೇ. ಶೀತಲ ಶಾಂತಿಯನ್ನು ಮೀರುವ ತಣ್ಣನೆಯ ವಾತಾವರಣ. ಸುಳಿಗಾಳಿ ಸುಳಿಸುತ್ತಿ ಸುತ್ತಿ ತೀಡುತ್ತಿದ್ದರೆ ಮುಖ ಮೈಯೊಡ್ಡಿ ನಿಲ್ಲುವಷ್ಟು ಹಿತ. ಬೆಳಗಿನ ಬೆಚ್ಚನ್ನ ಬಿಸಿಲು ಹೂ ಮುದ್ರೆಯೊತ್ತಿ ಸ್ವಾಂತನ ನೀಡುತ್ತಿದೆ ದಣಿದ ಮೈ ಮನಗಳಿಗೆ. ಪಕ್ಷಿಗೊರಳ ಉದಯರಾಗ ಇನ್ನೂ ಮೊಳಗುತ್ತಲೇ ಇದೆ ಗಿಡಮರಗಳಲ್ಲಿ. ಆಗಸದ ನೀಲಿಯನ್ನು ಮುಟ್ಟುವಂತೆ ಅತೀ ಎತ್ತರದಲ್ಲಿ ಹಾರಾಡುವ ಕಾಮಳ್ಳಿಗಳ ಹಿಂಡು.

ಮುಂಬಾಗಿಲ ಮೆಟ್ಟಿಲಿನ ಮೇಲೆ ಹೊರ ಜಗತ್ತನ್ನೇ ನಿಟ್ಟಿಸುತ್ತಿದ್ದ ಶ್ಯಾಮಲೆಯ ಕಣ್ಣುಗಳಿಗೆ ಎಂತಹ ಅಪ್ಯಾಯ ಮಾನವೋ ಹೊರಜಗತ್ತು!

ಆದರೆ, ಈ ನರಕೋಟಿಯ ಸಮಾಜ ವ್ಯವಸ್ಥೆಯಲ್ಲಿ ಎಂತಹ ಅವ್ಯವಸ್ಥೆ! ಈ

ಸರ ಜಂತುಗಳು ಎಂದೆಂದಿಗೂ ಜಂತು ಗಳಾಗಿಯೇ ಉಳಿಯುವ ಹೊಂಚಿಕೆಯಲ್ಲಿ ನರಳುತ್ತಿವೆ ಹಗಲಿರುಲು. ಇದಕ್ಕೆ ಕೊನೆ ಹೇಗೆ? ಕೊನೆ ಎಂದು?

ತಲೆಯಲ್ಲಿ ಪ್ರಶ್ನೆಗಳ ಪರಿಭ್ರಮಣದಿಂದ ಹೃದಯ ಸಮುದ್ರ ಅಲ್ಲೋಲಕಲ್ಲೋಲ. ಶ್ಯಾಮಲಾ ಮೂರ್ತಿಮತ್ತಾಗಿ ನಿಂತಿದ್ದಂತೆಯೇ ಕಾರೊಂದು ಗೇಟಿನ ಬಳಿ ಗಕ್ಕನೆ ನಿಂತಿತು! ನೋಡುತ್ತಾಳೆ. ಘೋರ್ಪಡೆ! ಅವಳು ಹೆಜ್ಜೆ ಕೀಳುವುದರೊಳಗಾಗಿ ಹಿಂಬಾಲಿಸಿ ಬಂದೇಬಿಟ್ಟ! ವರಾಂಡದ ಬಾಗಿಲಲ್ಲಿ ಎರಡೂ ಕೈಗಳಿಂದ ಹೊಸ್ತಿಲ ಚೌಕಟ್ಟನ್ನು ಹಿಡಿದು,

''ಎಲ್ಲಿ ನಿನ್ನಮ್ಮ? ಏಕೆ ಹಾಗೆ ಓಡುತ್ತಿದ್ದಿ? ನಿಲ್ಲು, ಈಗ ಕೆಲಸಕ್ಕೆ ಹೋಗುತ್ತಿರುವೆಯಾ? ಹೇಗಿದ್ದಿ?''

ಪ್ರಶ್ನೆಗಳು ಒಂದೇ ಎರಡೇ? ಬಾಣ ಎಸೆದಂತೆ ಹೊರ ಬೀಳುತ್ತಲೇ ಇವೆ. ದೊಡ್ಡ ದನಿಯ ಗದ್ದಲ ಕೇಳಿ ಗೌರೀಮಾ ಒಳಗಿಂದ ಹೊರಬಂದಳು. ಅಷ್ಟರೊಳಗಾಗಿ ಶ್ಯಾಮಲಾ ಒಳ ಕೊಠಡಿಗೆ ಜಾರಿದ್ದಳೇನೋ.

ಘೋರ್ಪಡೆ ಉಚ್ಚಧ್ವನಿಯಲ್ಲಿ ಅರಚಿದ ''ನೀವು ಮರ್ಯಾದೆಯಿಂದ ಹಣ್ಣು ಕೊಟ್ಟರೆ ಸರಿ...ಇಲ್ಲವಾದರೆ ನನ್ನ ಹಣಕ್ಕೆ ನಿಮ್ಮ ಪ್ರತಿಯೊಂದು ವಸ್ತುವನ್ನೂ ಹರಾಜು ಹಾಕಿ ಹಣ ಪಡೆದುಕೊಳ್ಳುವೆ!!''

ಗೌರೀಮಾ ಕೈ ಮುಗಿದುಕೊಂಡು ನುಡಿದಳು,

''ಸ್ವಾಮಿ, ಹಣವನ್ನು ನಿಮ್ಮ ಗೆಳೆಯರಿಂದಲೇ ವಸೂಲು ಮಾಡಿಕೊಳ್ಳಿರಿ. ನಾವು ಬಡಪಾಯಿಗಳು! ನಮ್ಮ ವಸ್ತುಗಳನ್ನು ಹರಾಜು ಹಾಕಿದರೆ ನಮ್ಮ ಗತಿಯೇನು? ದಯವಿಟ್ಟು ಕ್ಷಮಿಸಿರಿ.''

ಆ ಮಾತಿಗೆ ಘೋರ್ಪಡೆ ಕೂಗಾಡಿ ಕಿರಿಚಾಡಿ ''ಒಂದು ವಾರದ ಅವಧಿ ಕೊಟ್ಟಿರುವೆ!'' ಎಂದು ಹೊರಟುಹೋದ. ಸಿಡಿಲು ಘರ್ಜಿಸಿ ಅಡಗಿದಂತಾಯಿತು!

## ೨೨

ಶಕೀಲೆಯ ಪತ್ರಧಾರೆ.

ಲೇಖನಿ ಕೈಗೆತ್ತಿಕೊಂಡ ನಂತರ ಮೊದಲನೆಯ ಪ್ರಶ್ನೆ ಏನು ಬರೆಯಲಿ? ಪ್ರತಿಸಲವೂ ಈ ಜೀವನ ಜಂಜಡವನ್ನೇ ಬರೆಯುವುದಲ್ಲದೆ ಬೇರಿಲ್ಲ.

ಈಚೀಚಿಗೆ ದೇಹಸ್ಥಿತಿ ಹದಗೆಡುತ್ತಿದೆ. ಏನು ತಿಂದರೂ ಅಜೀರ್ಣ. ಯಾವ ಗಟ್ಟಿ ಪದಾರ್ಥವೂ ಬೇಡ. ಬರೀ ದ್ರವಾಹಾರವಾದರೆ ಪರವಾಯಿಲ್ಲ. ಆದರೆ, ಒಳ ಹೊರಗೆ ಹೆಣಗುವುದಕ್ಕೆ ದ್ರವಾಹಾರ ಸಾಕೆ? ಡಾ॥ ಬಸಂತಿ ಹೇಳುವುದು ಚೆನ್ನಾಗಿ ಅಗಿದು ತಿನ್ನು ಎಂದು. ಯಾರಾದರೂ ಅಗಿಯದೆ ತಿನ್ನುತ್ತಾರೆಯೇ ಹಲ್ಲುಗಳಿರುವಾಗ? ಆದರೂ, ಅವಳ ಮಾತಿಗೊಂದು ಬೆಲೆ ಕೊಡಬೇಕಲ್ಲ ನಾನು ಊಟಕ್ಕೆ ಕುಳಿತಾಗ ಬಳಿಯಲ್ಲಿ ಯಾವುದಾದರೂ ಹೊತ್ತಗೆ ಇಟ್ಟುಕೊಂಡು ಓದುತ್ತಾ ಅಗಿಯುವೆ. ಅಗಿದೂ ಅಗಿದೂ ಜೊಲ್ಲು ರಸದೊಂದಿಗೆ ನುಂಗುವೆ. ಪ್ರತಿಫಲ ಅಜೀರ್ಣವೇ. ಇದಕ್ಕೇನು ಮಾಡಲಿ? ಗತ್ಯಂತರವಿಲ್ಲ, ಅಗಿಯುವುದು ಅಭ್ಯಾಸವಾಗಿದೆ ಅಗಿಯುವೆ. ಕೆಲಸ ಮುಗಿಸಿ ಊಟಕ್ಕೆ ಕೂಡುವುದು ಒಬ್ಬಳೇ ಆದುದರಿಂದ ಯಾರಿಗೂ ತೊಂದರೆಯಿಲ್ಲ.

ಹೋಗಲಿ, ನನ್ನ ಅನಾರೋಗ್ಯ ಯಾವತ್ತೂ ಇದ್ದದ್ದೇ. ಅದು ಒತ್ತಟ್ಟಿಗಿರಲಿ, ಈಗ ಕಪಿಲ್-ಕೌಷಿಕ್ ಓದು-ವಿದ್ಯೆಯಲ್ಲಿ ತುಂಬಾ ಹಿಂಜರಿಕೆ. ಮಾತು ಕೇಳುವವರಲ್ಲ. ಊಟ ತಿಂಡಿಯಲ್ಲಿ, ಷೋಕಿ ಜೋಕಿಯಲ್ಲಿ ಇರುವ ಆಸಕ್ತಿ ವಿದ್ಯೆಯಲ್ಲಿ ಇಲ್ಲವೇ ಇಲ್ಲ. ಈ ಸಲ ಇಬ್ಬರೂ ಡುಮ್ಕಿ ಹೊಡೆದರೆ ಆಶ್ಚರ್ಯವಿಲ್ಲ. ನನ್ನ ಅಂತರಂಗದ ಪ್ರಶ್ನೆ ಅಂದಿಂದಿಗೂ ಒಂದೇ...ನಾನು ಯಾರಿಗಾಗಿ-ಏತಕ್ಕಾಗಿ ಹೆಣಗಲಿ?

ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ...ಉತ್ತರ ಹೃದಯ ನಿಘಂಟಿನಲ್ಲಿ ಇಲ್ಲ. ಬಿಡು, ನಾನೀಗ ಸಂಸಾರದಲ್ಲಿ ನಿರಾಸಕ್ತೆ. ಹೇಗಾದರೂ ಇರಲಿ, ನಾನು ಯಾರನ್ನೂ ಪರಿಪಡಿಸಲಾರೆ. ಒಮ್ಮೆ ನಿಮ್ಮನ್ನೆಲ್ಲಾ ಕಣ್ತುಂಬ ನೋಡುವ ಆಸೆ ಇದೆ. ಯಾವಾಗಲಾದರೂ ಒಂದು ತಿಂಗಳು ರಜೆ ಹಾಕಿ ಹೊರಟುಬಿಡೋಣ ಎನ್ನಿಸುತ್ತಿದೆ. ಬಂದ ಹಣವೆಲ್ಲಾ ಖರ್ಚಿಗೇ ಆದರೆ ಪಯಣದ ಗತಿ? ಬಾಂಬೆಯಿಂದ ಒಬ್ಬಳೇ ಹೊರಡುವ ಬೇಸರದೊಂದಿಗೆ ಹಣದ ಕೊರತೆ ಆಸೆಗೆ ಕತ್ತರಿ ಒಡ್ಡುತ್ತದೆ.

ಒಂದು ಹೆಜ್ಜೆ ಮುಂದಿಡಬೇಕಾದರೆ ಹತ್ತು ಸಾರಿ ಯೋಚಿಸಬೇಕು. ಕಣ್ಣೀರಿನ ಕಾಲುವೆಯಲ್ಲಿ ಮುಖ ಮಜ್ಜನ ಮಾಡಬೇಕು. ಹಿಂದೂಸ್ಥಾನದಲ್ಲಿ ಸ್ತ್ರೀ ಜೀವನ ಸುಲಭವಲ್ಲ. ಕೆಂಡದ ಮೇಲಿನ ಹಪ್ಪಳದಂತೆ ಪಟಪಟಾಯಮಾನ...

ನೋಡೋಣ, ಯಾವಾಗ ಭಗವಂತ ನಮ್ಮ ನಿಮ್ಮ ಭೇಟಿ ಮಾಡಿಸುತ್ತಾನೋ. ನಮ್ಮ ನಿಮ್ಮ ಜೀವನ ಜಂಜಡ ಒಂದೇ ಆಗಿರುವುದರಿಂದ ನನ್ನ ಬಗ್ಗೆ ನೀವೇನೂ ಯೋಚಿಸುವುದು ಬೇಡವೇ ಬೇಡ. ನಡೆದಷ್ಟು ಕಾಲ ನಡೆಯಲಿ. ಜೀವವಿರುವಷ್ಟು ಕಾಲ ಅನುಭವಿಸೋಣ...

ಶಾಂತಲಾ ಅಕ್ಕನ ಪತ್ರವನ್ನು ಓದಿಯೇ ಓದಿದಳು. ಅವಳನ್ನು ನೋಡಿದ ನೆನಪೇ ಇಲ್ಲ. ಆರೇಳು ವರ್ಷಗಳ ಹಿಂದೆ ಒಮ್ಮೆ ಬಂದು ಹೋಗಿದ್ದಳಂತೆ. ಆಗ ತಾನಿನ್ನೂ ಚಿಕ್ಕವಳು. ಅವಳ ಫೋಟೋ ಹೊರತು ದರ್ಶನ ಭಾಗ್ಯವಿಲ್ಲ. ಈಚೀಚೆಗೆ ಫೋಟೋ ತೆಗೆಸಿಕೊಂಡಿಲ್ಲವಾದುದರಿಂದ ಕಳಿಸಿರಲಿಲ್ಲ ಕೂಡ. ಈಗ ಹೇಗಿದ್ದಾರೋ...

ಅವಳು ಯಾವತ್ತೂ ನನ್ನ ವಿಚಾರ ಕೇಳಿ ಬರೆಯುವುದೇ ಇಲ್ಲ. ಬಹುಶಃ ಸತ್ತುಹೋಗಿರಬಹುದೆಂದು ಭಾವಿಸಿದಾಳೇನೋ...ಅಥವಾ ತಂಗಿ ಇರುವ ವಿಚಾರ ಮರೆತಿರಬಹುದೋ...

ಅಂತೂ ಏನೋ ಒಂದು ಕಾರಣ...

* * *

ಶ್ಯಾಮಲಾ ಅಫೀಸಿಗೆ ಪದಾರ್ಪಣೆ ಮಾಡಿದಾಗ ಒಂಭತ್ತರ ಸಮಯ.

ಡಾ|| ಫರೀದ್ ಒಂಭತ್ತು ಗಂಟೆಗೇ ಬರುವ ರೂಢಿ. ಅಷ್ಟರಲ್ಲಿ ಆಫೀಸಿನ ಚಟುವಟಿಕೆ ಇನ್ನೂ ಆರಂಭವಾಗಿರದ ಕಾರಣ ತನ್ನ ಮನಬಿಚ್ಚಿ ಮಾತಾಡಬಹುದೆಂಬ ಇಚ್ಛೆ. ತಾಯಿಗೆ ಹೆಚ್ಚಿನ ಕೆಲಸವಿದೆ ಎಂದು ಹೇಳಿ ಮೊದಲೇ ಬಂದಿದ್ದಾಳೆ. ಬಾಸ್ ಕೊಠಡಿಗೆ ಹೋದಾಗ ಅವನು ಬಂದಿರಲಿಲ್ಲ. ಮೇಜಿನ ಮೇಲಿದ್ದ ಪತ್ರಿಕೆಯಲ್ಲಿ ಕಣ್ಣಾಡಿಸಿದಳು. ರಾತ್ರಿಯೆಲ್ಲಾ ಪರೀಕ್ಷೆಗಾಗಿ ಓದಿದ್ದುರಿಂದಲೇನೋ ತಲೆಯೆಲ್ಲಾ ಭಾರ. ಅಥವಾ ಚಿಂತೆಯ ಭಾರವಿದ್ದರೂ ಇರಬಹುದು.

ಕಸ ಉಡುಗುತ್ತಿದ್ದ ಜವಾನ ''ಇಂದೇಕಮ್ಮಾ ಈಗಲೇ ಬಂದಿರಿ?'' ಎಂದ.

''ಕೆಲಸ ಜಾಸ್ತಿಯಿತ್ತು ಅದಕ್ಕೆ....ಬಂದೆ.''

ಪತ್ರಿಕಾವಲೋಕನ ಮುಗಿಯುವುದಕ್ಕೂ ಡಾ|| ಫರೀದ್ ಒಳಹೆಜ್ಜೆಯಿಡುವುದಕ್ಕೂ ಸರಿಹೋಯಿತು. ಅವಳು ದಡಕ್ಕನೆ ಎದ್ದು ನಿಂತಳು. ಆತನ ಬೆಳ್ಳಿ ಕೂದಲ ಮುಂಬೆಳೆ, ಸ್ಥೂಲಮೀಸೆ, ವಾರ್ಧಕ್ಯಕ್ಕೆ ವಯಸ್ಸೇ ಆಗಬೇಕೆಂಬ ಸಿದ್ಧಾಂತವನ್ನು ಪ್ರತಿಭಟಿಸುವ ದೇಹ ಪ್ರಕೃತಿ...

ಅವನು ಕುರ್ಚಿಯೆಳೆದು ಕುಳಿತುಕೊಳ್ಳುತ್ತ ಹೇಳಿದ ''ಕುಳಿತುಕೊ. ಬಂದು ಬಹಳ ಹೊತ್ತಾಯಿತೇ?''

''ಇಲ್ಲ...ಈಗಷ್ಟೇ ಬಂದೆ.'' ಸುಳ್ಳು ಹೇಳಬೇಕಾದುದಕ್ಕೆ ನಾಚಿತು ಮನಸ್ಸು. ಪತ್ರಿಕೆಯನ್ನು ಮುಂದಿಟ್ಟು ಕುಳಿತುಕೊಂಡಳು. ಮೈಯೆಲ್ಲಾ ಸಂಕೋಚದ ಮುದ್ದೆಯಾಯಿತು.

ಅವನು ಪತ್ರಿಕೆಯ ತಲೆ ಬರೆಹಗಳನ್ನು ನೋಡಿ, ಒಳ ಪುಟ ತಿರುವಿ ಹಾಕಿ ಕೇಳಿದ "ಹೇಗಿದೆ ನಿನ್ನ ದೇಹ ಪ್ರಕೃತಿ? ಟಾನಿಕ್ಕು-ಹಣ್ಣು ಮುಂತಾದ ಪೌಷ್ಟಿಕ ಆಹಾರ ತೆಗೆದುಕೊಳ್ಳಬೇಕು. ಚಿಂತೆ-ಚಿಂತೆ-ಯಾವಾಗಲೂ ಚಿಂತೆಯಲ್ಲೇ ಮುಳುಗಿದ್ದರೆ ಹೇಗೆ?"

"ನಿನ್ನ ತಂದೆಯ ಸುದ್ದಿ ಏನಾದರೂ ತಿಳಿಯಿತೇ? "

"ಇಲ್ಲ..." ಗೋಣು ಆಡಿಸಿದಳು ಅವಳು.

"ಈಗೇನು ಮಾಡುತ್ತಿ? ನನ್ನ ಪ್ರಶ್ನೆಗೆ ನಿನ್ನ ಉತ್ತರವೇನು?"

ಅವಳು ಸ್ವಲ್ಪಹೊತ್ತು ಸುಮ್ಮನಿದ್ದು "ಘೋರ್ಪಡೆಯ ಸಾಲದ ಮೊತ್ತ ಎಷ್ಟೆಂಬುದು ತಿಳಿಯದು. ಈಗ ಅಪ್ಪ ಇಲ್ಲವೆಂದು ಒಂದಕ್ಕೆರಡು ಹೇಳಿದರೂ ಹೇಳಬಹುದು. ಇದನ್ನೆಲ್ಲಾ ಖುದ್ದು ಪರಿಶೀಲಿಸಿ ಇತ್ಯರ್ಥಗೊಳಿಸಬೇಕಷ್ಟೆ? ಅಪ್ಪ ನಮ್ಮೊಂದಿಗೆ ವ್ಯಾವಹಾರಿಕವಾಗಿ ಎಂದೂ ಮಾತಾಡಿದವರಲ್ಲ. ಪತ್ರ ಬರೆದು ಕೊಟ್ಟಿದ್ದಾರೋ ಇಲ್ಲವೋ ಅದು ತಿಳಿಯದು...ಹೀಗಿದೆ ಪರಿಸ್ಥಿತಿ" ಎಂದಳು ನುಡಿಯಲಾರದೆ ನುಡಿಯುವಂತೆ. ಕ್ಷೀಣತ ದನಿ ಬಾವಿಯಾಳದಿಂದ ಹೊರಬಂದಂತೆ ಹೊರಬಿತ್ತು.

ಅವಳ ಮ್ಲಾನಮುಖ ಬಿಂಬವನ್ನು ನಿಟ್ಟಿಸಿ ನೋಡುತ್ತ ಕಾರುಣ್ಯ ಪೂರ್ಣ ದನಿಯಲ್ಲಿ ನುಡಿದ "ನಮ್ಮ ಅಸಿಸ್ಟೆಂಟ್ ಮ್ಯಾನೇಜರ್ ಕಳುಹಿಸಿದರೆ ತಿಳಿದುಕೊಳ್ಳುತ್ತಾರೆ."

ಅಂದು ಅವನೆಂದ ಮಾತು ಕರ್ಣಪಟಲದ ಮೇಲೆ ಮರುದನಿ ಗೈಯಿತು "ತೋಳಿಲ್ಲದ ಕಪ್ಪಸ, ತುಟಿಗೆ ಬಣ್ಣ, ರಂಗುರಂಗಿನ ಬಟ್ಟೆ...ಇತ್ಯಾದಿ ಕೆಲಸ ಮಾಡುವುದಕ್ಕೇನು? ಈ ಬಣ್ಣದ ಚಿಟ್ಟೆಗಳನ್ನು ನಂಬಿದರೆ ಆಯಿತು! ಯಾವ ಗಳಿಗೆಯಲ್ಲಿ ಹಾರಿ ಹೋಗುತ್ತವೆಯೋ..."

"ಮೈಡಿಯರ್ ಗರ್ಲ್! ನೀನು ಭಯಪಡಬೇಕಿಲ್ಲ. ನೋಡೋಣ ಏನಾಗುತ್ತೆ ಅಂತ."

ಎಷ್ಟೇ ಪ್ರಯತ್ನಿಸಿದರೂ ತನ್ನನ್ನು ತಾನು ನಿಗ್ರಹಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಧೂರ್ತ ಘೋರ್ಪಡೆಯ ಚಿತ್ರ ಅಕ್ಷಿಪಟಲದ ಮೇಲೆ ಸುಳಿಸುಳಿದಳಿಯಿತು. ಕಣ್ಣುಗಳಲ್ಲಿ ಕಂಬನಿಗಳು ಮೊಳೆತುವು. ತಲೆಬಾಗಿ ಅವು ತೊಡೆಯ ಮೇಲೆ ಉರುಳಿ ಹಿಂಗುವಂತೆ ಮಾಡಲು ಯಶಸ್ವಿಯಾದ ಅವಳು ಮುಖವನ್ನು ಒರಿಸಿಕೊಂಡು ಕೆಲಸ ಮಾಡಲು ಅಣಿಯಾದಳು.

"ಮೈ ಡಾರ್ಲಿಂಗ್ ! ನನ್ನ ಪ್ರಶ್ನೆಗೆ ನೀನು ಉತ್ತರ ಹೇಳಲಿಲ್ಲವಲ್ಲಾ ಏನು ಹೇಳುತ್ತಿ?"

"ನನ್ನಿಂದ ಯಾರಿಗೂ ತೊಂದರೆಯಾಗಬಾರದು....ಮೊದಲು ಘೋರ್ಪಡೆಯ ವ್ಯವಹಾರ ಇತ್ಯರ್ಥವಾಗಲಿ. ಅನಂತರ ಅಮ್ಮನನ್ನು ಕೇಳಿಕೊಂಡು ಬರುವೆ. ....ನನ್ನ ಸುತ್ತಮುತ್ತ ತಾಪತ್ರಯಗಳಿವೆ. ಅವನ್ನು ಬಗೆಹರಿಸಿಕೊಳ್ಳದೇ ಹೋದರೆ ಜೀವನ ಕಷ್ಟ....ನನ್ನಿಂದ ನಿಮಗೆ ತೊಂದರೆಯಾಗಬಾರದು."

"ನಾನು ಗಂಡಸು ! ಎಂತಹ ತೊಂದರೆ ಇದ್ದರೂ ಬಗೆಹರಿಸಿಕೊಳ್ಳುವೆ!" ಕಣ್ಣುಗಳಲ್ಲಿ ಕೆಚ್ಚಿನ ಮಿಂಚು ಮಿನುಗಿತು. ಸಿಗರೇಟಿನ ಹೊಗೆಯನ್ನು ಪುಪ್ಪನೆ ಊದಿ ಬೂದಿಯನ್ನು ಬಾನಿನಲ್ಲಿ ಕೊಡವಿದ. ಕಣ್ಣು-ಮುಖಗಳಲ್ಲಿ ಒಡಲಾಳದ ಹಸಿವೆ ತಾನಾಗಿ ಹೊಮ್ಮಿತು.

ಶ್ಯಾಮಲೆಯ ಜೀವನಾಡಿ ಭಯ ಉದ್ವೇಗಗಳಿಂದ ಮಿಡಿಯಿತು.

* * *

ಪಾಂಚಾಲಿ ಕರಡಿ ಮರಿಯನ್ನು ತಯಾರಿಸುವ ಎಲ್ಲಾ ಸಾಮಗ್ರಿಯನ್ನು ತಂದುಕೊಟ್ಟುದುದಲ್ಲದೆ, ಶಾಲೆಯಲ್ಲಿ ಕೊಟ್ಟ ಚಿತ್ರ ಮತ್ತು ಪೇಪರ್ ಕಟಿಂಗ್ ತಂದುಕೊಟ್ಟಿದ್ದಳು. ಅದೇ ಪ್ರಕಾರ ಫರ್ ಬಟ್ಟೆಯನ್ನು ಕತ್ತರಿಸಿ ಅಚ್ಚುಕಟ್ಟಾಗಿ ಹೊಲಿಯುವುದರಲ್ಲಿ ಯಶಸ್ವಿಯಾದಳು ಶಾಂತಲಾ. ಅನಂತರ ಹತ್ತಿ ತುಂಬಿ ಬೊಂಬೆಯ ತಯಾರಿಕೆ. ಕಣ್ಣು, ಮೀಸೆ, ಬಾಯಿಗಳಿಗೆ ಆಕಾರ ಕೊಡುವಲ್ಲಿ ತಾಯಿಯ ಸಹಾಯ, ಅಕ್ಕನ ಸಲಹೆ ಎರಡೂ ಕೈಗೂಡಿ ಸುಂದರ ಬೊಂಬೆ ಮೂಡಿತು, ಕರಡಿಮರಿಯಾಗಿ.

ಆಗ ಶಾಂತಲೆಯ ಆನಂದವೇ ಆನಂದ. ಎಷ್ಟು ಮುದ್ದಾಡಿದರೂ ಸಾಲದು. ಒಂದು ಮಗ್ಗುಲಿಗೆ ಶರ್ಮಿಳೆಯಾದರೆ ಇನ್ನೊಂದು ಮಗ್ಗುಲಿಗೆ ಕರಡಿಮರಿ. ಅದಕ್ಕೇನು ಹೆಸರು? ಆಗಲೇ ಎದ್ದಿತು ಪ್ರಶ್ನೆ. ಅವಳು ಮುದ್ದಿಡುತ್ತಲೇ ಕೇಳಿದಳು "ಇದಕ್ಕೇನು ಹೆಸರಿಡೋಣ?"

"ಏನಿಷ್ಟ ನಿನಗೆ?"

"ಶರ್ಮಿಳಾ - 'ಶರ್ಮ' ಹೇಗಿರುತ್ತೇ ಹೇಳು?"

"ಆಗಬಹುದು. ಶರ್ಮ ಚೆನ್ನಾಗಿದೆ."

"ಓ! ಎಂತಹ ಆನಂದ ಅಕ್ಕ! ಶರ್ಮ ಇನ್ನು ದಿನವೂ ನನ್ನ ಸಂಗಾತಿ! ಪರೀಕ್ಷೆಗೆ ಒಂಭತ್ತು ದಿನಗಳು ಮಾತ್ರ ಉಳಿದಿವೆ. ನಾನು ಎಲ್ಲಾ ಪಾಠವನ್ನೂ ಚೆನ್ನಾಗಿ

ಓದಿಕೊಂಡಿರುವೆ. ಪರೀಕ್ಷೆ ಆದಮೇಲೆ ಶರ್ಮ-ಶರ್ಮಿಳಾ ಜೊತೆಗೆ ಆಟ ಆಡುವೆ. ಪಾಂಚಾಲೀನೂ ಬರುತ್ತಾಳೆ. ಶರ್ಮಂಗೆ ಒಂದು ಪಾರ್ಟಿಮಾಡಿ ನನ್ನ ಗೆಳತಿಯರನ್ನು ಕರೆಯುವೆ. ಅಂದಿನಂತೆಯೇ ಇದಕ್ಕೂ ಎಲ್ಲರ ಮುಂದೆಯೇ ಹೆಸರಿಡೋಣ.''

''ಆಗಲಿ, ನನ್ನ ಸ್ವೀಟ್ ಡಾರ್ಲಿಂಗ್! ಮೊದಲು ನಿನ್ನ ಪರೀಕ್ಷೆ ಮುಗಿಯಲಿ ಅನಂತರದ ಪಾರ್ಟಿ.''

''ಆಗಲಿ'' ಎರಡೂ ಬಗಲಲ್ಲಿ ಎರಡೂ ಬೊಂಬೆಗಳನ್ನೂ ಎತ್ತಿಕೊಂಡು ಮುದ್ದಾಡುತ್ತ ನುಡಿದಳು ಶಾಂತಲಾ ''ಇವರಿಬ್ಬರೇ ನನ್ನ good friends! ಶರ್ಮ-ಶರ್ಮಿ!''

ಶ್ಯಾಮಲಾ ಭಾವೋದ್ವೇಗದಿಂದ ತಂಗಿಯ ಹಣೆಗೆ ಹೂ ಮುತ್ತನ್ನೊತ್ತಿದಳು.

* * *

ಸ್ವಾಮಿನಿ ಮಗಳ ಖಿನ್ನ ಮುಖವನ್ನು ನೋಡುತ್ತ ''ನಾವು ಹೀಗೆ ಹೆದರಿ ಮೈ ಮುದುಡಿ ಕುಳಿತರೆ ಧೂರ್ತ ಘೋರ್ಪಡೆ ನಮ್ಮನ್ನು ಹೊರಹಾಕಿ ಹಗಲು ದರೋಡೆ ಮಾಡಿಬಿಡುತ್ತಾನೆ. ನಾವೀಗ ಸುಮ್ಮನಿರಬಾರದು. ನಾಳೆ ಬೆಳಿಗ್ಗೆ ಪೋಲೀಸ್ ಸ್ಟೇಷನ್ನಿನಲ್ಲಿ ದೂರುಕೊಟ್ಟು ಬರೋಣ. ನಮ್ಮ ಕರುಣಕತೆಯನ್ನೆಲ್ಲಾ ಬರೆದುಕೊಂಡರೆ ಪೋಲೀಸರು ಕರುಣೆದೋರಿಯಾರು. ನೀನೇನು ಹೇಳುತ್ತಿ ?'' ಎಂದಳು. ದನಿ ಎದೆಯಾಳದಿಂದ ಹೊರಬಿತ್ತು, ಮಗಳ ಮನವನ್ನು ಕೊಕ್ಕೆ ಹಾಕಿ ಎಳೆಯುವಂತೆ.

''ನಿಜ ಅಮ್ಮಾ! ನಾನು ಆ ವಿಚಾರ ಸಂಪೂರ್ಣ ಮರೆತು ಬಿಟ್ಟಿದ್ದೆ. ನೀವು ಜ್ಞಾಪಿಸಿದ್ದು ಒಳ್ಳೆಯದಾಯಿತು. ನಾನು ಎಷ್ಟು ಜಡವಾಗಿದ್ದೇನೆಂದರೆ ಕಲ್ಲಿಗಿಂತ ಕಲ್ಲು! ಸಂತೋಷಪುರದಲ್ಲಿ ಸಂತೋಷವೇ ಇಲ್ಲದಂತೆ ನನ್ನ ಬುದ್ಧಿಮತ್ತೆಯಲ್ಲಿ ಬುದ್ಧಿಯೇ ಇಲ್ಲವಾಗಿದೆ. ಕೆಲವುವೇಳೆ ನಾನು ಹುಚ್ಚಾಗಿ ಬಿಡುವೆನೇನೋ ಎನಿಸುತ್ತೆ. ಮನಃಬುದ್ಧಿಗಳಲ್ಲಿ ಅತೀವ ಮಂಪರ. ನನ್ನ ಸ್ಥಿತಿ ನನಗೇ ಅರ್ಥವಾಗುತ್ತಿಲ್ಲ.''

''ತೀರಾ ಚಿಂತೆ ಹಚ್ಚಿಕೊಂಡು ತಲೆ ಕೆಡಿಸಿಕೊಳ್ಳಬೇಡ ಮಗಳೇ! ಏನಿಲ್ಲದಿದ್ದರೂ ಆರೋಗ್ಯವಿರಬೇಕು. ಮನೆಯಲ್ಲಿ ಶರತ್ ಕೂಡ ಇಲ್ಲ. ಕ್ರಿಕೆಟ್ ಮ್ಯಾಚ್ ಮುಗಿಸಿ ಬರುವುದು ಇನ್ನೆಷ್ಟು ದಿನಕ್ಕೋ....ನೀನೇನಾದರೂ ಗಂಡಾಂತರಕ್ಕೆ ಸಿಕ್ಕಿದರೆ ಇಲ್ಲಿ ಯಾರಿದ್ದಾರೆ ನಮ್ಮ ಸಹಾಯಕ್ಕೆ ?'' ಅತ್ಯಂತ ಕಳಕಳಿಯಿಂದ ನುಡಿದಳು ಗೌರೀಮಾ.

''ಹೌದು! ಶರತ್ ಕಲ್ಕತ್ತಾದಲ್ಲಿದ್ದಾನೆ. ನಾವೀಗ ಗತಿ ಹೀನರು!'' ಎದೆಯಾಳ ದಿಂದ ಅಂತರಾತ್ಮ ಕೂಗಿ ಹೇಳಿತು. ಆ ಕ್ಷಣವೇ ದೇಹದಾದ್ಯಂತ ನಸು ಕಂಪನದ ಅಲೆ

ಹರಿದಾಡುತ್ತಿರುವುದು ಗಮನಕ್ಕೆ ಬಂತು. ಶ್ಯಾಮಲಾ ತನ್ನನ್ನು ತಾನು ನಿಗ್ರಹಿಸಿಕೊಳ್ಳಲು ಸರ್ವಸಾಹಸ ಪ್ರಯತ್ನಿಸಿದಳು.

Be brave....be brave ಎಂದು ಚೀರುತ್ತಲೇ ಇರುತ್ತದೆ ಹೃತ್ ಬನದ ಹಂಸೆ.

ಶ್ಯಾಮಲಾ ತಣ್ಣೀರಿನಲ್ಲಿ ಮುಖ ಮಜ್ಜನ ಮಾಡಿ ಪೋಲೀಸ್ ಇನ್ಸ್‌ಪೆಕ್ಟರಿಗೆ ಘೋರ್ಪಡೆಯ ಧೋರಣೆ ಮತ್ತು ಹಿಂಸೆಯನ್ನು ವಿವರವಾಗಿ ಅರ್ಜಿ ಬರೆದುಕೊಂಡು ತಾಯಿಯೊಂದಿಗೆ ಹೋಗಿ ಕೊಟ್ಟಳು, ಪೋಲೀಸ್ ಸ್ಟೇಷನ್ನಿನಲ್ಲಿದ್ದ ಇನ್ಸ್‌ಪೆಕ್ಟರಿಗೆ, "ಸರ್, ನಾವು ಹೆಂಗಸರು ಮಾತ್ರ ಇದ್ದೇವೆ. ದಯವಿಟ್ಟು ನಮಗೆ ರಕ್ಷಣೆ ಬೇಕು. ದಯಮಾಡಿ ನಮ್ಮ ಮನೆಯ ಮೇಲೆ ಒಂದು ಕಣ್ಣಿಟ್ಟು ಉಪಕಾರ ಮಾಡಬೇಕು" ಎಂದು ಕೈ ಮುಗಿದು ಕೇಳಿಕೊಂಡು ಹಿಂದಿರುಗಿದರು ಮನೆಗೆ.

* * *

ಇನ್ನೂ ಬೆಳಗಿನ ಏಳುಗಂಟೆಯ ಸಮಯ. ಮುಂಬಾಗಿಲನ್ನು ಮುಚ್ಚಿಕೊಂಡೇ ದಿನಚರಿಯನ್ನು ಆಚರಿಸುತ್ತಿದೆ ನಗರಿ.

ಶರದೃತು ರಾಜನ ಒಡ್ಡೋಲಗದಲ್ಲಿ ಎಲ್ಲಿಂದ ಎಲ್ಲಿಯವರೆಗೂ ಬೆಳ್‌ಮುಗಿಲ್ಮಂಜಿನ ಮಹಾರಾಶಿ....ರಾಶಿ.

ಮುಂಬಾಗಿಲ ಬಳಿ ಕಟ ಕಟ ಸದ್ದು.

ಪುನಃ ಸದ್ದು. ಕಟ. ಕಟ. ಕಟ.ಕಟ!

ಗೌರೀಮಾ ಮುಂಬಾಗಿಲನ್ನು ತೆರೆದಳು. ನೋಡೆ, ಮನೆಯೊಡೆಯ ಮೃಡೇಶ್ವರ್ ನಿಂತಿದ್ದಾನೆ. ಒಡನೆಯೇ ಎರಡೂ ಹಸ್ತಗಳನ್ನು ಜೋಡಿಸಿ "ನಮಸ್ಕಾರ!" ಎಂದಳು ಗೌರೀಮಾ.

"ನಮಸ್ಕಾರ!" ಪ್ರತಿ ನಮಸ್ಕರಿಸಿದ ಮೃಡೇಶ್ವರ್.

ಆ ಕ್ಷಣ ಅವಳಿಗೆ ಏನು ಹೇಳಬೇಕೋ ತಿಳಿಯಲಿಲ್ಲ. ಬಾಯ್ದೆರೆಯುವುದ ರೊಳಗಾಗಿ ಅವನೇ ವಿಷಯವನ್ನು ಮುಂದಿಟ್ಟ "ಆರು ತಿಂಗಳಿಂದ ಬಾಡಿಗೆ ಕೊಟ್ಟಿಲ್ಲ ತಾಯಿ!"

"ಅಯ್ಯೊ, ಏನುಗತಿ ? ವ್ಯವಹಾರ ಪೂರ್ತಿ ಅವರ ಕೈಲಿರುವುದರಿಂದ ನಮಗೇನೂ ತಿಳಿಯದು. ದಯವಿಟ್ಟು ನಮ್ಮನ್ನು ಕ್ಷಮಿಸಿರಿ."

ಗಂಗಾರಾಂ ಎಲ್ಲಿದ್ದಾರೆ ? ಯಾವಾಗ ಬರುತ್ತಾರೆ ? ಊರಲಿಲ್ಲ ಎಂದು ತಿಳಿಯಿತು ನಿಜವೇ ?"

ಗೌರೀಮಾ ನೀಳವಾದ ನಿಟ್ಟುಸಿರು ಬಿಟ್ಟು ನುಡಿದಳು ''ಹೌದು ಸ್ವಾಮಿ! ನಮಗೆ ಹೇಳದೇ ಹೋಗಿದ್ದಾರೆ. ಮನೆಗೂ ಕಾಸು ಕೊಟ್ಟಿಲ್ಲ....ನಮ್ಮ ಕಷ್ಟ ದೇವರಿಗೇ ಗೊತ್ತು! ಅವರ ವ್ಯವಹಾರ ನಿಮಗೇ ಸಂಪೂರ್ಣ ಗೊತ್ತಲ್ಲ....ಕಲಿತವರು ಹೀಗಿದ್ದರೆ ಏನು ಮಾಡೋಣ ?''

ಮುಗಿದ ಕೈಗಳು ಇಳಿದೇ ಇಲ್ಲ. ಎರಡೂ ಕಣ್ಣುಗಳಲ್ಲಿ ಗಂಗೆ. ಯಮುನೆಯರ ಪ್ರವಾಹ ಹರಿದು ಹೋಯಿತು. ಆ ಬಡತಾಯಿಯ ದುಃಖಭರಿತ ಚಿತ್ರ ಮೃಡೇಶ್ವರನ ಮನಸ್ಸನ್ನು ಮಂಜಿನಂತೆ ಕರಗಿಸಿತು. ಆತ ದಯಾವಂತ. ಆದರೂ, ಬಾಡಿಗೆ ಬಿಡುವುದಕ್ಕಾಗುತ್ತದೆಯೇ ? ಸ್ವಲ್ಪ ಹೊತ್ತು ಮಾತಿಲ್ಲದೆ ನಿಂತ. ಆ ತಾಯಿಯ ಸಂಕಟ ಒಡಲಾಳದಲ್ಲಿ ಕೈಯಾಡಿಸಿತು.

ಗೌರೀಮಾ ದೇಹ ಪ್ರಕೃತಿ ಸ್ತಬ್ಧವಾಯಿತು. ಮನಃಶಾಂತಿ ಮೈಲಿ ದೂರ. ಮುಂದೇನು ಗತಿ ಎಂಬ ಪ್ರಶ್ನೆ ಕೂರಿಗೆಯಂತೆ ಮನಃಕರಂಡವನ್ನು ಕೊರೆಯುತ್ತಿದೆ. ದೇಹದ ಭಾರವನ್ನು ಹೊರಲಾರದಷ್ಟು ಕಾಲುಗಳಲ್ಲಿ ಜೋಮು. ಕೆಲವು ಗಳಿಗೆಗಳು ಸದ್ದಿಲ್ಲದೆ ಉರುಳಿದುವೇನೋ....ಅನಂತರ ಅವನೇ ಮೌನ ಮುರಿದ.

''ಈ ತಿಂಗಳು ಕಾಯಲಿಕ್ಕೆ ಅಡ್ಡಿಯಿಲ್ಲ....ಅಷ್ಟರೊಳಗಾಗಿ ಗಂಗಾರಾಂ ಬಂದಾರೇನು ?''

''ನನಗೊತ್ತಿಲ್ಲ....ಅವರ ಮನಸ್ಸಿನಲ್ಲಿ ಏನಿದೇಯೋ ಶಿವನಿಗೇ ಗೊತ್ತು. ಅವರ ದುಡಿಮೆ ನಮ್ಮ ಜೀವನಕ್ಕೆ ಸಾಕು. ದುರ್ವಿನಿಯೋಗದಿಂದ ನಮಗೆ ಕಷ್ಟ....''

ಸ್ವಲ್ಪಹೊತ್ತು ರುದ್ರಮೌನವಾವರಿಸಿತು.

''ಹಿಂದಿನ ಬಾಡಿಗೆಯನ್ನು ಅವರು ಬಂದ ನಂತರವೇ ಪಡೆದುಕೊಳ್ಳಿರಿ. ಈ ತಿಂಗಳ ಬಾಡಿಗೆಗೆ ನನ್ನ ಬಳೆ ಬ್ಯಾಂಕಿನಲ್ಲಿ ಅಡವಿಟ್ಟು ತಂದುಕೊಡುವೆ''ಎಂದಳು ಗೌರೀಮಾ. ಮುಖಬಿಂಬ ಬೆಂಕಿಯಲ್ಲಿಟ್ಟು ಬಾಡಿಸಿದಂತೆ ಕಂದಿಹೋಗಿತ್ತು. ಅವನು ನೋಡಲಾರದೆ ನೋಡಿ 'ಆಗಲಿ' ಎಂದಷ್ಟು ನುಡಿದು ಹೊರಟು ಹೋದ. ಹಿಂದಿಲಿಂದ ನಯನದ್ವಯಗಳು ಅವನ ನಿರ್ಗಮನವನ್ನು ದೈನ್ಯತೆಯಿಂದ ನೋಡುತ್ತಿದ್ದಂತೆ ಜೋಡಿಕೈಗಳು ಯಾಂತ್ರಿಕವಾಗಿ ಕದವನ್ನು ಮುಚ್ಚಿದುವು. ಜೀವ ಸೋತು ಹೋದಂತೆ ನಿಧಾನವಾಗಿ ಒಳಗೈ ತಂದಿತು, ಶರೀರ.

## ೨೩

ಶ್ಯಾಮಲಾ ತಂಗಿಯನ್ನು ವ್ಹೀಲ್ ಚೇರಿನಲ್ಲಿ ಪರೀಕ್ಷಾ ಕೇಂದ್ರಕ್ಕೆ ಬಿಟ್ಟು ಆಫೀಸ್ ಸೇರುವಾಗ ತುಸು ಹೊತ್ತೇ ಆಗಿತ್ತು. ಪಂಡರೀ ಆಗಲೇ ಬಾಸ್ ಕೊಠಡಿಗೆ ಪತ್ರಗಳಿಗೆ

ಉತ್ತರ ಬರೆಯಲು ಹೋಗಿದ್ದಾಳೆ. ಶ್ಯಾಮಲಾ ಶಾರದಾ ಕರ್ವೆಯೊಂದಿಗೆ ಕೆಲಸ ಆರಂಭಿಸಿದಳು.

ಶಾರದ ಮಾರಾಟವಾದ ವಸ್ತುಗಳಿಗೆ ಬಿಲ್ ತಯಾರಿಸುತ್ತ ಮೆಲ್ಲನೆ ಪಿಸುಗುಟ್ಟಿದಳು ''ನೀನು ಬಾಸ್‌ನೊಂದಿಗೆ ವ್ಯವಹರಿಸುವಾಗ ಸ್ವಲ್ಪ ಎಚ್ಚರದಿಂದಿರು!''

''ಏನು?'' ಎಂಬಂತೆ ಅವಳನ್ನೇ ನಿಟ್ಟಿಸಿತು ಇವಳ ನೋಟ.

''ಬಾಸ್ ಪಂಜಾಬಿ. ತನ್ನ ಧರ್ಮಪತ್ನಿಯನ್ನು ಕೊಲೆಗೈದು ಮತ್ತೊಬ್ಬಳಿಗೆ ಅವಕಾಶ ಕೊಟ್ಟಿದ್ದಾನೆ ಪಂಜಾಬಿನಲ್ಲಿ. ಇಲ್ಲೊಬ್ಬಳು ಜೊತೆಗಾತಿ. ಅವಳಿಗೆ ಅವಳಿ ಮಕ್ಕಳಿವೆ. ಮೇಲಾಗಿ ಹೋಟೆಲ್ ಮಾಣಿಕ್ಯದಲ್ಲಿ ನೈಟ್ ಕ್ಲಬ್ಬಿಗೆ ದಿನವೂ ಹೋಗುತ್ತಾನೆ!''

''ನಿಜವಾಗಿ?''

''ಹೋಟೆಲ್ ಮಾಣಿಕ್ಯದ ಹಿಂದುಗಡೆಯೇ ನಮ್ಮ ಮನೆ. ಇವನ ಕಾರನ್ನು ನಾನು ದಿನವೂ ಅಲ್ಲಿ ನೋಡುವೆ. ನನ್ನನ್ನು ಎರಡು ಮೂರು ಸಲ ಡ್ರಾಪ್ ಕೊಡುವುದಾಗಿ ಕರೆದ. ನಾನು ಹೋಗಲಿಲ್ಲ.''

ಆ ಕೂಡಲೇ ಮೈ ಜಗ್ಗನೆ ಬೆವತು ಹೋಯಿತು. ಅಂತರತರವೆಲ್ಲಾ ಕಂಪಾಯಮಾನ....ಗಾಲಿಗೊಡ್ಡಿದ್ದ ಸೊಡರಿನಂತೆ ತಲ್ಲಣಿಸಿತು ಜೀವ....ನನಗೆ ತಿಳಿಯದೆ ಎಂತಹ ಘೋರ ನರಕಕ್ಕೆ ಹಾರುತಿದ್ದೆ ? ಇಂದು ಸಹಾ ಅವರ ಕೊಠಡಿಗೆ ಹೋಗುವಳೇ. ದೇವರೇ ತಪ್ಪಿಸಿದ....

ಎದೆಯ ಹಕ್ಕಿ ದೇವರನ್ನು ನೆನೆಯಿತು....ಮತ್ತೆ ಮತ್ತೆ ಪುನಃ ಪುನಃ ನೆನೆಯಿತು. ಶಾರದೆಗೂ ಮನದಲ್ಲೇ ನಮಿಸಿದಳು.

ಅದೇಕೋ ಕೈ ಕಾಲುಗಳಲ್ಲಿ ಬಲವೇ ಇಲ್ಲ. ನಸು ಕಂಪನದ ಅಲೆ ಮೈ ತುಂಬಾ ಹರಿದಾಡುತ್ತಿದೆ. ಹೇಗೆ ಹೇಗೋ ಮಧ್ಯಾಹ್ನದವರೆಗೂ ಕೆಲಸ ಸಾಗಿತು. ಅನಂತರ ವಿಪರೀತ ಜ್ವರದ ಕಾವು ಏರತೊಡಗಿತು ಮೈಯಲ್ಲಿ. ಶಾರದಾ ಕರ್ವೆ ಗೆಳತಿಯ ಸ್ಥಿತಿಯನ್ನು ನೋಡಿ ''ನೀನು ಮನೆಗೆ ಹೋಗಿ ಸುಧಾರಿಸಿಕೊ ಒಂದು ವಾರಕ್ಕೆ ರಜೆಹಾಕು'' ಎಂದು ತಾನೇ ರಜೆಗಾಗಿ ಬರೆದು ಅವಳಿಂದ ಸಹಿ ಹಾಕಿಸಿದಳು.

ಶಾರದಾ ಕರ್ವೆ ರಜೆಗಾಗಿ ಬರೆದ ಕಾಗದವನ್ನು ಬಾಸ್ ಮುಂದೆ ಇಟ್ಟು ''ಶ್ಯಾಮಲೆಗೆ ವಿಪರೀತ ಜ್ವರ ಬಂದಿದೆ. ಅವಳನ್ನು ಮನೆಗೆ ಕಳುಹಿಸುವೆ'' ಎಂದಳು.

ಡಾ|| ಫರೀದ್ ಸ್ವಲ್ಪಹೊತ್ತು ಯೋಚಿಸಿ ''ನನ್ನ ಕಾರಿನಲ್ಲೇ ಕಳಿಸಿರಿ'' ಎಂದ.

"ಬೇಡ ಸರ್! ಆಟೋದಲ್ಲಿ ಹೋಗುತ್ತಾಳೆ."

"Poor girl!"

* * *

ಶಕೀಲೆಯ ಲೇಖನವಾಹೀ

ಈ ಜಗತ್ತಿನಲ್ಲಿ ನಮ್ಮ ಬದುಕಿನಗತಿಗೆ ಎಷ್ಟೆಷ್ಟು ಕಟ್ಟುಪಾಡೋ ಅಷ್ಟಷ್ಟೇ ಕೆಡುತ್ತಿದೆ ಬಾಳು ಬದುಕು. ಈ ಬದುಕಿನ ಗತಿಗೆ ಯಾರು ಹೊಣೆ? ಎನಿಸುತ್ತದೆ ಆದರೆ, ನಮ್ಮ ಇಚ್ಛಾನುಸಾರವಾಗಿ ಯಾವುದೂ ನಡೆಯುವುದಿಲ್ಲ ಅದೇ ವಿಶೇಷ. ನಾವು ಎಷ್ಟೆಷ್ಟು ಪ್ರಯತ್ನಿಸಿದರೂ ಸರಿದಾರಿಗೆ ಹಚ್ಚಲು ಸಾಧ್ಯವಾಗುತ್ತಿಲ್ಲವೇಕೆ ? ನಮ್ಮ ನಡಾವಳಿ ತಪ್ಪು ಎಂಬುದು ಎಲ್ಲರಿಗೂ ಗೊತ್ತು. ಆದರೂ ವಾಮಮಾರ್ಗ ಹಿಡಿಯುವುದರ ಅರ್ಥವೇನು ? ಹೊಣೆಗಾರಿಕೆ ಇದ್ದು, ರೂಢಿಸುವ ಶಕ್ತಿಯಿದ್ದು ಜಗತ್ತು ಹೀಗೇಕೆ ನಡೆಯುತ್ತಿದೆ ? ಇದರ ಹಿಂದೆ ಯಾವ ಶಕ್ತಿಯಿದೆ ?

ನಾವು ಆಗಾಗ ಕೇಳುವ ಘೋರಾತಿಘೋರ ಪೆಣ್ಗೊಲೆಗಳಿಗೆ ಏನೆನ್ನೋಣ ? ಕೈಯ್ಯಾರೆ ಕೊಂದು ಹೊಟ್ಟೆನೋವಿಗಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ ಎಂಬ ಪ್ರಚಾರ? ಪತ್ರಿಕೆಗಳಲ್ಲಿ ನಾವು ದಿನವೂ ಓದುವ ಭೀಕರ ಸುದ್ದಿಗೆ ಸಮಾಜ ಮತ್ತು ಸರಕಾರ ಕಿವುಡು-ಕುರುಡು ಆಗಿರುವುದರ ಅರ್ಥವೇನು ? ಕೇವಲ ಹಣಕಾಸು ಜೀವಕ್ಕಿಂತ ಅಮೂಲ್ಯವೇ ? ನಮ್ಮ ದೇಶದಲ್ಲಿ ಹೆಣ್ಣುಗಳೆಂದರೆ ಕಾಲ್ಚೆಂಡುಗಳು! ಹೇಗೆಂದರೆ ಹಾಗೆ ಒದೆಯಬಹುದು. ಪಶುಗಳಂತೆ ಮಾರಾಟ ಮಾಡಬಹುದು. ಅವರ ಜೀವನ ಗತಿಗೆ ಒಂದು ರೀತಿ ನೀತಿಗಳಿಲ್ಲ. ಕೇವಲ ಅಡ್ಡಾದಿಡ್ಡಿ ಬದುಕು. ನರಳೀ ನರಳಿ ವಿಧಿ ಕೈ ಬೀಸಿ ಕರೆದಾಗ ನೇಪಥ್ಯಕ್ಕೆ ಹಾರಿದರೆ ಮುಗಿಯಿತು.

ಇಂದಿನ 'ಸಮಾಜವಾದಿ ಮಹಿಳೆ' ಪುರುಷ ಸರಿಸಮಾನತೆ ಹಾಗೂ ಬಂಧವಿಮೋಚನೆ ಪಡೆದುದಾದರೆ ವರ್ಗರಹಿತವಾದ ಬಂಡವಾಳ ಶಾಹೀ ವ್ಯವಸ್ಥೆಯಲ್ಲಿ ಶೋಷಣೆಗೊಳಗಾದ ಮಹಿಳೆಯರಿಗಾಗಿ ವರ್ಗ ಹೋರಾಟದಲ್ಲಿ ಪಾಲ್ಗೊಳ್ಳಲು ಸಾಧ್ಯ. ಆದರೆ, ನಮ್ಮಲ್ಲಿ ಹೆಣ್ಣು ಅನುಭವಿಸುವ ಕ್ರೂರ ಶಿಕ್ಷೆ ಎಂದರೆ ಒಮ್ಮೆ ಅವಳು ಬಿದ್ದ ಕಂದಕದಿಂದ ಮೇಲೆದ್ದು ಬರಲು ಸಾಧ್ಯವೇ ಇಲ್ಲ. ಆದರೂ, ಕೇಳು, ಇಂದಿನ ಪ್ರಗತಿ ಪರ ಹುಡುಗಿಯರು ಮುಂದೆ ನಿಂತು ಕಂದಕದಿಂದ ಮೇಲೆದ್ದು ಬರಲು ಏಣಿಗಳನ್ನು ನಿರ್ಮಿಸಲು ಒಗ್ಗಟ್ಟಿನಿಂದ ಹೋರಾಡಬೇಕು. ಧಾರ್ಮಿಕವಾಗಿಯೇ ಹೆಣ್ಣನ್ನು ಬಂಧಿಸಿ ದೇವದಾಸಿಯರನ್ನಾಗಿ ಮಾಡುತ್ತಾರೆ. ಅವಳ ಮೇಲೆ ಸಾಮೂಹಿಕ ಅತ್ಯಾಚಾರ ನಡೆಯುತ್ತದೆ.

ಲೆನಿನ್ ತತ್ವ ತೆಗೆದುಕೊ. ಲೆನಿನ್ ಮಹಾಶಯ ಆದ್ಯತೆ ನೀಡಿದ್ದು ವ್ಯಕ್ತಿ ಸ್ವಾತಂತ್ರ್ಯಕ್ಕೆ. ನಮ್ಮಲ್ಲಿ ಸ್ತ್ರೀಗೆ ವ್ಯಕ್ತಿತ್ವವಿಲ್ಲವೆಂದೇ ವ್ಯಕ್ತಿ ಸ್ವಾತಂತ್ರ್ಯವಿಲ್ಲ. ಇದನ್ನೆಲ್ಲಾ ಸಹಿಸಿಕೊಂಡು ಬಂದಿರುವ ಸ್ತ್ರೀಜನಕ್ಕೆ ಶಹಭಾಸ್! ಎನ್ನಬೇಕೋ ಛೀಮಾರಿ ಹಾಕಬೇಕೋ ಅದನ್ನು ನಿರ್ಣಯಿಸುವುದು ಡಾಕ್ಟರೇಟ್ ಮಾಡಿದವರಿಗೂ ಅಸಾಧ್ಯ ಎನ್ನಿಸುತ್ತದೆ ನನಗೆ...

* * *

ವಾರದ ಗಾಲಿಯೊಂದು ಉರುಳಿ ಹೋಯಿತು.

ಶ್ಯಾಮಲಾ ಜ್ವರದಿಂದ ಮುಕ್ತಳಾಗಲಿಲ್ಲ. ಒಮ್ಮೆ ಜ್ವರ ಇಳಿದರೂ ಮತ್ತೆ ಮತ್ತೆ ಏರುತಿತ್ತು. ಕೈಯಲ್ಲಿ ಹಣವಿಲ್ಲ. ಬದುಕು-ಚಿಕಿತ್ಸೆ ಬರಿಗೈಯಲ್ಲಿ ನಡೆಸುವುದೆಂದರೆ ಸಾಮಾನ್ಯವೇ ? ತಾನು ಅಷ್ಟಿಷ್ಟು ಉಳಿಸಿದ್ದ ಹಣದ ಥೈಲಿ ಕರಗಿತು ಮುಂದೇನು ?

ಪ್ರಶ್ನೆ ಹಿರಿದು ತಿನ್ನುತ್ತಿದೆ. ಕಂಬನಿಯಿಂದ ತಲೆದಿಂಬು ತೊಯ್ದರೂ ಸಮಸ್ಯೆ ಬಗೆ ಹರಿಯಲಿಲ್ಲ. ಚಿತ್ತಭಿತ್ತಿಯಲ್ಲಿ ಉತ್ತಾಲ ನರ್ತನಗೈವ ಘೋರ್ಪಡೆ ಮತ್ತು ಡಾ|| ಫರೀದ್ ಮನಃಪ್ರಾಣಕ್ಕೆ ಕಿಚ್ಚಿಟ್ಟಿದ್ದಾರೆ. ತಂದೆ ಮತ್ತು ಆತನ ದುರ್ವ್ಯವಹಾರ ಬಾಳಿಗೆ ಕಿಚ್ಚಿಟ್ಟಿದೆ. ಮುಂದೆಯಾದರೂ ಈ ಸಂಸಾರ ರಥ ಸರಿದಾರಿಗೆ ಸೇರುತ್ತೋ ಇಲ್ಲವೋ ನಂಬುವುದು ಕಷ್ಟವೇ.... ಚಿಂತೆಯಾಳಕ್ಕೆ ಮುಳುಗಿದ ಶ್ಯಾಮಲಾ ಮಾಡಿನ ಹೆಂಚುಗಳನ್ನು ಎಣಿಸುವ ಮಹಾಕಾರ್ಯದಲ್ಲಿ ತೊಡಗಿದ್ದಾಗಲೇ ವ್ಹೀಲ್ ಚೇರಿನಲ್ಲಿ ಕುಳಿತು ಬಾಗಿಲಲ್ಲಿ ಹಣಕಿದ ಶಾಂತಲಾ ನುಡಿದಳು,

"ಅಕ್ಕಾ ವ್ಹೀಲ್ ಚೇರ್ ರಸ್ತೆಗೆ ದಾಟಿಸಲು ಅಮ್ಮ ಇಲ್ಲ."

"ಎಲ್ಲಿಗೆ ಹೋಗಿದ್ದಾರೆ ?"

"ಗೊತ್ತಿಲ್ಲ."

ಅವಳು ಆಗಲೇ ಐದು ದಿನಗಳು ಪರೀಕ್ಷೆಗೆ ಹೋಗಿ ಬಂದಿದ್ದಾಳೆ. ಇಂದಿನ ಪರೀಕ್ಷೆಯೇ ಕೊನೆಯದು. ಅಂತಲೇ ಅವಳಿಗೆ ಉತ್ಸಾಹವೇ ಉತ್ಸಾಹ. ಚೀಲದಲ್ಲಿ ಪುಸ್ತಕ, ಪೆನ್ಸಿಲ್ ಬರೆಯುವ ಪ್ಯಾಡ್ ತಾನೇ ಜೋಡಿಸಿಟ್ಟುಕೊಂಡಿದ್ದಾಳೆ.

"ಏನಾದರೂ ಮರೆತೆಯಾ ನೋಡಿಕೋ ಶಾಂತಿ!"

"ಇಲ್ಲಕ್ಕಾ! ಆಗಲೇ ಎರಡು ಬಾರಿ ನೋಡಿಕೊಂಡಿರುವೆ."

ಶ್ಯಾಮಲಾ ಅವಳನ್ನು ರಸ್ತೆಗೆ ದಾಟಿಸಿ ಬರಲು ಹೋದರೆ ತಲೆ ತಿರುಗಿ ಎಲ್ಲಿ ಕುಸಿಯುವೆನೋ ಎನಿಸುವಷ್ಟು ನಿಶ್ಶಕ್ತತೆ. ಮೆಲ್ಲಗೆ ತೂರಾಡುತ್ತಲೇ ಅವಳನ್ನು ರಸ್ತೆಗೆ ದಾಟಿಸಿ ತಲೆಯ ಮೇಲೆ ಕೈಯಿಟ್ಟು "ಮೆಲ್ಲಗೆ ಹೋಗು ಶಾಂತೀ" ಎಂದಳು.

"ಚೀರಿಯೋ ಶ್ಯಾಂ!"

"ಚೀರಿಯೋ ಶಾಂತಿ! Wish you best of luck!"

"Thank you!"

ಅವಳು ಕಣ್ಮರೆಯಾಗುವುದನ್ನು ನಿಂತುನೋಡಿ ಹಿಂತಿರುಗುತಿದ್ದಾಗಲೇ ಗೌರೀಮಾ ಹಿಂದುರುಗಿ ಬಂದಳು.

"ಎಲ್ಲಿಗೆ ಹೋಗಿದ್ದಿರಿ ಅಮ್ಮಾ ?"

ಗೌರೀಮಾ ಒಂದೆರಡು ಗಳಿಗೆ ಯೋಚಿಸಿ ನುಡಿದಳು "ನಿನಗೆ ತಿಳಿಸಬಾರದು ಎಂದುಕೊಂಡಿದ್ದೆ. ನೀನು ನೋಡಿದ ಮೇಲೆ ಹೇಳದಿನ್ನೇನು ? ಬಿಂದಿಗೆಯನ್ನು ಗಿರವಿ ಅಂಗಡಿಯಲ್ಲಿಟ್ಟು ನೂರು ರೂಪಾಯಿ ತಂದೆ. ಹೇಗಾದರೂ ಕಾಲಹರಣ ಮಾಡಬೇಕಲ್ಲ ಮಗಳೇ!"

ಇಬ್ಬರ ಹೃದಯಗಳೂ ಅತೀ ಖಿನ್ನತೆಯಿಂದ ಉಸಿರಾಡಿದವು.

* * *

ಮಧ್ಯಾಹ್ನ ಎರಡು ಗಂಟೆಯ ಸಮಯ. ನೆತ್ತಿಯ ಮೇಲೆ ರಣ ರಣಿಸುವ ಬಿಸಿಲು.

ಇನ್ನೇನು ಇದೀಗ ಶಾಂತಿ ಮನೆಗೆ ಮರಳುತ್ತಾಳೆಂದು ಮುಂಬಾಗಿಲಿಗೆ ಹೋದ ಗೌರೀಮಾ ಕಣ್ಣಿಂದ ಕಂಡದ್ದೇನು ? ಯಾರೊಂದಿಗೋ ಪಾಂಚಾಲಿ ದೌಡಾಯಿಸಿ ಬರುತಿದ್ದಾಳೆ! ಮುಖಬಿಂಬದಲ್ಲಿ ಭಯ ಭೀತಿಯ ಗಾವರ!

"ಅಮ್ಮಾ! ನಿಮ್ಮ ಮಗುವಿಗೆ ಕಾರು ಡಿಕ್ಕಿ ಹೊಡೆದು ತುಂಬ ಪೆಟ್ಟಾಗಿದೆ ಬೇಗ ಬನ್ನಿ!"

ಬಂದಾತ ಘೋರ ಸುದ್ದಿಯನ್ನು ಒದರಿ ಬಂದ ನೇರಕ್ಕೆ ಹಿಂದಿರುಗಿ ಓಡಿದ....

ಪಾಂಚಾಲಿಯನ್ನು ಶ್ಯಾಮಲೆಯೊಂದಿಗೆ ಇರ ಹೇಳಿ ಗೌರೀಮಾ ಓಡಿಯೇ ಓಡಿದಳು....ಈಗಲೀಗ ನನ್ನ ಪ್ರಾಣವೇಕೆ ಹಾರಬಾರದು ಎಂದು ಚೀರಿಟ್ಟಿತು ಹೃದಯ. ಡಿಕ್ಕಿ ಹೊಡೆದ ಕಾರು ರಸ್ತೆಯ ಬದಿಯಲ್ಲಿತ್ತು.

ಮಧ್ಯಾಹ್ನದ ವಿಶ್ರಾಂತಿಗಾಗಿ ಎಲ್ಲಾ ಚಿಕಿತ್ಸಾಲಯಗಳೂ ಕದ ಮುಚ್ಚಿಕೊಳ್ಳುವುದು ಗೊತ್ತು. ಮಗುವಿಗೆ ಪ್ರಜ್ಞೆಯೇ ಇಲ್ಲ. ಗಾಡಿ-ಪುಸ್ತಕ ಎಲ್ಲಾ ಚೆಲ್ಲಾಪಿಲ್ಲಿ. ಆಟೋರಿಕ್ಷಾದಲ್ಲಿ ಶಾಂತಿಯನ್ನು ಮಲಗಿಸಿಕೊಂಡು ಆಸ್ಪತ್ರೆಯ ತುರ್ತು ಚಿಕಿತ್ಸಾ ಘಟಕಕ್ಕೇ ಕರೆದೊಯ್ದಳು ಗೌರೀಮಾ. ದೇಹದ ಕೆಳಭಾಗ ಹೆಚ್ಚು ಪೆಟ್ಟಾಗಿದೆ. ಮುರಿದ ಕಾಲು, ಹರಿದ ಹೊಟ್ಟೆ, ಸೋರುವ ರಕ್ತ....ದೃಶ್ಯ ಘೋರಾತಿಘೋರ!

ಡಾಕ್ಟರುಗಳು ಎಲ್ಲೆಲ್ಲಿ ವಿಶ್ರಾಂತಿ-ಹರಟೆಗಳಲ್ಲಿ ಕಾಲಹರಣ ಮಾಡುತ್ತಿದ್ದರೋ ಅಲ್ಲಿಗೇ ಹೋಯಿತು ತುರ್ತುಕರೆ! ಆದರೂ ಐಷಾರಾಮದ ಬದುಕಿಗೆ ತುರ್ತುಕರೆ ಮುಟ್ಟುವುದೂ ನಿಧಾನವೇ. ಡಾಕ್ಟರುಗಳು ಮಂದಗತಿಯಲ್ಲಿ ಬಂದರಲ್ಲದೆ ಕುಂಟು ಮಗು ಎಂಬ ತಾತ್ಸಾರ ಬೇರೆ. ಚಿಕಿತ್ಸೆ ಒಂದೆರಡು ಗಂಟೆಗಳನ್ನೇ ತೆಗೆದುಕೊಂಡಿತು. ಅನಂತರ ತಾಯಿಗೆ ಕರೆ.

ಗೌರೀಮಾ ಕಂಬನಿಯ ಕಾದಂಬಿನಿಯಾಗಿ ಒಳ ಹೋದಾಗ ತಡೆ ತಡೆದು ಉಸಿರಾಡುತಿತ್ತು ಎಳೆಯ ಜೀವ. ನೆತ್ತರು ಬಸಿದು ಬಿಳಿಚಿಕೊಂಡ ಮುಖವನ್ನು ನೋಡಿದರೆ ಒಡಲಿಗೆ ಚೂರಿ ಹೊಕ್ಕಿದಷ್ಟು ಸಂಕಟ-ಉರಿ. ತಾಳಲಾರದ ಉರಿ-ಸಂಕಟ.

ಪಾಂಚಾಲಿ ಮತ್ತು ಅವಳ ತಾಯಿಯೊಂದಿಗೆ ಆಸ್ಪತ್ರೆಗೆ ಧಾವಿಸಿ ಬಂದಿದ್ದಾಳೆ ಶ್ಯಾಮಲಾ. ನೋಡೆ, ಎಂತಹ ಅನಾಹುತ! ಸ್ವೀಟ್ ಹಾರ್ಟ್ ಸಾವಿನ ಉಡಿಯಲ್ಲಿ! ಶ್ಯಾಮಲಾ ಆ ಕ್ಷಣವೇ ಭೂಶಾಯಿಯಾದಳು! ಮೈಯಲ್ಲಿ ಜ್ವರದ ಕಾವು. ಒಡಲಲ್ಲಿ ಸಂಕಟ. ಮನದಲ್ಲಿ ಅಳಲು. ಸಹಿಸಲಾರದ ದುಃಖ.

ಡಾಕ್ಟರುಗಳು ಭರವಸೆಯನ್ನೇನೂ ಕೊಡಲಿಲ್ಲ. ತುರ್ತು ಚಿಕಿತ್ಸಾ ಘಟಕದಿಂದ ಮಗುವನ್ನು ಹೊರಗೆ ಕಳುಹಿಸಲೂ ಇಲ್ಲ. ಕ್ಷಣಕ್ಷಣವನ್ನೂ ಮೃತ್ಯುಪಾಶದಲ್ಲಿಯೇ ಕಳೆಯುತ್ತಿದ್ದಾಳೆ ಶಾಂತಲಾ.

ಹಗಲು ಉರುಳಿ ಮುಸ್ಸಂಜೆ ಕವಿಯತೊಡಗಿತು.

ಪಾಂಚಾಲಿ ಬಿತ್ತರಿಸಿದಳು "ಫೋರ್ಪಡೆ ಕಾರನ್ನು ಕಂಡೊಡನೆಯೇ ಏನಾಯಿತೋ ಅವಳಿಗೆ ವ್ಹೀಲ್ ಚೇರ್ ಅಡ್ಡ ತಿರುಗಿಸಿದಳು!! ಪೆಟ್ಟಾದ ಕೂಡಲೇ ಅವನು ಕಾರು ಬಿಟ್ಟು ಹೊರಟುಹೋದ!"

ಆ ಸುದ್ದಿ ತಿಳಿದು ಎಲ್ಲರ ಮನಃಪ್ರಾಣಗಳೂ ಸ್ತಬ್ಧವಾದುವು.

* * *

"ಅಮ್ಮಾ...! ಎಂದಳು ನರಳು ದನಿಯಲ್ಲಿ ಶಾಂತಲಾ. ಕಣ್ಣುಗಳನ್ನು ಬಿರಿಬಿರಿ ಬಿಟ್ಟು ನೋಡುತ್ತ.

ಆ ಕೂಡಲೇ ಎಲ್ಲರೂ ಸುತ್ತುವರಿದರು. ಶಾಂತಲಾ ಸುತ್ತಲೂ ನೋಡಿಯೇ ನೋಡಿದಳು. ಅಕ್ಕಪಕ್ಕದಲ್ಲಿ ಶ್ಯಾಮಲಾ, ಪಾಂಚಾಲಿ, ಅಮ್ಮ ಆಂಟಿ ಎಲ್ಲರಿದ್ದಾರೆ... ಅರಳುಗಣ್ಣಿಗೆ ಸಂತೃಪ್ತಿ ಮೂಡಿಸುವಷ್ಟು ಹತ್ತಿರದಲ್ಲಿ ಆತ್ಮೀಯರು. ಬಲಗೈಗೆ ಡ್ರಿಪ್ ಕೊಟ್ಟದ್ದುದರಿಂದ ಅಲುಗಿಸುವಂತಿಲ್ಲ. ಎಡಗೈಯಲ್ಲಿ ಪಾಂಚಾಲಿ, ಶ್ಯಾಮಲೆಯನ್ನು

ತಬ್ಬಿ ಹಿಡಿದು, ಮತ್ತೊಮ್ಮೆ ಸುತ್ತಲೂ ನೋಡಿ ''ಅಮ್ಮಾ ಶರತ್ ಎಲ್ಲಿ ಎಂದು ಕೇಳಿದಳು'' ಶಾಂತಿ.

''ಈಗ ಬರುತ್ತಾನೆ.''

''ಕರೆಯಿರಿ. ನಾನು ನೋಡಬೇಕು.''

ಆದರೆ, ಅವನಿನ್ನೂ ಊರಿಗೆ ಮರಳಿರಲಿಲ್ಲವಾದುದರಿಂದ ಎಲ್ಲರ ಮುಖವೂ ಖಿನ್ನ. ಶಾಂತಲಾ ನೋವು ನುಂಗಿ ನುಡಿದಳು,

''ಪಾಂಚಾಲಿ! ಇಲ್ಲಿ ಕೇಳು, ನನ್ನ ಜೀವಕ್ಕಾಗಿ ನಾನು ಕೊರಗುವುದಿಲ್ಲ. ಕಾಲಿಲ್ಲದ ಬದುಕು ಇದ್ದರೂ ಒಂದೇ...ಇಲ್ಲದ್ದರೂ ಒಂದೇ. ಅಮ್ಮ-ಅಕ್ಕ ಮತ್ತು ನಿನಗಾಗಿ ಮರುಕ...ನಾನು ಸತ್ತರೆ ಅಳಬೇಡ. ಆಯಿತೇ?...ನನ್ನ ವ್ಹೀಲ್ ಚೇರ್ ಏನಾಯ್ತು?... ಅದನ್ನು ಯಾವುದಾದರೂ ಕುಂಟು ಮಗುವಿಗೆ ಕೊಡು, ನೀನು ಕರಡಿಮರಿ ತೆಗೆದುಕೊ...ಅಕ್ಕನಿಗೆ ನನ್ನ ಶರ್ಮಿಳಾ...ಅದೇ ಅವಳಿಗೆ ಸ್ವೀಟ್ ಪೆಪ್ಪರ್‌ಮೆಂಟ್! ನನ್ನ ಅಮ್ಮನಿಗೆ...ನನ್ನ ಕರವಸ್ತ್ರಗಳು...ನನ್ನ ಪುಸ್ತಕ ಪೆನ್ಸಿಲ್‌ಗಳನ್ನು ಶಾಲೆಗೆ ಕೊಡು...ಓ! ಶರತ್‌ಗೆ ಏನೂ ಉಳಿಯಲಿಲ್ಲವಲ್ಲಾ...? ಅವನಿಗೂ...ಇದೆ, ಇದೆ...ಒಂದು ಪೆನ್ನಿದೆ...ನನ್ನ ಪೆನ್ನು ಅವನಿಗೆ...ಅವನನ್ನು ನೋಡಬೇಕಾಗಿತ್ತು... ಎಲ್ಲಿದ್ದಾನೆ ಅವನು? ಕರೆಯಿರಿ! ಎಲ್ಲರೂ ಹತ್ತಿರ ಬನ್ನಿ...ಇನ್ನೂ ಹತ್ತಿರ ಬನ್ನಿ. ಕಣ್ಣೇ ಸರಿಯಾಗಿ ಕಾಣಿಸುತ್ತಿಲ್ಲ. ಅಮ್ಮಾ ಎಲ್ಲಿದ್ದೀಯಮ್ಮಾ? ನೀರು...ನೀರು!''

''ಇಲ್ಲಿರುವೆ ಮಗಳೇ! ಶಾಂತೀ ನೀರು ಕೊಡುವೆ ಬಾಯಿ ತೆರೆ...''

ಕಂಬನಿಗರೆಯುತ್ತಲೇ ನೀರು ಕುಡಿಸಿದಳು ತಾಯಿ.

ಎರಡು ಗುಟುಕು ನೀರು ಕುಡಿದನಂತರ ''ನಾ...ಯಾರೂ ಕಾಣಿಸುತ್ತಿಲ್ಲ... ಎಲ್ಲಾರೂ ಹತ್ತಿರ ಬನ್ನಿ. ಆಂಟೀ... ಪಾಂಚಾಲಿ... ಅಮ್ಮ... ಅಕ್ಕ... ಅಕ್ಕಾ!''

ಆ ಕೂಡಲೇ ಪ್ರಾಣವಾಯು ಸಗ್ಗಾಭಿಮುಖವಾಗಿ ಹೊರಟುಹೋಯಿತು. ಒಂದೇ ಕ್ಷಣದಲ್ಲಿ ಕತ್ತಲೆ-ಕಗ್ಗತ್ತಲೆ.

* * *

ಮರುದಿನ ಸ್ಮಶಾನ ಕೈಂಕರ್ಯಕ್ಕೆ ಹೋಗಲಿಲ್ಲ ಶ್ಯಾಮಲಾ. ಮನಃಸ್ವಾಸ್ಥ್ಯ ಕಳೆದುಕೊಂಡ ಅವಳು ಸಂಪೂರ್ಣ ಹುಚ್ಚಿಯೇ ಆಗಿದ್ದಾಳೆ.

ಜ್ವರದ ಕಾವು ಇಳಿದಿರಲಿಲ್ಲ. ಮನಃಪ್ರಾಣಗಳ ಪರಿತಾಪ ಹರಿದಿರಲಿಲ್ಲ. ಅಕ್ಕಪಕ್ಕದ ಮನೆಯವರೂ ತನ್ನ ಆತ್ಮೀಯ ಗೆಳತಿಯರೂ ಸುತ್ತುವರಿದು ಸಾಂತ್ವನ ನೀಡುತ್ತಿದ್ದಾರೆ.

"ನಾನೇ ವ್ಹೀಲ್ ಚೇರ್ ಮಾಡಿಸಿಕೊಟ್ಟೆ. ನಾನೇ ಶಾಲೆಗೆ ಕಳುಹಿಸಿದೆ..." ಒಡಲ ಬಳ್ಳಿ ಚೀರುತ್ತಲಿತ್ತು. ಶ್ಯಾಮಲಾ ಮೌನ ಶಾಂತಿಯಲ್ಲಿ ಮುಳುಗಿದ್ದಾಳೆ. ಹೊರ ಜಗತ್ತಿನ ಪರಿವೆಯೇ ಇಲ್ಲ. ದುಃಖವೂ ಇಲ್ಲ...ಪರಿತಾಪವೂ ಇಲ್ಲ. ಶಾಂತಿ. ಶಾಂತಿ. ಶಾಂತಿ. ಶ್ಯಾಂತಿಃ.

ಯಾವ ಗಳಿಗೆಯಲ್ಲಿ ಅವಳ ಪ್ರಾಣ ಹೋಯಿತೋ, ಮೈ ಯಾವಾಗ ತಣ್ಣಗಾಯಿತೋ ತಿಳಿಯದು ಬಳಿಯಲ್ಲಿದ್ದವರಿಗೆ. ಅರೆದೆರೆದ ಕಣ್ಣುಗಳು ಇದ್ದಂತೆಯೇ ಇವೆ.

ಶರತ್ ಗಂಟು ಮೂಟೆಯೊಡನೆ ಬಂದಿಳಿದ. ಕ್ರಿಕೆಟ್ ಮ್ಯಾಚ್ ಗೆದ್ದ ಉತ್ಸಾಹದ ಹೊನಲು ದೇಹದಾದ್ಯಂತ ಹರಿದಾಡಿ ನಿಗಿನಿಗಿ ನಲಿಯುವ ಮನಸ್ಸು...

ಆದರೆ...? ಈ ಜೀವನ ಯಾವತ್ತೂ ಆದರೆಮಯವೇ.

**ಮಂಗಳಂ**

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧. ಜೀವನಗಂಗಾ
೨. ಡಾ|| ಅಘೋರ
೩. ಡಾ|| ಕಮಲೇಶ್
೪. ವಂದೇ ಮಾತರಂ
೫. ಅನಂತಾನಂತದೆಡೆಗೆ
೬. ಮನೋನ್ಮಣಿ
೭. ಸಂತ್ರಾಸಿನಿ
೮. ಆಸೆಯ ಸುಳಿಯಲ್ಲಿ
೯. ಪದ್ಮಾಲಯ
೧೦. ಶ್ರದ್ಧಾಲಯ
೧೧. ಕಮಲಾನಿ ಕಥಾ

(ಕಥಾ ಸಂಕಲನ)

೧೨. ಬಹುರತ್ನಾವಸುಂಧರಾ
೧೩. ರತ್ನಗರ್ಭಾವಸುಂಧರಾ
೧೪. ಸುಧಾಮಣಿ
೧೫. ರಮಣೀಮಣಿ
೧೬. ಲಿಯೋನಾ
೧೭. ಶ್ರೀಮುಖಿ
೧೮. ಶ್ರೀಹರ್ಷಲಾ
೧೯. ವೈಶಾಖೀಪರ್ವ
೨೦. ಫಾಲ್ಗುಣೀಪರ್ವ
೨೧. ಮಣಿಮೇಖಲಾ
೨೨. ಮಣಿಕರ್ಣಿಕಾ

(ಕವಿತಾ ಸಂಕಲನ)

೨೩. ಪೂಜಾವಸಾನ ಸಮಯೇ....!
೨೪. ಧ್ಯಾನಾವಸಾನ ಸಮಯೇ....!
೨೫. ಗಗನ ಕುಸುಮ
೨೬. ಜೀವನ ಕುಸುಮ
೨೭. ಚಂಪಕರಾಜಿ
೨೮. ಬಕುಳ ರಾಜಿ
೨೯. ಕಸ್ತೂರಿ ಮಾಲಿಕಾ
೩೦. ಮಂದಾರ ಮಾಲಿಕಾ
೩೧. ವಿಜಯ ಗಾಥಾ
೩೨. ಗಾನ ತೀರ್ಥ
೩೩. ನಾದ ಬಿಂದು
೩೪. ಕಾವ್ಯಾನಂದ ನಂದಿನಿ
೩೫. ಭಾವಾನಂದ ನಂದಿನಿ
೩೬. ಸಂಗೀತ ಪುಷ್ಪಾಂಜಲಿ
೩೭. ಆತ್ಮ ಗೀತಾಂಜಲಿ

(ಸಂಜೀವನ ಕಾವ್ಯ)

೩೮. ಮಂಗಳ ಭಾರತಿ
೩೯. ಕಲ್ಯಾಣ ಭಾರತಿ
೪೦. ಉತ್ತರೋತ್ತರಣ
೪೧. ರಾಗಾನುರಾಗಿಣಿ
೪೨. ಪ್ರಫುಲ್ಲ ಭಾರತ

(ಪೌರಾಣಿಕ ನಾಟಕ)

೪೩. ಪುಣ್ಯಾಭಿಸಾರ
೪೪. ಪುಣ್ಯಪಯೋನಿಧಿ

(ಸಾನೆಟ್‌ಗಳು)

೪೫. ತರಂಗಿಣಿ

(ಗದ್ಯಕಾವ್ಯ)

೪೬. ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೪೭. ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೮. ದೂರ ದೇಶದಲ್ಲಿ
೪೯. ಬೆಳದಿಂಗಳ ರಾತ್ರಿ
೫೦. ರಂಗನ ಸಾಹಸ
೫೧. ಓಹಿಯೋಜ ಸರೋವರ
೫೨. ಕೌಶಿಕನ ಗೊಂಬೆ
೫೩. ವಿಶೇಷ ಸುದ್ದಿ
೫೪. ಕಲ್ಯಾಣಿ ರಾಗಿಣಿ

(ಮಹಾಕಾವ್ಯ)

೫೫. ಶ್ರೀ ವಿವೇಕಾನಂದ ವಿಜಯಂ